ಆತ್ಮಾನಮೇವಾತ್ಮತಯಾವಿಜಾನತಾಂ
ತೇನೈವ ಜಾತಂ ನಿಖಿಲಂ ಪ್ರಪಂಚಿತಮ್ ।
ಜ್ಞಾನೇನ ಭೂಯೋಽಪಿ ಚ ತತ್ಪ್ರಲೀಯತೇ
ರಜ್ಜ್ವಾಮಹೇರ್ಭೋಗಭವಾಭವೌ ಯಥಾ ॥ ೨೫ ॥

ಪರಮಾತ್ಮನನ್ನು ಆತ್ಮರೂಪವಾಗಿ ತಿಳಿಯದವರಿಗೆ ಆ ಅಜ್ಞಾನದ ಕಾರಣದಿಂದಲೇ ಈ ನಾಮ-ರೂಪಾತ್ಮಕವಾದ ಅಖಿಲ ಜಗತ್ತಿನ ಉತ್ಪತ್ತಿಯ ಭ್ರಮೆ ಉಂಟಾಗುತ್ತದೆ. ಆದರೆ ಹಗ್ಗದಲ್ಲಿ ಉಂಟಾದ ಸರ್ಪದ ಭ್ರಮೆಯು ನಿವೃತ್ತವಾಗುತ್ತಲೇ ಸರ್ಪದ ಭಯ ಹೊರಟು ಹೋಗುವಂತೆ ಜ್ಞಾನ ಉಂಟಾಗುತ್ತಲೇ ಇದರ ಆತ್ಯಂತಿಕ ಪ್ರಳಯವಾಗಿ ಹೋಗುತ್ತದೆ. ॥ ೨೫ ॥

ಅಜ್ಞಾನಸಂಜ್ಞೌ ಭವಬಂಧಮೋಕ್ಷೌ
ದ್ವೌ ನಾಮ ನಾನ್ಯೌ ಸ್ತ ಋತಜ್ಞಭಾವಾತ್ ।
ಅಜಸ್ರಚಿತ್ಯಾತ್ಮನಿ ಕೇವಲೇ ಪರೇ
ವಿಚಾರ್ಯಮಾಣೇ ತರಣಾವಿವಾಹನೀ ॥ ೨೬ ॥

ಸಂಸಾರ ಸಂಬಂಧವಾದ ಬಂಧನ ಮತ್ತು ಅದರಿಂದ ಮೋಕ್ಷ ಇವೆರಡೂ ಅಜ್ಞಾನ ಕಲ್ಪಿತವೇ ಆಗಿವೆ. ವಾಸ್ತವವಾಗಿ ಇವೆರಡೂ ಅಜ್ಞಾನದ್ದೇ ಹೆಸರಾಗಿದೆ. ಇವುಗಳಿಗೆ ಸತ್ಯನೂ, ಜ್ಞಾನಸ್ವರೂಪನೂ ಆದ ಪರಮಾತ್ಮನಿಂದ ಭಿನ್ನವಾದ ಅಸ್ತಿತ್ವವೇ ಇರುವುದಿಲ್ಲ, ಸೂರ್ಯನಲ್ಲಿ ಹಗಲು-ಕತ್ತಲೆ ಎಂಬ ಭೇದವೇ ಇಲ್ಲದಿರುವಂತೇ ವಿಚಾರ ಮಾಡಿದಾಗ ಅಖಂಡ ಚಿತ್ಸ್ವರೂಪ, ಕೇವಲ ಶುದ್ಧ ಆತ್ಮತತ್ತ್ವದಲ್ಲಿ ಬಂಧನವಾಗಲೀ, ಮೋಕ್ಷವಾಗಲೀ ಇಲ್ಲ. ॥ ೨೬ ॥

ತ್ವಾಮಾತ್ಮಾನಂ ಪರಂ ಮತ್ವಾ ಪರಮಾತ್ಮಾನಮೇವ ಚ ।
ಆತ್ಮಾ ಪುನರ್ಬಹಿರ್ಮೃಗ್ಯ ಅಹೋಽಜ್ಞಜನತಾಜ್ಞತಾ ॥ ೨೭ ॥

ನೀನು ತಮ್ಮ ಆತ್ಮನೇ ಆಗಿದ್ದರೂ ಜನರು ಅದನ್ನು ಬೇರೆಯೆಂದೇ ತಿಳಿಯುತ್ತಾರೆ. ಶರೀರಾದಿಗಳು ಬೇರೆಯಾಗಿದ್ದರೂ ಅವನ್ನು ತನ್ನ ಆತ್ಮನೆಂದೇ ತಿಳಿದಿರುತ್ತಾರೆ. ಮತ್ತೆ ನಿನ್ನನ್ನು ಎಲ್ಲೋ ಹುಡುಕತೊಡಗುತ್ತಾರೆ. ಇದೆಂತಹ ಆಶ್ಚರ್ಯದ ಮಾತಾಗಿದೆ ? ಅಜ್ಞಾನೀ ಜೀವಿಯ ಇದು ಅಜ್ಞಾನವೇ ಸರಿ. ॥ ೨೭ ॥

ಅಂತರ್ಭವೇಽನಂತ ಭವಂತಮೇವ
ಹ್ಯತತ್ತ್ಯಜಂತೋ ಮೃಗಯಂತಿ ಸಂತಃ ।
ಅಸಂತಮಪ್ಯಂತ್ಯಹಿಮಂತರೇಣ
ಸಂತಂ ಗುಣಂ ತಂ ಕಿಮು ಯಂತಿ ಸಂತಃ ॥ ೨೮ ॥

ಓ ಅನಂತನೇ ! ನೀನಾದರೋ ಎಲ್ಲರ ಅಂತಃಕರಣದಲ್ಲೇ ವಿರಾಜಮಾನನಾಗಿರುವೆ. ಅದಕ್ಕಾಗಿ ಸಂತರಾದ ಸತ್ಪುರುಷರು ನಿನ್ನನಲ್ಲದೆ ಕಂಡುಬರುವುದೆಲ್ಲವನ್ನೂ ಪರಿತ್ಯಾಗಮಾಡಿ, ತಮ್ಮ ಅಂತರಂಗದಲ್ಲೇ ನಿನ್ನನ್ನು ಹುಡುಕುತ್ತಾರೆ. ಏಕೆಂದರೆ, ಹಗ್ಗದಲ್ಲಿ ಸರ್ಪವಿಲ್ಲದಿದ್ದರೂ ಆ ಮಿಥ್ಯೆಯಾಗಿ ಕಂಡುಬರುವ ಸರ್ಪದ ಭ್ರಮೆಯು ಹೋಗದೆ ಯಾವ ಸತ್ಪುರುಷನು ನಿಜವಾದ ಹಗ್ಗವನ್ನು ತಿಳಿಯ ಬಲ್ಲನು ? ॥ ೨೮ ॥

ಅಥಾಪಿ ತೇ ದೇವ ಪದಾಂಬುಜದ್ವಯ-
ಪ್ರಸಾದಲೇಶಾನುಗೃಹೀತ ಏವ ಹಿ ।
ಜಾನಾತಿ ತತ್ತ್ವಂ ಭಗವನ್ಮಹಿಮ್ನೋ
ನ ಚಾನ್ಯ ಏಕೋಽಪಿ ಚಿರಂ ವಿಚಿನ್ವನ್ ॥ ೨೯ ॥

ದೇವನೇ ! ಯಾವ ಮನುಷ್ಯರು ನಿನ್ನ ಚರಣಕಮಲಗಳ ಅತ್ಯಲ್ಪವಾದ ಅನುಗ್ರಹವನ್ನಾದರೂ ಪಡೆಯುವರೋ ಅವರು ನಿನ್ನ ಸ್ವರೂಪದ ಮಹಿಮೆಯ ತತ್ತ್ವವನ್ನು ಸುಲಭವಾಗಿ ಬಹಳ ಬೇಗನೇ ತಿಳಿದುಕೊಳ್ಳುತ್ತಾರೆ. ಬೇರೆಯವರು ಜ್ಞಾನ-ವೈರಾಗ್ಯಾದಿಗಳನ್ನು ಬಹಳ ಕಾಲದವರೆಗೂ ಅನುಸಂಧಾನ ಮಾಡಿದರೂ ನಿನ್ನ ಮಹಿಮೆಯನ್ನು ಯಥಾವತ್ತಾಗಿ ತಿಳಿಯಲಾರರು. ॥ ೨೯ ॥

ತದಸ್ತು ಮೇ ನಾಥ ಸ ಭೂರಿಭಾಗೋ
ಭವೇಽತ್ರ ವಾನ್ಯತ್ರ ತು ವಾ ತಿರಶ್ಚಾಮ್ ।
ಯೇನಾಹಮೇಕೋಽಪಿ ಭವಜ್ಜನಾನಾಂ
ಭೂತ್ವಾ ನಿಷೇವೇ ತವ ಪಾದಪಲ್ಲವಮ್ ॥ ೩೦ ॥

ಆದುದರಿಂದ ಭಗವಂತನೇ! ನನ್ನ ಈ ಜನ್ಮದಲ್ಲಾಗಲೀ, ಬೇರೆ ಜನ್ಮದಲ್ಲಾಗಲೀ, ಪಶು-ಪಕ್ಷಿಗಳ ಜನ್ಮದಲ್ಲೇ ಆಗಲೀ; ನಿನ್ನ ಭಕ್ತ ಸಮೂಹದಲ್ಲಿ ಒಬ್ಬ ಭಕ್ತನಾಗಿದ್ದು ನಿನ್ನ ಚರಣಕಮಲಗಳ ಸೇವೆ ಮಾಡಲು ಸಾಧ್ಯವಾಗುವಂತಹ ಮಹಾಭಾಗ್ಯವು ಪ್ರಾಪ್ತವಾಗುವಂತೆ ಅನುಗ್ರಹಿಸು. ॥ ೩೦ ॥

ಅಹೋಽತಿಧನ್ಯಾ ವ್ರಜಗೋರಮಣ್ಯಃ
ಸ್ತನ್ಯಾಮೃತಂ ಪೀತಮತೀವ ತೇ ಮುದಾ ।
ಯಾಸಾಂ ವಿಭೋ ವತ್ಸತರಾತ್ಮಜಾತ್ಮನಾ
ಯತ್ತೃಪ್ತಯೇಽದ್ಯಾಪಿ ನ ಚಾಲಮಧ್ವರಾಃ ॥ ೩೧ ॥

ಸ್ವಾಮಿಯೇ ! ಜಗತ್ತು ಆರಂಭವಾದಾಗಿನಿಂದ ಇದುವರೆಗೂ ನಡೆದ ಹಲವಾರು ಯಜ್ಞಗಳಿಂದ ನಿನ್ನನ್ನು ಪೂರ್ಣವಾಗಿ ತೃಪ್ತಿ ಪಡಿಸಲಾಗಲಿಲ್ಲ, ಆದರೆ ನೀನು ವ್ರಜದ ಹಸುಗಳ ಮತ್ತು ಗೋಪಿಯರ ಕರುಗಳು ಹಾಗೂ ಗೋಪಬಾಲಕರು ಆಗಿ ಅವರ ಸ್ತನಗಳ ಅಮೃತದಂತಹ ಹಾಲನ್ನು ಪರಮಾನಂದದಿಂದ ಕುಡಿದು ತೃಪ್ತನಾದೆ. ಆದುದರಿಂದ ವ್ರಜದಲ್ಲಿರುವ ಗೋವುಗಳು ಹಾಗೂ ಗೋಪ ಸ್ತ್ರೀಯರೇ ಅತ್ಯಂತ ಧನ್ಯರು. ॥ ೩೧ ॥

ಅಹೋ ಭಾಗ್ಯಮಹೋ ಭಾಗ್ಯಂ ನಂದಗೋಪವ್ರಜೌಕಸಾಮ್ ।
ಯನ್ಮಿತ್ರಂ ಪರಮಾನಂದಂ ಪೂರ್ಣಂ ಬ್ರಹ್ಮ ಸನಾತನಮ್ ॥ ೩೨ ॥

ಏಷಾಂ ತು ಭಾಗ್ಯಮಹಿಮಾಚ್ಯುತ ತಾವದಾಸ್ತಾ-
ಮೇಕಾದಶೈವ ಹಿ ವಯಂ ಬತ ಭೂರಿಭಾಗಾಃ ।
ಏತದ್ಧೃಷೀಕಚಷಕೈರಸಕೃತ್ಪಿಬಾಮಃ
ಶರ್ವಾದಯೋಽಂಘ್ರ್ಯುದಜಮಧ್ವಮೃತಾಸವಂ ತೇ ॥ ೩೩ ॥

ತದ್ಭೂರಿಭಾಗ್ಯಮಿಹ ಜನ್ಮ ಕಿಮಪ್ಯಟವ್ಯಾಂ
ಯದ್ಗೋಕುಲೇಽಪಿ ಕತಮಾಂಘ್ರಿರಜೋಽಭಿಷೇಕಮ್ ।
ಯಜ್ಜೀವಿತಂ ತು ನಿಖಿಲಂ ಭಗವಾನ್ಮುಕುಂದ-
ಸ್ತ್ವದ್ಯಾಪಿ ಯತ್ಪದರಜಃ ಶ್ರುತಿಮೃಗ್ಯಮೇವ ॥ ೩೪ ॥

ಏಷಾಂ ಘೋಷನಿವಾಸಿನಾಮುತ ಭವಾನ್ಕಿಂ ದೇವರಾತೇತಿ ನ-
ಶ್ಚೇತೋ ವಿಶ್ವಫಲಾತ್ಫಲಂ ತ್ವದಪರಂ ಕುತ್ರಾಪ್ಯಯನ್ಮುಹ್ಯತಿ ।
ಸದ್ ವೇಷಾದಿವ ಪೂತನಾಪಿ ಸಕುಲಾ ತ್ವಾಮೇವ ದೇವಾಪಿತಾ
ಯದ್ಧಾಮಾರ್ಥಸುಹೃತ್ಪ್ರಿಯಾತ್ಮತನಯಪ್ರಾಣಾಶಯಾಸ್ತ್ವತ್ಕೃತೇ ॥ ೩೫ ॥

ತಾವದ್ರಾಗಾದಯಃ ಸ್ತೇನಾಸ್ತಾವತ್ಕಾರಾಗೃಹಂ ಗೃಹಮ್ ।
ತಾವನ್ಮೋಹೋಂಘ್ರಿನಿಗಡೋ ಯಾವತ್ ಕೃಷ್ಣ ನ ತೇ ಜನಾಃ ॥ ೩೬ ॥

ಪರಮಾನಂದ ಸ್ವರೂಪನಾದ, ಸನಾತನನಾದ, ಪರಿಪೂರ್ಣನಾದ, ಪರಬ್ರಹ್ಮ ಸ್ವರೂಪನಾದ ನೀನು ಪರಮಮಿತ್ರನೂ, ಸುಹೃದನೂ ಆಗಿರುವ ನಂದನೇ ಮೊದಲಾದ ವ್ರಜದ ಗೋಪ ಗೋಪಬಾಲಕರ ಭಾಗ್ಯವೇ ಭಾಗ್ಯವು ! ॥ ೩೨ ॥ ಅಚ್ಯುತನೇ ! ಈ ವ್ರಜವಾಸಿಗಳ ಸೌಭಾಗ್ಯದ ಮಹಿಮೆಯು ಹಾಗಿರಲಿ. ಮನಸ್ಸೇ ಮೊದಲಾದ ಹನ್ನೊಂದು ಇಂದ್ರಿಯಗಳ ಅಧಿಷ್ಠಾತೃ ದೇವತೆಗಳಾಗಿರುವ ಮಹಾದೇವನೇ ಮೊದಲಾದ ನಾವುಗಳು ಮಹಾ ಭಾಗ್ಯಶಾಲಿಗಳಾಗಿದ್ದೇವೆ. ಏಕೆಂದರೆ, ಈ ವ್ರಜವಾಸಿಗಳ ಮನಸ್ಸೇ ಮೊದಲಾದ ಹನ್ನೊಂದು ಇಂದ್ರಿಯಗಳೆಂಬ ಪಾತ್ರೆಗಳನ್ನಾಗಿಸಿಕೊಂಡು ನಾವು ನಿನ್ನ ಚರಣಕಮಲಗಳ ಅಮೃತಕ್ಕಿಂತಲೂ ಮಧುರವಾದ ಮಕರಂದ ರಸವನ್ನು ಪಾನಮಾಡುತ್ತಾ ಇರುತ್ತೇವೆ. ಅವರ ಒಂದೊಂದು ಇಂದ್ರಿಯದಿಂದ ಪಾನಮಾಡಿ ನಾವು ಧನ್ಯರಾಗುತ್ತಿರುವಾಗ ಸಮಸ್ತ ಇಂದ್ರಿಯಗಳಿಂದ ಅದನ್ನು ಸೇವಿಸುತ್ತಿರುವ ವ್ರಜವಾಸಿಗಳ ಸೌಭಾಗ್ಯವು ಎಷ್ಟೆಂಬುದನ್ನು ಹೇಳಬೇಕಾಗಿಯೆ ಇಲ್ಲ. ॥ ೩೩ ॥ ಪ್ರಭುವೇ ! ಈ ವ್ರಜಭೂಮಿಯ ಯಾವುದೇ ವನದಲ್ಲಿ ಮತ್ತು ವಿಶೇಷವಾಗಿ ಗೋಕುಲದಲ್ಲಿ ಯಾವುದೇ ಯೋನಿಯಲ್ಲಿ ಜನ್ಮವೆತ್ತುವುದೇ ನಮ್ಮ ಸೌಭಾಗ್ಯದ ಮಾತಾಗಿದೆ. ಏಕೆಂದರೆ, ಇಲ್ಲಿ ಹುಟ್ಟಿದ ಬಳಿಕ ನಿನ್ನ ಯಾರಾದರೂ ಪ್ರೇಮಿಯ (ಭಕ್ತನ) ಚರಣಧೂಳು ನಮ್ಮ ಮೇಲೆ ಬೀಳಬಹುದಲ್ಲ! ಪ್ರಭುವೇ ! ನಿನ್ನ ಪ್ರೇಮಿ ವ್ರಜವಾಸಿಗಳ ಸಂಪೂರ್ಣ ಜೀವನವು ನಿನ್ನದೇ ಜೀವನವಾಗಿದೆ. ನೀನೇ ಅವರ ಜೀವನದ ಏಕಮಾತ್ರ ಸರ್ವಸ್ವನಾಗಿರುವೆ. ಅದಕ್ಕಾಗಿ ಅವರ ಚರಣಗಳ ಧೂಳಿ ಸಿಗುವುದೂ ನಿನ್ನ ಚರಣಧೂಳಿ ಸಿಗುವಂತೆ ಇದೆ. ನಿನ್ನ ಚರಣಧೂಳಿಯನ್ನಾದರೋ ಶ್ರುತಿಗಳೂ ಕೂಡ ಅನಾದಿ ಕಾಲದಿಂದ ಇಂದಿನವರೆಗೆ ಹುಡುಕುತ್ತಿರುವವು. ॥ ೩೪ ॥ ದೇವತೆಗಳಿಗೂ ಆರಾಧ್ಯನಾದ ಪ್ರಭುವೇ ! ಈ ವ್ರಜವಾಸಿಗಳು ಮಾಡುವ ಸೇವೆಯ ಬದಲಿಗೆ ನೀನು ಏನು ಫಲವನ್ನು ಕೊಡುವೆ ? ಸಮಸ್ತ ಫಲಗಳ ಫಲಸ್ವರೂಪನೇ ! ನಿನ್ನಿಂದ ಮಿಗಿಲಾದ ಬೇರೆ ಯಾವುದೇ ಫಲವು ಇಲ್ಲವೇ ಇಲ್ಲ, ಹೀಗೆಂದು ಯೋಚಿಸುತ್ತಾ ನನ್ನ ಚಿತ್ತವು ಮೋಹಿತಗೊಳ್ಳುತ್ತಿದೆ. ಅವರಿಗೆ ನೀನು ತನ್ನ ಸ್ವರೂಪವನ್ನೇ ಕೊಟ್ಟರೂ ಅವರ ಋಣದಿಂದ ಮುಕ್ತನಾಗಲಾರೆ. ಏಕೆಂದರೆ, ನಿನ್ನ ಸ್ವರೂಪವನ್ನೇನೋ ಆ ಪೂತನೆಯೂ ನಿನ್ನ ಸಂಬಂಧದಿಂದ ಅಘಾಸುರ, ಬಕಾಸುರ ಮುಂತಾದವರೊಡನೆ ಪಡೆದುಕೊಂಡಳು. ಅವಳ ವೇಷ ಕೇವಲ ಸಾಧ್ವಿಯಂತೆ ಇತ್ತು ಆದರೆ ಹೃದಯದಿಂದ ಕ್ರೂರಿಯಾಗಿದ್ದಳು. ಹೀಗಿರುವಾಗ ತನ್ನ ಮನೆ, ಧನ, ಸ್ವಜನರು, ಪ್ರಿಯರು, ಶರೀರ, ಪುತ್ರ, ಪ್ರಾಣ ಮತ್ತು ಮನಸ್ಸು ಹೀಗೆ ಎಲ್ಲವನ್ನು ನಿನ್ನ ಚರಣಗಳಲ್ಲಿ ಅರ್ಪಿಸಿರುವ, ಆ ವ್ರಜವಾಸಿಗಳಿಗೂ ಅದೇ ಫಲವನ್ನು ಕೊಟ್ಟು ನೀನು ಹೇಗೆ ಋಣಮುಕ್ತನಾಗುವೆ ? ॥ ೩೫ ॥ ಶ್ಯಾಮಸುಂದರನೇ ! ಜೀವರು ನಿನ್ನವರಾಗುವತನಕ, ಭಕ್ತರಾಗುವತನಕ ರಾಗದ್ವೇಷಾದಿ ದೋಷಗಳು ಕಳ್ಳರಂತೆ ಅವರ ಸರ್ವಸ್ವವನ್ನು ಅಪಹರಿಸಿ ಬಿಡುತ್ತವೆ ; ಮನೆಯು ಸೆರೆಮನೆಯಾಗಿರುತ್ತದೆ ; ಮೋಹವು ಕಾಲುಗಳಿಗೆ ಸಂಕೋಲೆಯಾಗಿ ಬಂಧನಕ್ಕೆ ಕಾರಣವಾಗುತ್ತದೆ. ॥ ೩೬ ॥

ಪ್ರಪಂಚಂ ನಿಷ್ಪ್ರಪಂಚೋಽಪಿ ವಿಡಂಬಯಸಿ ಭೂತಲೇ ।
ಪ್ರಪನ್ನಜನತಾನಂದಸಂದೋಹಂ ಪ್ರಥಿತುಂ ಪ್ರಭೋ
॥ ೩೭ ॥

ಜಾನಂತ ಏವ ಜಾನಂತು ಕಿಂ ಬಹೂಕ್ತ್ಯಾ ನ ಮೇ ಪ್ರಭೋ ।
ಮನಸೋ ವಪುಷೋ ವಾಚೋ ವೈಭವಂ ತವ ಗೋಚರಃ
॥ ೩೮ ॥

ಅನುಜಾನೀಹಿ ಮಾಂ ಕೃಷ್ಣ ಸರ್ವಂ ತ್ವಂ ವೇತ್ಸಿ ಸರ್ವದೃಕ್ ।
ತ್ವಮೇವ ಜಗತಾಂ ನಾಥೋ ಜಗದೇತತ್ತವಾರ್ಪಿತಮ್
॥ ೩೯ ॥

ಶ್ರೀಕೃಷ್ಣ ವೃಷ್ಣಿಕುಲಪುಷ್ಕರಜೋಷದಾಯಿನ್
ಕ್ಷ್ಮಾನಿರ್ಜರದ್ವಿಜಪಶೂದಧಿವೃದ್ಧಿಕಾರಿನ್ ।
ಉದ್ಧರ್ಮಶಾರ್ವರಹರ ಕ್ಷಿತಿರಾಕ್ಷಸಧ್ರು-
ಗಾಕಲ್ಪಮಾರ್ಕಮರ್ಹನ್ಭಗವನ್ನಮಸ್ತೇ ॥ ೪೦ ॥

ಪ್ರಭುವೇ! ನೀನು ಜಗದ್ವ್ಯಾಪಾರದಿಂದ ರಹಿತನಾಗಿದ್ದರೂ ಶರಣಾಗತರಾದ ಭಕ್ತರಿಗೆ ಅನಂತವಾದ ಆನಂದವನ್ನು ಹಂಚುವುದಕ್ಕಾಗಿ ಭೂಮಿಯಲ್ಲಿ ಅವತರಿಸಿ ಪ್ರಪಂಚದ ಜನರಂತೆ ನಟಿಸುತ್ತಿರುವೆ. ॥ ೩೭ ॥ ಹೆಚ್ಚು ಹೇಳುವುದರಿಂದ ಪ್ರಯೋಜನವೇನೂ ಇಲ್ಲ. ಲೋಕದಲ್ಲಿ ನಿನ್ನ ಮಹಿಮೆಯನ್ನು ತಿಳಿದಿರುವವರು ತಿಳಿಯುತ್ತಾ ಇರಲಿ. ನನ್ನ ಮನಸ್ಸು, ಮಾತು, ಶರೀರಗಳಂತೂ ನಿನ್ನ ಮಹಿಮೆಯನ್ನು ತಿಳಿಯಲು ಸರ್ವಥಾ ಅಸಮರ್ಥವಾಗಿದೆ. ॥ ೩೮ ॥ ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣನೇ! ನೀನು ಸರ್ವ ಸಾಕ್ಷಿಯಾಗಿ ಎಲ್ಲವನ್ನೂ ತಿಳಿದವನಾಗಿರುವೆ. ಸಕಲ ಜಗತ್ತಿಗೂ ಒಡೆಯನಾಗಿರುವೆ. ಈ ಅಖಿಂಡ. ಭೂಮಂಡಲವೂ ನಿನ್ನಲ್ಲಿಯೇ ನೆಲೆಗೊಂಡಿದೆ. ನಾನು ನಿನ್ನ ವಿಷಯದಲ್ಲಿ ಇನ್ನೇನು ಹೇಳಲಿ ? ನನ್ನನ್ನು ಭಕ್ತನನ್ನಾಗಿ ನೀನು ಸ್ವೀಕರಿಸು. ಸ್ವಾಮಿಯೇ! ನಾನು ನನ್ನ ಲೋಕಕ್ಕೆ ಹೋಗಲು ಅನುಮತಿಯನ್ನು ನೀಡು. ॥ ೩೯ ॥ ಸಮಸ್ತರ ಮನಃಪ್ರಾಣಗಳನ್ನು ರೂಪಮಾಧುರ್ಯಗಳಿಂದ ಆಕರ್ಷಿಸುವ ಶ್ಯಾಮಸುಂದರನೇ! ನೀನು ಯದುವಂಶರೂಪವಾದ ಕಮಲವನ್ನು ವಿಕಸಿತಗೊಳಿಸುವ ಸೂರ್ಯನಾಗಿರುವೆ. ಭೂ-ದೇವತಾ-ಬ್ರಾಹ್ಮಣ ಗೋವು ಮತ್ತು ಸಮುದ್ರವನ್ನು ಅಭಿವೃದ್ಧಿಗೊಳಿಸುವ ಚಂದ್ರನೂ ನೀನೇ ಆಗಿರುವೆ. ಪಾಷಂಡಧರ್ಮವೆಂಬ ರಾತ್ರಿಯ ಘೋರ ಅಂಧಕಾರವನ್ನು ನಾಶಗೊಳಿಸುವುದರಲ್ಲಿ ಚಂದ್ರ-ಸೂರ್ಯರಿಗೆ ಸಮಾನನಾಗಿರುವೆ. ಲೋಕದ್ರೋಹಿಗಳಾದ ಕಂಸನೇ ಮೊದಲಾದ ರಾಕ್ಷಸರಿಗೆ ನೀನು ದ್ರೋಹಿಯಾಗಿರುವೆ. ಭಗವಂತ! ನಾನು ಜೀವನವಿಡೀ, ಮಹಾ ಕಲ್ಪಾಂತ್ಯದವರೆಗೂ ನಿನಗೆ ನಮಸ್ಕರಿಸುತ್ತಲೇ ಇರುವೆನು. ॥ ೪೦ ॥

*ಶ್ರೀಶುಕ ಉವಾಚ*

ಇತ್ಯಭಿಷ್ಟೂಯ ಭೂಮಾನಂ ತ್ರಿಃ ಪರಿಕ್ರಮ್ಯ ಪಾದಯೋಃ ।
ನತ್ವಾಭೀಷ್ಟಂ ಜಗದ್ಧಾತಾ ಸ್ವಧಾಮ ಪ್ರತ್ಯಪದ್ಯತ
॥ ೪೧ ॥

ತತೋಽನುಜ್ಞಾಪ್ಯ ಭಗವಾನ್ಸ್ವಭೂವಂ ಪ್ರಾಗವಸ್ಥಿತಾನ್ ।
ವತ್ಸಾನ್ಪುಲಿನಮಾನಿನ್ಯೇ ಯಥಾಪೂರ್ವಸಖಂ ಸ್ವಕಮ್
॥ ೪೨ ॥

ಏಕಸ್ಮಿನ್ನಪಿ ಯಾತೇಽಬ್ದೇ ಪ್ರಾಣೇಶಂ ಚಾಂತರಾಽಽತ್ಮನಃ ।
ಕೃಷ್ಣಮಾಯಾಹತಾ ರಾಜನ್ ಕ್ಷಣಾರ್ಧಂ ಮೇನಿರೇಽರ್ಭಕಾಃ
॥ ೪೩ ॥

ಕಿಂ ಕಿಂ ನ ವಿಸ್ಮರಂತೀಹ ಮಾಯಾಮೋಹಿತಚೇತಸಃ ।
ಯನ್ಮೋಹಿತಂ ಜಗತ್ಸರ್ವಮಭೀಕ್ಷ್ಣಂ ವಿಸ್ಮೃತಾತ್ಮಕಮ್
॥ ೪೪ ॥

**ಶ್ರೀಶುಕಮುನಿಗಳು ಹೇಳುತ್ತಾರೆ** - ಪರೀಕ್ಷಿತ ಮಹಾರಾಜ! ಸೃಷ್ಟಿಕರ್ತನಾದ ಬ್ರಹ್ಮನು ಈ ಪ್ರಕಾರವಾಗಿ ಭಗವಾನ್ ಶ್ರೀಕೃಷ್ಣನನ್ನು ಸ್ತುತಿಸಿ, ಅವನಿಗೆ ಮೂರು ಪ್ರದಕ್ಷಿಣೆ ಬಂದು, ಅವನ ಚರಣಗಳಲ್ಲಿ ವಂದಿಸಿಕೊಂಡು ತನ್ನ ಸ್ಥಾನವಾದ ಸತ್ಯಲೋಕಕ್ಕೆ ತೆರಳಿದನು. ॥ ೪೧ ॥ ಬ್ರಹ್ಮದೇವನು ಈ ಮೊದಲೇ ಕರುಗಳನ್ನೂ, ಗೋಪ ಬಾಲಕರನ್ನೂ ಅವರು ಹಿಂದಿದ್ದ ಸ್ಥಳಕ್ಕೆ ಕಳುಹಿಸಿಬಿಟ್ಟಿದ್ದನು. ಶ್ರೀಕೃಷ್ಣನು ಬ್ರಹ್ಮದೇವರನ್ನು ಬೀಳ್ಕೊಟ್ಟು, ತನ್ನ ಸ್ನೇಹಿತರಾದ ಗೋಪಬಾಲಕರನ್ನು ಮತ್ತು ಕರುಗಳನ್ನು ಯಮುನಾ ತೀರಕ್ಕೆ ಹೊಡೆದುಕೊಂಡು ಬಂದನು. ॥ ೪೨ ॥ ಪರೀಕ್ಷಿತನೇ! ತಮ್ಮ ಜೀವನ ಸರ್ವಸ್ವನಾದ, ಪ್ರಾಣವಲ್ಲಭನಾದ ಶ್ರೀಕೃಷ್ಣನನ್ನು ಅಗಲಿ ಗೋಪಬಾಲಕರಿಗೆ ಒಂದು ವರ್ಷವೇ ಕಳೆದು ಹೋಗಿತ್ತು. ಆದರೂ ಶ್ರೀಕೃಷ್ಣನ ಯೋಗಮಾಯೆಯಿಂದ ಮರುಳಾದ ಗೋಪಬಾಲಕರಿಗೆ ಆ ಸಮಯವು ಕ್ಷಣಾರ್ಧದಂತೆ ಅನಿಸಿತು. ॥ ೪೩ ॥ ಜಗತ್ತಿನ ಸಮಸ್ತ ಜೀವಿಗಳು ಅದೇ ಮಾಯೆಯಿಂದ ಮೋಹಿತರಾಗಿ ಶಾಸ್ತ್ರ ಮತ್ತು ಆಚಾರ್ಯರು ಪದೇ-ಪದೇ ತಿಳಿಸಿ ಹೇಳಿದರೂ ತನ್ನ ಆತ್ಮವನ್ನು ನಿರಂತರವಾಗಿ ಮರೆತಿರುತ್ತಾರೆ. ನಿಜವಾಗಿ ಆ ಮಾಯೆಯ ಶಕ್ತಿಯೇ ಇಂತಹುದು. ಆದರಿಂದ ಮೋಹಿತನಾದ ಜೀವನು ಇಲ್ಲಿ ಏನೇನೆಲ್ಲ ಮರೆಯುವುದಿಲ್ಲ ? ॥ ೪೪ ॥

ಊಚುಶ್ಚ ಸುಹೃದಃ ಕೃಷ್ಣಂ ಸ್ವಾಗತಂ ತೇಽತಿರಂಹಸಾ ।
ನೈಕೋಽಪ್ಯಭೋಜಿ ಕವಲ ಏಹೀತಃ ಸಾಧು ಭುಜ್ಯತಾಮ್
॥ ೪೫ ॥

ತತೋ ಹಸನ್ ಹೃಷೀಕೇಶೋಽಭ್ಯವಹೃತ್ಯ ಸಹಾರ್ಭಕೈಃ ।
ದರ್ಶಯಂಶ್ಚರ್ಮಾಜಗರಂ ನ್ಯವರ್ತತ ವನಾದ್ವ್ರಜಮ್
॥ ೪೬ ॥

ಬರ್ಹಪ್ರಸೂನನವಧಾತು ವಿಚಿತ್ರಿತಾಂಗಃ
ಪ್ರೋದ್ದಾಮವೇಣುದಲಶೃಂಗರವೋತ್ಸವಾಢ್ಯಃ ।
ವತ್ಸಾನ್ಗೃಣನ್ನನುಗಗೀತಪವಿತ್ರಕೀರ್ತಿ-
ರ್ಗೋಪೀದೃಗುತ್ಸವದೃಶಿಃ ಪ್ರವಿವೇಶ ಗೋಷ್ಠಮ್ ॥ ೪೭ ॥

ಅದ್ಯಾನೇನ ಮಹಾವ್ಯಾಲೋ ಯಶೋದಾನಂದಸೂನುನಾ ।
ಹತೋಽವಿತಾ ವಯಂ ಚಾಸ್ಮಾದಿತಿ ಬಾಲಾ ವ್ರಜೇ ಜಗುಃ
॥ ೪೮ ॥

ರಾಜೋವಾಚ

ಬ್ರಹ್ಮನ್ಪರೋದ್ಭವೇ ಕೃಷ್ಣೇ ಇಯಾನ್ಪ್ರೇಮಾ ಕಥಂ ಭವೇತ್ ।
ಯೋಽಭೂತಪೂರ್ವಸ್ತೋಕೇಷು ಸ್ವೋದ್ಭವೇಷ್ವಪಿ ಕಥ್ಯತಾಮ್
॥ ೪೯ ॥

ಶ್ರೀಶುಕ ಉವಾಚ

ಸರ್ವೇಷಾಮಪಿ ಭೂತಾನಾಂ ನೃಪ ಸ್ವಾತ್ಮೈವ ವಲ್ಲಭಃ ।
ಇತರೇಽಪತ್ಯವಿತ್ತಾದ್ಯಾಸ್ತದ್ವಲ್ಲಭತಯೈವ ಹಿ
॥ ೫೦ ॥

ತದ್ರಾಜೇಂದ್ರಯಥಾ ಸ್ನೇಹಃ ಸ್ವಸ್ವಕಾತ್ಮನಿ ದೇಹಿನಾಮ್ ।
ನ ತಥಾ ಮಮತಾಲಂಬಿಪುತ್ರವಿತ್ತಗೃಹಾದಿಷು
॥ ೫೧ ॥

ದೇಹಾತ್ಮವಾದಿನಾಂ ಪುಂಸಾಮಪಿ ರಾಜನ್ಯಸತ್ತಮ ।
ಯಥಾ ದೇಹಃ ಪ್ರಿಯತಮಸ್ತಥಾ ನ ಹ್ಯನು ಯೇ ಚ ತಮ್
॥ ೫೨ ॥

ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನನ್ನು ನೋಡುತ್ತಲೇ ಗೋಪಬಾಲಕರೆಲ್ಲರೂ ಅತ್ಯುತ್ಸಾಹದಿಂದ ಅವನಲ್ಲಿ ಹೇಳಿದರು "ಶ್ರೀಕೃಷ್ಣ! ನೀನು ಬಂದುದು ಒಳ್ಳೆಯದಾಯಿತು. ನಿನಗೆ ಸ್ವಾಗತ ಬಯಸುತ್ತೇವೆ. ನೀನಿಲ್ಲದೆ ನಾವು ಒಂದು ತುತ್ತು ಅನ್ನವನ್ನು ತಿಂದಿರುವುದಿಲ್ಲ. ಇತ್ತ ಬಾ ; ಕುಳಿತುಕೋ. ಆನಂದವಾಗಿ ಭೋಜನ ಮಾಡು." ॥ ೪೫ ॥ ಆಗ ಶ್ರೀಕೃಷ್ಣನು ನಸುನಗುತ್ತಾ ಗೋಪಬಾಲಕರೊಂದಿಗೆ ಭೋಜನ ಮಾಡಿದನು. ಬಳಿಕ ಹೆಬ್ಬಾವಿನ ತೊಗಲನ್ನು ಗೋಪಬಾಲಕರಿಗೆ ತೋರಿಸುತ್ತಾ ವನದಿಂದ ವ್ರಜಕ್ಕೆ ಮರಳಿದನು. ॥ ೪೬ ॥ ಶ್ರೀಕೃಷ್ಣನ ತಲೆಯು ನವಿಲು ಗರಿಗಳಿಂದಲೂ, ಹೂವಿನ ದಂಡೆಯಿಂದಲೂ ಸಮಲಂಕೃತವಾಗಿತ್ತು. ಹೊಸ-ಹೊಸ ಬಣ್ಣದ ಧಾತುಗಳಿಂದ ಆತನ ಶ್ಯಾಮಲ ಶರೀರವು ಚಿತ್ರಿತವಾಗಿತ್ತು. ಅವನು ವ್ರಜದ ಕಡೆಗೆ ಹೋಗುತ್ತಿದ್ದಾಗ ಕೆಲವು ಬಾಲಕರು ಕೊಳಲನ್ನೂದುತ್ತಿದ್ದರು. ಕೆಲವರು ಕೊಂಬುಗಳನ್ನು ಊದುತ್ತಿದ್ದರೆ, ಕೆಲವರು ಎಲೆಗಳಿಂದ ಪೀಪಿಗಳನ್ನು ಮಾಡಿ ಊದುತ್ತಿದ್ದರು. ಇದೊಂದು ವಾದ್ಯೋತ್ಸವದಂತೆಯೇ ಕಾಣುತ್ತಿತ್ತು. ಹಿಂಭಾಗದಲ್ಲಿ ಕೆಲವು ಗೋಪಬಾಲಕರು ಶ್ರೀಕೃಷ್ಣನ ಲೋಕಪಾವನವಾದ ಕೀರ್ತನೆಗಳನ್ನು ಹಾಡುತ್ತಿದ್ದರು. ಕೆಲವರು ತಮ್ಮ ಕರುಗಳ ಹೆಸರುಗಳನ್ನು ಹಿಡಿದು ಕೂಗುತ್ತಿದ್ದರು. ಕೆಲವರು ತಮ್ಮ ಕರುಗಳನ್ನು ಮುದ್ದಾಡುತ್ತಾ ಹೋಗುತ್ತಿದ್ದರು. ಎರಡೂ ಕಡೆಗಳಲ್ಲಿ ನಿಂತು ಉತ್ಸಾಹದಿಂದ ನೋಡುತ್ತಿದ್ದ ಗೋಪಿಯರ ಕಣ್ಣುಗಳಿಗೆ ಹಬ್ಬವನ್ನುಂಟುಮಾಡುತ್ತಾ ಶ್ರೀಕೃಷ್ಣನು ವ್ರಜವನ್ನು ಪ್ರವೇಶಿಸಿದನು. ॥ ೪೭ ॥ ಪರೀಕ್ಷಿತನೇ ! ಅದೇ ದಿನ ಬಾಲಕರು ವ್ರಜಕ್ಕೆ ಬಂದು ಹೇಳಿದರು – 'ಇಂದು ಯಶೋದಾಮಾತೆಯ ಮುದ್ದುಕಂದನಾದ ಶ್ರೀಕೃಷ್ಣನು ವೃಂದಾವನದಲ್ಲಿ ಒಂದು ದೊಡ್ಡ ಹೆಬ್ಬಾವನ್ನು ಕೊಂದು ನಮ್ಮೆಲ್ಲರನ್ನು ರಕ್ಷಿಸಿದನು.' ॥ ೪೮ ॥

**ಪರೀಕ್ಷಿದ್ರಾಜನು ಕೇಳಿದನು** – 'ಬ್ರಾಹ್ಮಣ ಶ್ರೇಷ್ಠರೇ! ವ್ರಜವಾಸಿಗಳಿಗೆ ಶ್ರೀಕೃಷ್ಣನು ತಮ್ಮ ಮಗನಾಗಿರದೆ, ಬೇರೆಯವರ ಮಗನಾಗಿದ್ದನು. ಹೀಗಿದ್ದರೂ ಆತನ ಮೇಲೆ ವ್ರಜವಾಸಿಗಳಿಗೆ ಇಷ್ಟೊಂದು ಪ್ರೇಮ ಹೇಗೆ ಉಂಟಾಯಿತು? ಇಂತಹ ಪ್ರೀತಿಯಾದರೋ ಅವರಿಗೆ ತಮ್ಮ ನಿಜಮಕ್ಕಳಲ್ಲಿಯೂ ಇರಲಿಲ್ಲ. ಇದರ ಕಾರಣವನ್ನು ತಾವು ದಯಮಾಡಿ ತಿಳಿಸಿರಿ.' ॥ ೪೯ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಮಹಾರಾಜ ! ಜಗತ್ತಿನ ಸಕಲ ಪ್ರಾಣಿಗಳಿಗೆ ತಮ್ಮ ಆತ್ಮನಲ್ಲಿಯೇ ಹೆಚ್ಚಿನ ಪ್ರೀತಿ ಇರುತ್ತದೆ. ಪುತ್ರ-ಧನ ಮುಂತಾದವುಗಳ ಮೇಲಿನ ಪ್ರೇಮವೂ ಕೂಡ ತಮ್ಮ ಆತ್ಮನ ಮೇಲಿನ ಅಪಾರವಾದ ಪ್ರೇಮದಿಂದಲೇ ಉಂಟಾಗುತ್ತದೆ. ಆತ್ಮಪ್ರೀತಿಗಾಗಿಯೇ ಎಲ್ಲವೂ ಇರುವುದು.॥ ೫೦ ॥ ರಾಜೇಂದ್ರ ! ಎಲ್ಲ ಪ್ರಾಣಿಗಳಿಗೆ ತಮ್ಮ ಆತ್ಮನ ಕುರಿತು ಪ್ರೇಮವಿರುವಂತೆ, ತನ್ನದೆಂದು ಹೇಳಿಕೊಳ್ಳುವ ಪುತ್ರ-ಧನ-ಮನೆ ಮುಂತಾದವುಗಳಲ್ಲಿ ಪ್ರೇಮವಿರುವುದಿಲ್ಲ. ॥ ೫೧ ॥ ನೃಪಶ್ರೇಷ್ಠನೇ ! ದೇಹವನ್ನೇ ಆತ್ಮನೆಂದು ತಿಳಿದವರೂ ಕೂಡ ತನ್ನ ಶರೀರದಲ್ಲಿ ಪ್ರೀತಿ ಇರುವಂತೆ, ಶರೀರ ಸಂಬಂಧಿ ಪುತ್ರ, ಮಿತ್ರ, ಕಳತ್ರರನ್ನು ಪ್ರೀತಿಸುವುದಿಲ್ಲ. ॥ ೫೨ ॥

ದೇಹೋಽಪಿ ಮಮತಾಭಾಕ್ಚೇತ್ತರ್ಹ್ಯಸೌ ನಾತ್ಮವತ್ಪ್ರಿಯಃ ।
ಯಜ್ಜೀರ್ಯತ್ಯಪಿ ದೇಹೇಽಸ್ಮಿನ್ ಜೀವಿತಾಶಾ ಬಲೀಯಸೀ
॥ ೫೩ ॥

ವಿಚಾರದ ಮೂಲಕ 'ಈ ಶರೀರವು ನಾನಲ್ಲ, ಈ ಶರೀರವು ನನ್ನದಾಗಿದೆ' ಎಂಬುದು ತಿಳಿದಾಗ ಈ ಶರೀರದ ಮೇಲೆಯೂ ಕೂಡ ಆತ್ಮನಂತೆ ಪ್ರೀತಿ ಉಳಿಯುವುದಿಲ್ಲ, ಈ ದೇಹವು ಜೀರ್ಣ ಶೀರ್ಣವಾದರೂ ಕೂಡು ಬದುಕಿರುವ ಆಸೆಯು ಪ್ರಬಲವಾಗಿ ಇರುವುದು ಇದೇ ಕಾರಣವಾಗಿದೆ. ॥ ೫೩ ॥

ತಸ್ಮಾತ್ಪ್ರಿಯತಮಃ ಸ್ವಾತ್ಮಾ ಸರ್ವೇಷಾಮಪಿ ದೇಹಿನಾಮ್ ।
ತದರ್ಥಮೇವ ಸಕಲಂ ಜಗದೇತಚ್ಚರಾಚರಮ್
॥ ೫೪ ॥

ಎಲ್ಲ ಪ್ರಾಣಿಗಳು ತಮ್ಮ ಆತ್ಮನನ್ನೇ ಎಲ್ಲಕ್ಕಿಂತ ಹೆಚ್ಚು ಪ್ರೀತಿಸುತ್ತಾರೆ ಮತ್ತು ಅದಕ್ಕಾಗಿಯೇ ಚರಾಚರ ಜಗತ್ತೆಲ್ಲವನ್ನೂ ಪ್ರೀತಿಸುತ್ತಾರೆ ಎಂಬುದು ಇದರಿಂದ ಸಿದ್ಧವಾಗುತ್ತದೆ. ॥ ೫೪ ॥

ಕೃಷ್ಣಮೇನಮವೇಹಿ ತ್ವಮಾತ್ಮಾನಮಖಿಲಾತ್ಮನಾಮ್ ।
ಜಗದ್ಧಿತಾಯ ಸೋಽಪ್ಯತ್ರ ದೇಹೀವಾಭಾತಿ ಮಾಯಯಾ
॥ ೫೫ ॥

ಶ್ರೀಕೃಷ್ಣನನ್ನೇ ನೀನು ಎಲ್ಲ ಆತ್ಮರ ಆತ್ಮನಾಗಿದ್ದಾನೆಂದು ತಿಳಿ. ಜಗತ್ತಿನ ಕಲ್ಯಾಣಕ್ಕಾಗಿಯೇ ಯೋಗಮಾಯೆಯನ್ನು ಆಶ್ರಯಿಸಿ ಅವನೇ ಇಲ್ಲಿ ದೇಹಧಾರಿಗಳಂತೆ ಕಂಡು ಬರುತ್ತಿರುವನು. ॥ ೫೫ ॥

ವಸ್ತುತೋ ಜಾನತಾಮತ್ರ ಕೃಷ್ಣಂ ಸ್ಥಾಸ್ನು ಚರಿಷ್ಣು ಚ ।
ಭಗವದ್ರೂಪಮಖಿಲಂ ನಾನ್ಯದ್ವಸ್ತ್ವಿಹ ಕಿಂಚನ
॥ ೫೬ ॥

ಭಗವಾನ್ ಶ್ರೀಕೃಷ್ಣನ ವಾಸ್ತವಿಕ ಸ್ವರೂಪವನ್ನು ತಿಳಿದವರಿಗಾದರೋ ಈ ಜಗತ್ತಿನಲ್ಲಿ ಇರುವ ಚರಾಚರ ಪದಾರ್ಥಗಳು ಅಥವಾ ಅದರಿಂದ ಅತೀತವಾದ ಪರಮಾತ್ಮ ಬ್ರಹ್ಮ ನಾರಾಯಣನೇ ಮೊದಲಾದ ಭಗವತ್ಸ್ವರೂಪಗಳೆಲ್ಲವೂ ಶ್ರೀಕೃಷ್ಣಸ್ವರೂಪವೇ ಆಗಿವೆ. ಶ್ರೀಕೃಷ್ಣನಲ್ಲದೆ ಬೇರೆ ಯಾವುದೇ ಪ್ರಾಕೃತ-ಅಪ್ರಾಕೃತ ವಸ್ತುವು ಇಲ್ಲವೇ ಇಲ್ಲ. ॥ ೫೬ ॥

ಸರ್ವೇಷಾಮಪಿ ವಸ್ತೂನಾಂ ಭಾವಾರ್ಥೋ ಭವತಿ ಸ್ಥಿತಃ ।
ತಸ್ಯಾಪಿ ಭಗವಾನ್ಕೃಷ್ಣಃ ಕಿಮತದ್ವಸ್ತು ರೂಪ್ಯತಾಮ್
॥ ೫೭ ॥

ಎಲ್ಲ ವಸ್ತುಗಳ ಅಂತಿಮರೂಪವು ತನ್ನ ಕಾರಣದಲ್ಲೇ ನೆಲೆಸಿರುತ್ತದೆ. ಆ ಕಾರಣಕ್ಕೂ ಪರಮಕಾರಣ ಭಗವಾನ್ ಶ್ರೀಕೃಷ್ಣನಾಗಿದ್ದಾನೆ. ಹಾಗಿರುವಾಗ ಶ್ರೀಕೃಷ್ಣನಿಂದ ಭಿನ್ನವಾದ ವಸ್ತು ಯಾವುದು ತಾನೇ ಇದೆ? ಹೇಳು. ॥ ೫೭ ॥

ಸಮಾಶ್ರಿತಾ ಯೇ ಪದಪಲ್ಲವಪ್ಲವಂ
ಮಹತ್ಪದಂ ಪುಣ್ಯಯಶೋಮುರಾರೇಃ ।
ಭವಾಂಬುಧಿರ್ವತ್ಸಪದಂ ಪರಂ ಪದಂ
ಪದಂ ಪದಂ ಯದ್ವಿಪದಾಂ ನ ತೇಷಾಮ್ ॥ ೫೮ ॥

ಸತ್ಪುರುಷರ ಸರ್ವಸ್ವನಾದ ಪುಣ್ಯಕೀರ್ತಿಯಾದ ಮುಕುಂದ, ಮುರಾರಿಯ ಪದ-ಪಲ್ಲವಗಳ ನೌಕೆಯನ್ನು ಆಶ್ರಯಿಸಿದವರಿಗೆ ಈ ಭವಸಾಗರವು ಕರುವಿನ ಗೊರಸಿನಷ್ಟಾಗಿ ಬಿಡುತ್ತದೆ. ॥ ೫೮ ॥

ಏತತ್ತೇ ಸರ್ವಮಾಖ್ಯಾತಂ ಯತ್ಪೃಷ್ಟೋಽಹಮಿಹ ತ್ವಯಾ ।
ಯತ್ಕೌಮಾರೇ ಹರಿಕೃತಂ ಪೌಗಂಡೇ ಪರಿಕೀರ್ತಿತಮ್
॥ ೫೯ ॥

ಪರೀಕ್ಷಿತನೇ! ಭಗವಂತನ ಐದನೇ ವರ್ಷದ ಲೀಲೆಯನ್ನು ಆರನೇ ವರ್ಷದಲ್ಲಿ ಗೋಪಬಾಲಕರು ಈಗ ನಡೆದಂತೆ ಹೇಳಿದರು; ಇದು ಹೇಗೆ ಎಂದು ನೀನು ಕೇಳಿದ್ದೆಯಲ್ಲ, ಅದರ ಎಲ್ಲ ರಹಸ್ಯವನ್ನು ನಾನು ನಿನಗೆ ತಿಳಿಸಿರುವೆನು. ॥ ೫೯ ॥

ಏತತ್ಸುಹೃದ್ಭಿಶ್ಚರಿತಂ ಮುರಾರೇ-
ರಘಾರ್ದನಂ ಶಾದ್ವಲಜೇಮನಂ ಚ ।
ವ್ಯಕ್ತೇತರದ್ರೂಪಮಜೋರ್ವಭಿಷ್ಟವಂ
ಶೃಣ್ವನ್ ಗೃಣನ್ನೇತಿ ನರೋಽಖಿಲಾರ್ಥಾನ್ ॥ ೬೦ ॥

ಭಗವಾನ್ ಶ್ರೀಕೃಷ್ಣನು ಗೊಲ್ಲಬಾಲಕರೊಂದಿಗೆ ನಡೆಸಿದ ವನಕ್ರೀಡೆ, ಅಘಾಸುರನ ಸಂಹಾರ, ಹಚ್ಚ-ಹಸುರಾದ ಹುಲ್ಲಿನ ಮೇಲೆ ಕುಳಿತು ಭೋಜನ ಮಾಡುವುದು, ಅಪ್ರಾಕೃತರೂಪಧಾರಿ ಕರುಗಳನ್ನು ಮತ್ತು ಗೋಪಬಾಲಕರನ್ನು ಪ್ರಕಟಿಸುವುದು, ಬ್ರಹ್ಮದೇವರು ಮಾಡಿದ ಈ ಶ್ರೇಷ್ಠ ಸ್ತುತಿ ಇವೆಲ್ಲವನ್ನು ಕೇಳುವ-ಹೇಳುವ ಮನುಷ್ಯನಿಗೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಇವುಗಳ ಪ್ರಾಪ್ತಿಯುಂಟಾಗುವುದು. ॥ ೬೦ ॥

ಏವಂ ವಿಹಾರೈಃ ಕೌಮಾರೈಃ ಕೌಮಾರಂ ಜಹತುರ್ವ್ರಜೇ ।
ನಿಲಾಯನೈಃ ಸೇತುಬಂಧೈರ್ಮರ್ಕಟೋತ್ಪ್ಲವನಾದಿಭಿಃ
॥ ೬೧ ॥

ಪರೀಕ್ಷಿತನೇ! ಹೀಗೆ ಶ್ರೀಕೃಷ್ಣ ಮತ್ತು ಬಲರಾಮರು ಕುಮಾರಾವಸ್ಥೆಗನುರೂಪವಾಗಿ ಕಣ್ಣುಮುಚ್ಚಾಲೆ, ಸೇತುಬಂಧ, ಮರಕೋತಿ ಆಟ ಮುಂತಾದ ಅನೇಕ ಲೀಲೆಗಳನ್ನು ಮಾಡುತ್ತಾ ತಮ್ಮ ಕುಮಾರಾವಸ್ಥೆಯನ್ನು ವ್ರಜಭೂಮಿಯಲ್ಲಿ ಕಳೆದರು. ॥ ೬೧ ॥

ಹದಿನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೧೪ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಬ್ರಹ್ಮಸ್ತುತಿರ್ನಾಮ ಚತುರ್ದಶೋಽಧ್ಯಾಯಃ ॥ ೧೪ ॥

# ಹದಿನೈದನೆಯ ಅಧ್ಯಾಯ

## ಧೇನುಕಾಸುರ ಉದ್ಧಾರ, ಕಾಲಿಯನಾಗನ ವಿಷದಿಂದ ಗೋಪಬಾಲಕರನ್ನು ಬದುಕಿಸಿದುದು

*ಶ್ರೀಶುಕ ಉವಾಚ*

ತತಶ್ಚ ಪೌಗಂಡವಯಃ ಶ್ರಿತೌ ವ್ರಜೇ
ಬಭೂವತುಸ್ತೌ ಪಶುಪಾಲಸಮ್ಮತೌ ।
ಗಾಶ್ಚಾರಯಂತೌ ಸಖಿಭಿಃ ಸಮಂ ಪದೈ-
ರ್ವೃಂದಾವನಂ ಪುಣ್ಯಮತೀವ ಚಕ್ರತುಃ ॥ ೧ ॥

ತನ್ಮಾಧವೋ ವೇಣುಮುದೀರಯನ್ವೃತೋ
ಗೋಪೈರ್ಗೃಣದ್ಭಿಃ ಸ್ವಯಶೋ ಬಲಾನ್ವಿತಃ ।
ಪಶೂನ್ಪುರಸ್ಕೃತ್ಯ ಪಶವ್ಯಮಾವಿಶದ್
ವಿಹರ್ತುಕಾಮಃ ಕುಸುಮಾಕರಂ ವನಮ್ ॥ ೨ ॥

ತನ್ಮಂಜುಘೋಷಾಲಿಮೃಗದ್ವಿಜಾಕುಲಂ
ಮಹನ್ಮನಃ ಪ್ರಖ್ಯಪಯಃ ಸರಸ್ವತಾ ।
ವಾತೇನ ಜುಷ್ಟಂ ಶತಪತ್ರಗಂಧಿನಾ
ನಿರೀಕ್ಷ್ಯ ರಂತುಂ ಭಗವಾನ್ಮನೋ ದಧೇ ॥ ೩ ॥

ಸ ತತ್ರ ತತ್ರಾರುಣಪಲ್ಲವಶ್ರಿಯಾ
ಫಲಪ್ರಸೂನೋರುಭರೇಣ ಪಾದಯೋಃ ।
ಸ್ಪೃಶಚ್ಛಿಖಾನ್ವೀಕ್ಷ್ಯ ವನಸ್ಪತೀನ್ಮುದಾ
ಸ್ಮಯನ್ನಿವಾಹಾಗ್ರಜಮಾದಿಪೂರುಷಃ ॥ ೪ ॥

*ಶ್ರೀಭಗವಾನುವಾಚ*

ಅಹೋ ಅಮೀ ದೇವವರಾಮರಾರ್ಚಿತಂ
ಪಾದಾಂಬುಜಂ ತೇ ಸುಮನಃಫಲಾರ್ಹಣಮ್ ।
ನಮಂತ್ಯುಪಾದಾಯ ಶಿಖಾಭಿರಾತ್ಮನ-
ಸ್ತಮೋಽಪಹತ್ಯೈ ತರುಜನ್ಮ ಯತ್ಕೃತಮ್ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ–** ಪರೀಕ್ಷಿದ್ರಾಜನೇ! ಶ್ರೀಕೃಷ್ಣ ಬಲರಾಮರಿಗೆ ಈಗ ಪೌಂಗಡಾವಸ್ಥೆಯು ಪ್ರಾಪ್ತವಾಯಿತು. ಈಗ ಅವರಿಗೆ ಹಸುಗಳನ್ನು ಮೇಯಿಸಲು ಸ್ವೀಕೃತಿ ದೊರೆಯಿತು. ಅವರು ತಮ್ಮ ಸ್ನೇಹಿತರಾದ ಗೊಲ್ಲಬಾಲಕರೊಂದಿಗೆ ಹಸುಗಳನ್ನು ಮೇಯಿಸುತ್ತಾ ವೃಂದಾವನಕ್ಕೆ ಹೋಗಿ ತಮ್ಮ ಚರಣಗಳಿಂದ ವೃಂದಾವನವನ್ನು ಅತ್ಯಂತ ಪಾವನಗೊಳಿಸುತ್ತಿದ್ದರು. ॥ ೧ ॥ ಈ ವನವು ಹಸುಗಳಿಗೆ ಹಸುರಾದ ಎಳೆ ಹುಲ್ಲಿನಿಂದ ಕೂಡಿದ್ದು ಬಣ್ಣ-ಬಣ್ಣದ ಹೂವುಗಳ ಆಗರವೇ ಆಗಿತ್ತು. ಮುಂದೆ-ಮುಂದೆ ಹಸುಗಳು ಅವುಗಳ ಹಿಂದೆ-ಹಿಂದೆ ಕೊಳಲನ್ನು ಊದುತ್ತಾ ಶ್ಯಾಮಸುಂದರನು ಅವನ ಬೆನ್ನಿಗೆ ಬಲರಾಮನು ಹಾಗೂ ಶ್ರೀಕೃಷ್ಣನ ಕೀರ್ತಿಯನ್ನು ಹಾಡುತ್ತಿರುವ ಗೋಪಾಲಕರು ಅವರ ಹಿಂದೆ ಹೀಗೆ ವಿಹರಿಸುತ್ತಾ ಅವರು ಆ ವೃಂದಾವನವನ್ನು ಪ್ರವೇಶಿಸಿದರು. ॥ ೨ ॥ ಆ ವನದಲ್ಲಿ ಕೆಲವು ಕಡೆಗಳು ಭೃಂಗಗಳು ಗುಂಜಾರವ ಮಾಡುತ್ತಿದ್ದರೆ, ಕೆಲವು ಕಡೆ ಜಿಂಕೆಗಳು ಗುಂಪು ಗುಂಪಾಗಿ ಅತ್ತಂದಿತ್ತ ನೆಗೆಯುತ್ತಿದ್ದವು. ಕೆಲ ಅಂದವಾದ ಪಕ್ಷಿಗಳು ಸುಮಧುರವಾಗಿ ಧ್ವನಿ ಮಾಡುತ್ತಿದ್ದವು. ಅಲ್ಲಲ್ಲಿ ಅತ್ಯಂತ ಸುಂದರವಾದ ಸರೋವರಗಳಿದ್ದವು. ಅವುಗಳಲ್ಲಿ ಮಹಾತ್ಮರ ಹೃದಯದಂತೆ ಸ್ವಚ್ಛವಾದ ತಿಳಿನೀರು ತುಂಬಿತ್ತು. ಅವುಗಳಲ್ಲಿ ಅರಳಿದ ಕಮಲಗಳ ಸುಗಂಧದಿಂದ ಕೂಡಿದ ಶೀತಲ-ಮಂದ ಮಾರುತವು ಆ ವೃಂದಾವನವನ್ನು ಸೇವಿಸುತ್ತಿತ್ತು. ಆ ಮನೋಹರವಾದ ವನವನ್ನು ನೋಡಿ ಭಗವಂತನು ಅಲ್ಲಿ ವಿಹರಿಸಲು ಮನಸ್ಸಿನಲ್ಲೇ ನಿಶ್ಚಯಿಸಿದನು. ॥ ೩ ॥ ಎಣ್ಣೆಗೆಂಪಿನ ಚಿಗುರುಗಳ ಕಾಂತಿಯಿಂದ ಕೂಡಿ ಫಲ-ಪುಷ್ಪಗಳ ಭಾರದಿಂದ ಬಗ್ಗಿದ ರೆಂಬೆಗಳ ವೃಕ್ಷಗಳು ಶ್ರೀಕೃಷ್ಣನ ಪಾದಗಳಿಗೆ ನಮಸ್ಕರಿಸುತ್ತವೆಯೋ ಎಂಬಂತೆ ಕಾಣುತ್ತಿತ್ತು. ಅಂತಹ ನೇತ್ರಾನಂದಕರವಾದ ಅವನ್ನು ನೋಡಿ ಆದಿದೇವನಾದ ಶ್ರೀಕೃಷ್ಣಪರಮಾತ್ಮನು ಅಣ್ಣನಾದ ಬಲರಾಮನಲ್ಲಿ ಹೇಳಿದನು. ॥ ೪ ॥

**ಭಗವಾನ್ ಶ್ರೀಕೃಷ್ಣನು ಹೇಳುತ್ತಾನೆ –** ದೇವಶಿರೋಮಣಿಯೇ! ಶ್ರೇಷ್ಠರಾದ ದೇವತೆಗಳೇನೋ ನಿನ್ನ ಚರಣಕಮಲಗಳನ್ನು ಪೂಜಿಸುತ್ತಾರೆ. ಆದರೆ ಇಲ್ಲಿ ನೋಡು! ಈ ವೃಕ್ಷಗಳೂ ಕೂಡ ತಮ್ಮ ರೆಂಬೆಗಳ ಮೂಲಕವಾಗಿ ಫಲ-ಪುಷ್ಪಗಳನ್ನು ಹೊತ್ತು ನಿನ್ನ ಚರಣಾರವಿಂದಗಳ ಸೇವೆ ಮಾಡಲು ಬಗ್ಗಿ ನಮಸ್ಕರಿಸುತ್ತವೆ. ಅವುಗಳು ಇಂತಹ ಸೌಭಾಗ್ಯವನ್ನು ಪಡೆಯುವುದಕ್ಕಾಗಿಯೇ ಹಾಗೂ ನಿನ್ನ ದರ್ಶನ, ನಿನ್ನ ಲೀಲಾ ಪ್ರಸಂಗಗಳನ್ನು ಶ್ರವಣ ಮಾಡಿದವರ ಅಜ್ಞಾನವನ್ನು ನಾಶಗೊಳಿಸುವ ಸಲುವಾಗಿ ಈ ಪುಣ್ಯಪ್ರದವಾದ ವೃಂದಾವನದಲ್ಲಿ ವೃಕ್ಷಗಳಾಗಿ ಹುಟ್ಟಿವೆ. ನಿಶ್ಚಯವಾಗಿಯೂ ಇವುಗಳ ಜೀವನವೇ ಧನ್ಯವಾದುದು. ॥ ೫ ॥

ಏತೇಽಲಿನಸ್ತವ ಯಶೋಽಖಿಲಲೋಕತೀರ್ಥಂ
ಗಾಯಂತ ಆದಿಪುರುಷಾನುಪದಂ ಭಜಂತೇ ।
ಪ್ರಾಯೋ ಅಮೀ ಮುನಿಗಣಾ ಭವದೀಯಮುಖ್ಯಾ
ಗೂಢಂ ವನೇಽಪಿ ನ ಜಹತ್ಯನಘಾತ್ಮದೈವಮ್ ॥ ೬ ॥

ನೃತ್ಯಂತ್ಯಮೀ ಶಿಖಿನ ಈಡ್ಯ ಮುದಾ ಹರಿಣ್ಯಃ
ಕುರ್ವಂತಿ ಗೋಪ್ಯ ಇವ ತೇ ಪ್ರಿಯಮೀಕ್ಷಣೇನ ।
ಸೂಕ್ತೈಶ್ಚ ಕೋಕಿಲಗಣಾ ಗೃಹಮಾಗತಾಯ
ಧನ್ಯಾ ವನೌಕಸ ಇಯಾನ್ಹಿ ಸತಾಂ ನಿಸರ್ಗಃ ॥ ೭ ॥

ಧನ್ಯೇಯಮದ್ಯ ಧರಣೀ ತೃಣವೀರುಧಸ್ತ್ವತ್
ಪಾದಸ್ಪೃಶೋ ದ್ರುಮಲತಾಃ ಕರಜಾಭಿಮೃಷ್ಟಾಃ ।
ನದ್ಯೋಽದ್ರಯಃ ಖಗಮೃಗಾಃ ಸದಯಾವಲೋಕೈ-
ರ್ಗೋಪ್ಯೋಽಂತರೇಣ ಭುಜಯೋರಪಿ ಯತ್ಸ್ಪೃಹಾ ಶ್ರೀಃ ॥ ೮ ॥

ಶ್ರೀಶುಕ ಉವಾಚ

ಏವಂ ವೃಂದಾವನಂ ಶ್ರೀಮತ್ಕೃಷ್ಣಃ ಪ್ರೀತಮನಾಃ ಪಶೂನ್ ।
ರೇಮೇ ಸಂಚಾರಯನ್ನದ್ರೇಃ ಸರಿದ್ರೋಧಸ್ಸು ಸಾನುಗಃ ॥ ೯ ॥

ಕ್ವಚಿದ್ಗಾಯತಿ ಗಾಯತ್ಸು ಮದಾಂಧಾಲಿಷ್ವನುವ್ರತೈಃ ।
ಉಪಗೀಯಮಾನಚರಿತಃ ಸ್ರಗ್ವೀ ಸಂಕರ್ಷಣಾನ್ವಿತಃ ॥ ೧೦ ॥

ಕ್ವಚಿಚ್ಚ ಕಲಹಂಸಾನಾಮನುಕೂಜತಿ ಕೂಜಿತಮ್ ।
ಅಭಿನೃತ್ಯತಿ ನೃತ್ಯಂತಂ ಬರ್ಹಿಣಂ ಹಾಸಯನ್ಕ್ವಚಿತ್ ॥ ೧೧ ॥

ಮೇಘಗಂಭೀರಯಾ ವಾಚಾ ನಾಮಭಿರ್ದೂರಗಾನ್ಪಶೂನ್ ।
ಕ್ವಚಿದಾಹ್ವಯತಿ ಪ್ರೀತ್ಯಾ ಗೋಗೋಪಾಲಮನೋಜ್ಞಯಾ ॥ ೧೨ ॥

ಆದಿಪುರುಷನೇ ! ನೀನು ಈ ವೃಂದಾವನದಲ್ಲಿ ನಿನ್ನ ಐಶ್ವರ್ಯವನ್ನು ಮರೆಸಿ ಸಾಮಾನ್ಯ ಬಾಲಕರಂತೆ ಲೀಲೆ ಮಾಡುತ್ತಿದ್ದರೂ ನಿನ್ನ ಶ್ರೇಷ್ಠ ಭಕ್ತರಾದ ಮುನಿಗಳು ತಮ್ಮ ಇಷ್ಟ ದೈವವನ್ನು ಗುರುತಿಸಿಕೊಂಡು ಇಲ್ಲಿಯೂ ಪ್ರಾಯಶಃ ದುಂಬಿಗಳಾಗಿ ನಿನ್ನ ಭುವನ ಪಾವನ ಕೀರ್ತಿಯನ್ನು ನಿರಂತರವಾಗಿ ಹಾಡುತ್ತಾ ನಿನ್ನ ಭಜನೆಯಲ್ಲಿ ತೊಡಗಿರುತ್ತಾರೆ. ಅವರು ಒಂದು ಕ್ಷಣಕ್ಕಾದರೂ ನಿನ್ನನ್ನು ಬಿಡಲು ಬಯಸುವುದಿಲ್ಲ. ॥ ೬ ॥ ಅಣ್ಣಾ ! ನಿಜವಾಗಿ ನೀನೇ ಸ್ತುತಿಸಲು ಯೋಗ್ಯನಾಗಿರುವೆ. ತಮ್ಮ ಮನೆಗೆ ಬಂದಿರುವ ನಿನ್ನನ್ನು ನೋಡಿದ ನವಿಲುಗಳು ನಿನ್ನ ದರ್ಶನದಿಂದ ಆನಂದಿತವಾಗಿ ಕುಣಿಯುತ್ತಾ ಇವೆ. ಜಿಂಕೆಗಳು ಮೃಗನಯನೀ ಗೋಪಿಯರಂತೆ ತಮ್ಮ ಪ್ರೇಮ ಪೂರ್ಣ ಓರೆನೋಟದಿಂದ ನಿನ್ನ ಕುರಿತು ಪ್ರೀತಿಯನ್ನು ಪ್ರಕಟಿಸುತ್ತಾ ನಿನ್ನನ್ನು ಸಂತೋಷಗೊಳಿಸುತ್ತಿರುವರು. ಈ ಕೋಗಿಲೆಗಳು ತಮ್ಮ ಮಧುರ ಪಂಚಮದ ಇಂಚರದಿಂದ ನಿನ್ನನ್ನು ಎಷ್ಟು ಸುಂದರವಾಗಿ ಸ್ವಾಗತಿಸುತ್ತವೆ. ಇವು ವನವಾಸಿಗಳಾಗಿದ್ದರೂ ಧನ್ಯರಾಗಿದ್ದಾರೆ. ಏಕೆಂದರೆ, ಸತ್ಪುರುಷರ ಸ್ವಭಾವವೇ ಹೀಗಿರುತ್ತದೆ. ಅವರು ಮನೆಗೆ ಬಂದಿರುವ ಅತಿಥಿಗೆ ತಮಗೆ ಪ್ರಿಯವಾದ ವಸ್ತುವನ್ನು ಅರ್ಪಿಸಿ ಬಿಡುತ್ತಾರೆ. ॥ ೭ ॥ ಇಂದು ಇಲ್ಲಿಯ ಭೂಮಿಯು ತನ್ನ ಹಚ್ಚ ಹಸಿರು ಹುಲ್ಲಿನೊಂದಿಗೆ ನಿನ್ನ ಚರಣಗಳನ್ನು ಸ್ಪರ್ಶಿಸುತ್ತಾ ಧನ್ಯವಾಗಿದೆ. ಇಲ್ಲಿಯ ಮರ-ಗಿಡ-ಬಳ್ಳಿಗಳು ನಿನ್ನ ಬೆರಳುಗಳ ಸ್ಪರ್ಶವನ್ನು ಪಡೆದು ತಮ್ಮ ಅಹೋಭಾಗ್ಯವೆಂದು ತಿಳಿಯುತ್ತಿವೆ. ನಿನ್ನ ಕರುಣಾಕಟಾಕ್ಷದಿಂದ ನದಿ, ಪರ್ವತ, ಪಶು-ಪಕ್ಷಿ ಎಲ್ಲವೂ ಕೃತಾರ್ಥರಾಗುತ್ತಿದ್ದಾರೆ. ವ್ರಜದಲ್ಲಿರುವ ಗೋಪಿಕೆಯರು ಸ್ವತಃ ಲಕ್ಷ್ಮೀದೇವಿಯೂ ಕೂಡ ಅಪೇಕ್ಷಿಸುತ್ತಿರುವ ನಿನ್ನ ವಕ್ಷಸ್ಥಲದ ಸ್ಪರ್ಶವನ್ನು ಪಡೆದುಕೊಂಡು ಧನ್ಯರಾಗುತ್ತಿದ್ದಾರೆ. ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ ! ಹೀಗೆ ಪರಮಸುಂದರ ವೃಂದಾವನವನ್ನು ನೋಡಿ ಭಗವಾನ್ ಶ್ರೀಕೃಷ್ಣನು ಬಹಳವಾಗಿ ಆನಂದಿತನಾದನು. ಅವನು ತನ್ನ ಮಿತ್ರರಾದ ಗೊಲ್ಲಬಾಲಕರೊಂದಿಗೆ ಗೋವರ್ಧನದ ತಪ್ಪಲುಗಳಲ್ಲಿ, ಯಮುನಾ ತೀರದಲ್ಲಿ ಹಸುಗಳನ್ನು ಮೇಯಿಸುತ್ತಾ ಅನೇಕ ರೀತಿಯ ಲೀಲೆಗಳನ್ನು ಮಾಡತೊಡಗಿದನು. ॥ ೯ ॥ ಒಂದೆಡೆ ಗೋಪಬಾಲಕರು ಭಗವಾನ್ ಶ್ರೀಕೃಷ್ಣನ ಚರಿತ್ರೆಗಳನ್ನು ಆಲಾಪಿಸುತ್ತಾ ಮಧುರವಾಗಿ ಹಾಡುತ್ತಿದ್ದಾರೆ, ಇನ್ನೊಂದೆಡೆ ಬಲರಾಮನೊಂದಿಗೆ ವನಮಾಲೆಯನ್ನು ಧರಿಸಿರುವ ಶ್ರೀಕೃಷ್ಣನು ಮತ್ತ ಭೃಂಗಗಳ ಸುಮಧುರ ಗುಂಜಾರವದೊಂದಿಗೆ ತನ್ನ ಸ್ವರವನ್ನೂ ಸೇರಿಸಿ ಆಲಾಪಿಸತೊಡಗಿದನು. ॥ ೧೦ ॥ ಕೆಲವೊಮ್ಮೆ ಶ್ರೀಕೃಷ್ಣನು ರಾಜಹಂಸಗಳು ಕೂಗಿದಾಗ ಅವುಗಳಂತೆಯೇ ಅವುಗಳ ಜೊತೆಯಲ್ಲೇ ಕೂಗುತ್ತಾ ಅವುಗಳನ್ನು ಅಣಕಿಸುತ್ತಿದ್ದನು. ಕೆಲವೊಮ್ಮೆ ನೃತ್ಯವಾಡುವ ನವಿಲುಗಳೊಡನೆ ತಕ-ತಕನೆ ತಾನೂ ಕುಣಿಯುತ್ತಾ ತನ್ನ ಮಿತ್ರರನ್ನು ಸಂತೋಷಗೊಳಿಸುವನು. ॥ ೧೧ ॥ ಕೆಲವೊಮ್ಮೆ ಬಹಳ ದೂರಕ್ಕೆ ಹೋದ ಹಸುಗಳನ್ನು ಅವುಗಳ ಹೆಸರು ಹಿಡಿದು ಮೇಘದಂತೆ ಗಂಭೀರ ಧ್ವನಿಯಿಂದ ಪ್ರೇಮದಿಂದ ಕರೆಯುವನು. ಅವನ ಈ ಮಧುರ ಧ್ವನಿಯನ್ನು ಕೇಳಿ ಗೋವುಗಳ ಮತ್ತು ಗೋಪಾಲಬಾಲಕರ ಮನಸ್ಸಿಗೆ ಉಲ್ಲಾಸವುಂಟಾಗುತ್ತಿತ್ತು. ॥ ೧೨ ॥

ಚಕೋರಕ್ರೌಞ್ಚಚಕ್ರಾಹ್ವಭಾರದ್ವಾಜಾಂಶ್ಚ ಬರ್ಹಿಣಃ ।
ಅನುರೌತಿ ಸ್ಮ ಸತ್ತ್ವಾನಾಂ ಭೀತವದ್ವ್ಯಾಘ್ರಸಿಂಹಯೋಃ ॥ ೧೩ ॥

ಕ್ವಚಿತ್ಕ್ರೀಡಾಪರಿಶ್ರಾಂತಂ ಗೋಪೋತ್ಸಂಗೋಪಬರ್ಹಣಮ್ ।
ಸ್ವಯಂ ವಿಶ್ರಮಯತ್ಯಾರ್ಯಂ ಪಾದಸಂವಾಹನಾದಿಭಿಃ ॥ ೧೪ ॥

ನೃತ್ಯತೋ ಗಾಯತಃ ಕ್ವಾಪಿ ವಲ್ಗತೋ ಯುಧ್ಯತೋ ಮಿಥಃ ।
ಗೃಹೀತಹಸ್ತೌ ಗೋಪಾಲಾನ್ಹಸಂತೌ ಪ್ರಶಶಂಸತುಃ ॥ ೧೫ ॥

ಕ್ವಚಿತ್ಪಲ್ಲವತಲ್ಪೇಷು ನಿಯುದ್ಧಶ್ರಮಕರ್ಶಿತಃ ।
ವೃಕ್ಷಮೂಲಾಶ್ರಯಃ ಶೇತೇ ಗೋಪೋತ್ಸಂಗೋಪಬರ್ಹಣಃ ॥ ೧೬ ॥

ಪಾದಸಂವಾಹನಂ ಚಕ್ರುಃ ಕೇಚಿತ್ತಸ್ಯ ಮಹಾತ್ಮನಃ ।
ಅಪರೇ ಹತಪಾಪ್ಮಾನೋ ವ್ಯಜನೈಃ ಸಮವೀಜಯನ್ ॥ ೧೭ ॥

ಅನ್ಯೇ ತದನುರೂಪಾಣಿ ಮನೋಜ್ಞಾನಿ ಮಹಾತ್ಮನಃ ।
ಗಾಯಂತಿ ಸ್ಮ ಮಹಾರಾಜ ಸ್ನೇಹಕ್ಲಿನ್ನಧಿಯಃ ಶನೈಃ ॥ ೧೮ ॥

ಏವಂ ನಿಗೂಢಾತ್ಮಗತಿಃ ಸ್ವಮಾಯಯಾ
ಗೋಪಾತ್ಮಜತ್ವಂ ಚರಿತೈರ್ವಿಡಂಬಯನ್ ।
ರೇಮೇ ರಮಾಲಾಲಿತಪಾದಪಲ್ಲವೋ
ಗ್ರಾಮ್ಯೈಃ ಸಮಂ ಗ್ರಾಮ್ಯವದೀಶಚೇಷ್ಟಿತಃ ॥ ೧೯ ॥

ಶ್ರೀದಾಮಾ ನಾಮ ಗೋಪಾಲೋ ರಾಮಕೇಶವಯೋಃ ಸಖಾ ।
ಸುಬಲಸ್ತೋಕಕೃಷ್ಣಾದ್ಯಾ ಗೋಪಾಃ ಪ್ರೇಮ್ಣೇದಮಬ್ರುವನ್ ॥ ೨೦ ॥

ರಾಮ ರಾಮ ಮಹಾಬಾಹೋ ಕೃಷ್ಣ ದುಷ್ಟನಿಬರ್ಹಣ ।
ಇತೋಽವಿದೂರೇ ಸುಮಹದ್ವನಂ ತಾಲಾಲಿಸಂಕುಲಮ್ ॥ ೨೧ ॥

ಫಲಾನಿ ತತ್ರ ಭೂರೀಣಿ ಪತಂತಿ ಪತಿತಾನಿ ಚ ।
ಸಂತಿ ಕಿಂತ್ವವರುದ್ಧಾನಿ ಧೇನುಕೇನ ದುರಾತ್ಮನಾ ॥ ೨೨ ॥

ಕೆಲವೊಮ್ಮೆ ಚಕೋರ, ಕ್ರೌಂಚ, ಹಂಸ, ಚಕ್ರವಾಕ, ಭರದ್ವಾಜ, ನವಿಲು ಮುಂತಾದ ಪಕ್ಷಿಗಳ ಧ್ವನಿಯನ್ನು ಅನುಸರಿಸಿ ಕೂಗಿದರೆ, ಕೆಲವೊಮ್ಮೆ ಹುಲಿ, ಸಿಂಹಗಳಂತೆ ಗರ್ಜಿಸುವನು. ಆ ಗರ್ಜನೆಯಿಂದ ಹೆದರಿದ ಜೀವಿಗಳಂತೆ ತಾನೂ ಕೂಡ ಭಯಗೊಂಡವನಂತೆ ನಟಿಸುವನು. ॥ ೧೩ ॥ ಬಲರಾಮನು ಆಟವಾಡುತ್ತಾಡುತ್ತಾ ಬಳಲಿ ಗೋಪಬಾಲಕನ ತೊಡೆಯಲ್ಲಿ ತಲೆಯನ್ನಿಟ್ಟು ಮಲಗಿದಾಗ ಶ್ರೀಕೃಷ್ಣನು ಅವನ ಕಾಲನ್ನು ಒತ್ತುತ್ತಾ ಬೀಸಣಿಗೆಯಿಂದ ಗಾಳಿ ಬೀಸಿ ಅಣ್ಣನ ಆಯಾಸವನ್ನು ಪರಿಹರಿಸುತ್ತಿದ್ದನು. ॥ ೧೪ ॥ ಒಂದೆಡೆ ಗೊಲ್ಲಬಾಲಕರು ಕುಣಿಯುತ್ತಿದ್ದರು. ಮತ್ತೊಂದೆಡೆಯಲ್ಲಿ ಕುಳಿತು ಹಾಡುತ್ತಿದ್ದರು. ಇನ್ನೊಂದೆಡೆಯಲ್ಲಿ ಕುಸ್ತಿಗಳನ್ನಾಡುತ್ತಿದ್ದರು. ಅಂತಹ ಕಡೆಗಳಲ್ಲಿ ಬಲರಾಮ-ಕೃಷ್ಣರು ಕೈ ಕೈಹಿಡಿದುಕೊಂಡು ನಿಂತುಕೊಂಡು ನಗುತ್ತಾ ಭಲೇ, ಭಲೇ ಎಂದು ಪ್ರೋತ್ಸಾಹಿಸುತ್ತಿದ್ದರು. ॥ ೧೫ ॥ ಕೆಲವೊಮ್ಮೆ ಸ್ವಯಂ ಶ್ರೀಕೃಷ್ಣನು ಗೊಲ್ಲಬಾಲಕರೊಂದಿಗೆ ಕುಸ್ತಿಯಾಡುತ್ತಾ ಬಳಲಿದಾಗ ಒಂದು ಸುಂದರ ವೃಕ್ಷದ ಕೆಳಗೆ ಚಿಗುರುಗಳ ಹಾಸಿಗೆಯಲ್ಲಿ ಯಾರೋ ಗೋಪಬಾಲಕನ ತೊಡೆಯನ್ನೇ ದಿಂಬಾಗಿಸಿ ಪವಡಿಸುತ್ತಿದ್ದನು. ॥ ೧೬ ॥ ಪರೀಕ್ಷಿತನೇ ! ಆ ಸಮಯದಲ್ಲಿ ಪುಣ್ಯಾತ್ಮರಾದ ಗೋಪಬಾಲಕರು ಮಹಾತ್ಮನಾದ ಶ್ರೀಕೃಷ್ಣನ ಸುಂದರವಾದ ಕಾಲುಗಳನ್ನು ಒತ್ತುತ್ತಿದ್ದರು. ನಿಷ್ಪಾಪರಾದ ಬೇರೆ ಬಾಲಕರು ದೊಡ್ಡ ದೊಡ್ಡ ಎಲೆಗಳಿಂದ ಅಥವಾ ಅಂಗವಸ್ತ್ರದಿಂದ ಗಾಳಿ ಬೀಸುತ್ತಿದ್ದರು ॥ ೧೭ ॥ ಸ್ನೇಹಮಗ್ನವಾದ ಮನಸ್ಸಿನಿಂದ ಕೂಡಿದ ಕೆಲವು ಗೋಪಬಾಲಕರು ಶ್ರೀಕೃಷ್ಣನಲೀಲೆಗನುಗುಣವಾಗಿ ಮನೋಜ್ಞವಾಗಿ ಕಿವಿಗಿಂಪಾದ ಗೀತೆಗಳನ್ನು ಅವನ ಸುತ್ತಲೂ ಕುಳಿತುಕೊಂಡು ನಿಧಾನವಾಗಿ ಹಾಡುತ್ತಿದ್ದರು. ॥ ೧೮ ॥ ಭಗವಂತನು ಹೀಗೆ ತನ್ನ ಯೋಗಮಾಯೆಯಿಂದ ತನ್ನ ಐಶ್ವರ್ಯಮಯವಾದ ಸ್ವರೂಪವನ್ನು ಬಚ್ಚಿಟ್ಟುಕೊಂಡಿದ್ದನು. ಅವನು ಮಾಡುವ ಲೀಲೆಗಳು ನಿಜವಾದ ಗೋಪಬಾಲಕರು ಮಾಡುವಂತೆ ಇದ್ದವು. ಸಾಕ್ಷಾತ್ ಲಕ್ಷ್ಮೀದೇವಿಯು ಯಾರ ಚರಣಕಮಲಗಳ ಸೇವೆಯಲ್ಲಿ ನಿರತಳಾಗಿರುತ್ತಿದ್ದಳೋ ಅಂತಹ ಭಗವಂತನು ಈ ಗ್ರಾಮೀಣ ಬಾಲಕರೊಂದಿಗೆ ಅತ್ಯಂತ ಪ್ರೇಮದಿಂದ, ಆನಂದದಿಂದ ಗ್ರಾಮ್ಯರೀತಿಯ ಆಟವಾಡುತ್ತಿದ್ದನು. ಪರೀಕ್ಷಿತನೇ ! ಹೀಗಿದ್ದರೂ ಕೂಡ ಕೆಲವೊಮ್ಮೆ ಅವನ ಐಶ್ವರ್ಯಮಯ ಲೀಲೆಗಳು ಪ್ರಕಟವಾಗುತ್ತಲೇ ಇದ್ದವು.॥ ೧೯ ॥

ಬಲರಾಮ ಮತ್ತು ಶ್ರೀಕೃಷ್ಣರ ಆಪ್ತಸ್ನೇಹಿತರಲ್ಲಿ ಶ್ರೀದಾಮನೆಂಬ ಒಬ್ಬ ಗೋಪಬಾಲಕನು ಪ್ರಧಾನನಾಗಿದ್ದನು. ಒಂದು ದಿನ ಶ್ರೀದಾಮ, ಸುಬಲ, ಸ್ತೋಕಕೃಷ್ಣ (ಚಿಕ್ಕಕೃಷ್ಣ) ಮೊದಲಾದ ಗೊಲ್ಲಬಾಲಕರು ಪ್ರೇಮಪೂರ್ವಕವಾಗಿ ಬಲರಾಮ-ಕೃಷ್ಣರಲ್ಲಿ ಹೀಗೆಂದರು. ॥ ೨೦ ॥ "ಮಹಾಬಾಹುವಾದ ! ಬಲರಾಮನೇ ! ದುಷ್ಟನಾಶಕನಾದ ಶ್ರೀಕೃಷ್ಣನೇ ! ಇಲ್ಲಿ ಸ್ವಲ್ಪ ದೂರದಲ್ಲಿಯೇ ಸಾಲು-ಸಾಲಾಗಿ ತಾಳೆಯ ಮರಗಳಿಂದ ತುಂಬಿದ ಒಂದು ದೊಡ್ಡ ವನವಿದೆ. ॥ ೨೧ ॥ ಅಲ್ಲಿ ಹಲವಾರು ಪಕ್ವವಾದ ತಾಳೆಯ ಹಣ್ಣುಗಳು ಮರದಿಂದ ಬಿದ್ದಿವೆ. ಇನ್ನು ಬೀಳುತ್ತಲೂ ಇವೆ. ಆದರೆ ಅಲ್ಲಿಯೇ ಇರುವ ದುರಾತ್ಮನಾದ ಧೇನುಕಾಸುರನೆಂಬ ದೈತ್ಯನು ಆ ಹಣ್ಣುಗಳನ್ನು ಬೇರೆ ಯಾರೂ ಮುಟ್ಟದಂತೆ ತಡೆದಿರುವನು.॥ ೨೨ ॥

ಸೋऽತಿವೀರ್ಯೋऽಸುರೋ ರಾಮ ಹೇ ಕೃಷ್ಣ ಖರರೂಪಧೃಕ್ ।
ಆತ್ಮತುಲ್ಯಬಲೈರನ್ಯೈರ್ಜ್ಞಾತಿಭಿರ್ಬಹುಭಿರ್ವೃತಃ
॥ ೨೩ ॥

ತಸ್ಮಾತ್ಕೃತನರಾಹಾರಾದ್ಭೀತೈರ್ನೃಭಿರಮಿತ್ರಹನ್ ।
ನ ಸೇವ್ಯತೇ ಪಶುಗಣೈಃ ಪಕ್ಷಿಸಂಘೈರ್ವಿವರ್ಜಿತಮ್
॥ ೨೪ ॥

ವಿದ್ಯಂತೇऽಭುಕ್ತಪೂರ್ವಾಣಿ ಫಲಾನಿ ಸುರಭೀಣಿ ಚ ।
ಏಷ ವೈ ಸುರಭಿರ್ಗಂಧೋ ವಿಷೂಚೀನೋऽವಗೃಹ್ಯತೇ
॥ ೨೫ ॥

ಪ್ರಯಚ್ಛ ತಾನಿ ನಃ ಕೃಷ್ಣ ಗಂಧಲೋಭಿತಚೇತಸಾಮ್ ।
ವಾಂಛಾಸ್ತಿ ಮಹತೀ ರಾಮ ಗಮ್ಯತಾಂ ಯದಿ ರೋಚತೇ
॥ ೨೬ ॥

ಏವಂ ಸುಹೃದ್ವಚಃ ಶ್ರುತ್ವಾ ಸುಹೃತ್ಪ್ರಿಯಚಿಕೀರ್ಷಯಾ ।
ಪ್ರಹಸ್ಯ ಜಗ್ಮತುರ್ಗೋಪೈರ್ವೃತೌ ತಾಲವನಂ ಪ್ರಭೂ
॥ ೨೭ ॥

ಬಲಃ ಪ್ರವಿಶ್ಯ ಬಾಹುಭ್ಯಾಂ ತಾಲಾನ್ಸಂಪರಿಕಂಪಯನ್ ।
ಫಲಾನಿ ಪಾತಯಾಮಾಸ ಮತಂಗಜ ಇವೌಜಸಾ
॥ ೨೮ ॥

ಫಲಾನಾಂ ಪತತಾಂ ಶಬ್ದಂ ನಿಶಮ್ಯಾಸುರರಾಸಭಃ ।
ಅಭ್ಯಧಾವತ್ ಕ್ಷಿತಿತಲಂ ಸನಗಂ ಪರಿಕಂಪಯನ್
॥ ೨೯ ॥

ಸಮೇತ್ಯ ತರಸಾ ಪ್ರತ್ಯಗ್ದ್ವಾಭ್ಯಾಂ ಪದ್ಭ್ಯಾಂ ಬಲಂ ಬಲೀ ।
ನಿಹತ್ಯೋರಸಿ ಕಾಶಬ್ದಂ ಮುಂಚನ್ಪರ್ಯಸರತ್ಖಲಃ
॥ ೩೦ ॥

ಪುನರಾಸಾದ್ಯ ಸಂರಬ್ಧ ಉಪಕ್ರೋಷ್ಟಾ ಪರಾಕ್ ಸ್ಥಿತಃ ।
ಚರಣಾವಪರೌ ರಾಜನ್ಬಲಾಯ ಪ್ರಾಕ್ಷಿಪದ್ರುಷಾ
॥ ೩೧ ॥

ಸ ತಂ ಗೃಹೀತ್ವಾ ಪ್ರಪದೋರ್ಭ್ರಾಮಯಿತ್ವೈಕಪಾಣಿನಾ ।
ಚಿಕ್ಷೇಪ ತೃಣರಾಜಾಗ್ರೇ ಭ್ರಾಮಣತ್ಯಕ್ತ ಜೀವಿತಮ್
॥ ೩೨ ॥

ತೇನಾಹತೋ ಮಹಾತಾಲೋ ವೇಪಮಾನೋ ಬೃಹಚ್ಛಿರಾಃ ।
ಪಾರ್ಶ್ವಸ್ಥಂ ಕಂಪಯನ್ಭಗ್ನಃ ಸ ಚಾನ್ಯಂ ಸೋऽಪಿ ಚಾಪರಮ್
॥ ೩೩ ॥

ಬಲರಾಮ-ಕೃಷ್ಣರೇ ! ಆ ದೈತ್ಯನು ಕತ್ತೆಯ ರೂಪದಿಂದ ಅಲ್ಲೆ ಇರುವನು. ಅವನಾದರೋ ಮಹಾಬಲಶಾಲಿಯಾಗಿದ್ದು ಅವನೊಂದಿಗೆ ಇನ್ನೂ ಅನೇಕ ದೈತ್ಯರು ಬಲಶಾಲಿಯಾಗಿದ್ದು ಕತ್ತೆಗಳ ರೂಪದಿಂದಲೇ ಇದ್ದಾರೆ. ॥ ೨೩ ॥ ಓ ಶತ್ರುಸೂದನನೇ ! ಆ ದೈತ್ಯನು ಇಷ್ಟರವರೆಗೆ ಎಷ್ಟು ಜನರನ್ನು ತಿಂದು ಹಾಕಿರುವನೋ ತಿಳಿಯದು. ಈಗಂತೂ ಮರಣ ಭಯದಿಂದಾಗಿ ಯಾವ ಮನುಷ್ಯನೂ ಅಲ್ಲಿಗೆ ಹೋಗುವುದಿಲ್ಲ. ಮನುಷ್ಯರೇ ಅಲ್ಲ, ಪಶು-ಪಕ್ಷಿಗಳೂ ಕೂಡ ಆ ಕಾಡಿನ ಕಡೆಗೆ ಕಣ್ಣೆತ್ತಿಯೂ ನೋಡುವುದಿಲ್ಲ. ॥ ೨೪ ॥ ತಾಳೆಯ ಫಲಗಳಂತೂ ತುಂಬಾ ಸುಗಂಧಿತವಾಗಿವೆ. ಆದರೆ ನಾವು ಎಂದೂ ಅದನ್ನು ತಿಂದಿಲ್ಲ. ನೋಡಿ, ಸುತ್ತಲೂ ಆ ಹಣ್ಣುಗಳ ಮಂದ-ಮಂದ ಪರಿಮಳವು ಪಸರಿಸಿದೆ. ಸ್ವಲ್ಪ ಮನಸ್ಸಿಟ್ಟು ಗಮನಿಸಿದರೆ ಅದರ ಮಾಧುರ್ಯವನ್ನು ಅರಿಯಬಹುದು. ॥ ೨೫ ॥ ಶ್ರೀಕೃಷ್ಣ ! ಅವುಗಳ ಸುಗಂಧದಿಂದ ನಮ್ಮ ಮನಸ್ಸು ಆಕರ್ಷಿತವಾಗಿದೆ ಹಾಗೂ ಅದನ್ನು ತಿನ್ನಬೇಕೆಂದು ಆಶಿಸುತ್ತಿದೆ. ನೀನು ಆ ಫಲಗಳನ್ನು ನಮಗೆ ತಿನ್ನಿಸು. ಬಲರಾಮ ! ನಮಗೆ ಆ ಫಲಗಳ ಕುರಿತು ಬಹಳ ಉತ್ಕಂಠತೆ ಇದೆ. ನಿಮಗೆ ಉಚಿತವೆನಿಸಿದರೆ ಖಂಡಿತವಾಗಿ ಅಲ್ಲಿಗೆ ಹೋಗೋಣ. ॥ ೨೬ ॥

ತಮ್ಮ ಸ್ನೇಹಿತರು ಆಡಿದ ಮಾತನ್ನು ಕೇಳಿ ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರಿಬ್ಬರೂ ನಗುತ್ತಾ ಅವರನ್ನು ಸಂತೋಷಗೊಳಿಸಲಿಕ್ಕಾಗಿ ಅವರೊಂದಿಗೆ ತಾಳೆವನಕ್ಕೆ ಹೊರಟರು. ॥ ೨೭ ॥ ಅಲ್ಲಿಗೆ ಹೋದ ಮೇಲೆ ಬಲರಾಮನು ತನ್ನ ತೋಳುಗಳಿಂದ ತಾಳೆಮರವನ್ನು ಬಿಗಿದಪ್ಪಿ ಆನೆ ಮರಿಯಂತೆ ತಾಳೆಮರವನ್ನು ಜೋರಾಗಿ ಅಲ್ಲಾಡಿಸಿದನು. ನೂರಾರು ಹಣ್ಣುಗಳು ತೊಪ ತೊಪನೆ ಕೆಳಕ್ಕೆ ಬಿದ್ದವು. ॥ ೨೮ ॥ ಕತ್ತೆಯ ರೂಪದಲ್ಲಿದ್ದ ದೈತ್ಯನು ಹಣ್ಣುಗಳು ಬಿದ್ದ ಶಬ್ದವನ್ನು ಕೇಳಿದಾಗ ಅವನು ಪರ್ವತಗಳಿಂದ ಕೂಡಿದ ಪೃಥ್ವಿಯನ್ನು ನಡುಗಿಸುತ್ತಾ ಅವರೆಡೆಗೆ ಧಾವಿಸಿ ಬಂದನು.॥ ೨೯ ॥ ಅವನು ಮಹಾಬಲಶಾಲಿಯಾಗಿದ್ದನು. ತಾಳೆಯ ಮರವನ್ನು ಅಲ್ಲಾಡಿಸುತ್ತಿದ್ದ ಬಲರಾಮನ ಮುಂದೆ ಹಿಮ್ಮುಖವಾಗಿ ನಿಂತು ಹಿಂಗಾಲುಗಳಿಂದ ಅವನ ಎದೆಗೆ ಒದ್ದನು. ಅನಂತರ ಆ ದುಷ್ಟನು ಜೋರಾಗಿ ಕಿರುಚುತ್ತಾ ಹಿಂದಕ್ಕೆ ಸರಿದು ನಿಂತನು. ॥ ೩೦ ॥ ರಾಜೇಂದ್ರ ! ಆ ಕತ್ತೆಯು ಅತ್ಯಂತ ಕ್ರುದ್ಧವಾಗಿ ಪುನಃ ಕಿರುಚಿತ್ತಾ ಮತ್ತೆ ಬಲರಾಮನ ಬಳಿಗೆ ಬಂದು ಅವನೆಡೆಗೆ ಬೆನ್ನುಮಾಡಿ ಪುನಃ ತನ್ನ ಹಿಂಗಾಲಿನಿಂದ ಬಲರಾಮನಿಗೆ ಒದೆದನು. ॥ ೩೧ ॥ ಬಲರಾಮನು ತನ್ನ ಒಂದೇ ಕೈಯಿಂದ ಅವನ ಎರಡೂ ಕಾಲುಗಳನ್ನು ಹಿಡಿದು ಗರ-ಗರನೆ ತಿರುಗಿಸಿ ತಾಳೆಯ ಮರದ ಮೇಲಕ್ಕೆ ಎಸೆದನು. ಹಾಗೆ ಗರ-ಗರನೆ ತಿರುಗಿಸುವಾಗಲೇ ರಾಕ್ಷಸನ ಪ್ರಾಣಪಕ್ಷಿ ಹಾರಿಹೋಗಿತ್ತು. ॥ ೩೨ ॥ ತಾಳೆಯ ಮರದ ಮೇಲ್ಭಾಗವು ಗರಿಗಳಿಂದ ಅಗಲವಾಗಿತ್ತು. ದೈತ್ಯನು ಮರದ ಮೇಲೆ ಬೀಳುತ್ತಲೇ ಆ ತಾಳೆಮರವು ಉರುಳಿಬಿತ್ತು. ಅದರ ಜೊತೆಗೆ ಅದಕ್ಕೆ ತಾಕಿನಿಂತ ಅನೇಕ ತಾಳೆಮರಗಳೂ ಉರುಳಿ ಬಿದ್ದವು.॥೩೩॥

ಬಲಸ್ಯ ಲೀಲಯೋತ್ಸೃಷ್ಟಖರದೇಹಹತಾಹತಾಃ ।
ತಾಲಾಶ್ಚಕಂಪಿರೇ ಸರ್ವೇ ಮಹಾವಾತೇರಿತಾ ಇವ ॥ ೩೪ ॥

ನೈತಚ್ಚಿತ್ರಂ ಭಗವತಿ ಹ್ಯನಂತೇ ಜಗದೀಶ್ವರೇ ।
ಓತಪ್ರೋತಮಿದಂ ಯಸ್ಮಿಂಸ್ತಂತುಷ್ವಂಗ ಯಥಾ ಪಟಃ ॥ ೩೫ ॥

ತತಃ ಕೃಷ್ಣಂ ಚ ರಾಮಂ ಚ ಜ್ಞಾತಯೋ ಧೇನುಕಸ್ಯ ಯೇ ।
ಕ್ರೋಷ್ಟಾರೋಽಭ್ಯದ್ರವನ್ಸರ್ವೇ ಸಂರಬ್ಧಾ ಹತಬಾಂಧವಾಃ ॥ ೩೬ ॥

ತಾಂಸ್ತಾನಾಪತತಃ ಕೃಷ್ಣೋ ರಾಮಶ್ಚ ನೃಪ ಲೀಲಯಾ ।
ಗೃಹೀತಪಶ್ಚಾಚ್ಚರಣಾನ್ಪ್ರಾಹಿಣೋತ್ತೃಣರಾಜಸು ॥ ೩೭ ॥

ಫಲಪ್ರಕರಸಂಕೀರ್ಣಂ ದೈತ್ಯದೇಹೈರ್ಗತಾಸುಭಿಃ ।
ರರಾಜ ಭೂಃ ಸತಾಲಾಗ್ರೈರ್ಘನೈರಿವ ನಭಸ್ತಲಮ್ ॥ ೩೮ ॥

ತಯೋಸ್ತತ್ಸುಮಹತ್ಕರ್ಮ ನಿಶಾಮ್ಯ ವಿಬುಧಾದಯಃ ।
ಮುಮುಚುಃ ಪುಷ್ಪವರ್ಷಾಣಿ ಚಕ್ರುರ್ವಾದ್ಯಾನಿ ತುಷ್ಟುವುಃ ॥ ೩೯ ॥

ಅಥ ತಾಲಫಲಾನ್ಯಾದನ್ಮನುಷ್ಯಾ ಗತಸಾಧ್ವಸಾಃ ।
ತೃಣಂ ಚ ಪಶವಶ್ಚೇರುರ್ಹತಧೇನುಕಕಾನನೇ ॥ ೪೦ ॥

ಕೃಷ್ಣಃ ಕಮಲಪತ್ರಾಕ್ಷಃ ಪುಣ್ಯಶ್ರವಣಕೀರ್ತನಃ ।
ಸ್ತೂಯಮಾನೋಽನುಗೈರ್ಗೋಪೈಃ ಸಾಗ್ರಜೋ ವ್ರಜಮಾವ್ರಜತ್ ॥ ೪೦ ॥

ತಂ ಗೋರಜಚ್ಛುರಿತಕುಂತಲಬದ್ಧಬರ್ಹ-
ವನ್ಯಪ್ರಸೂನರುಚಿರೇಕ್ಷಣಚಾರುಹಾಸಮ್ ।
ವೇಣುಂ ಕ್ವಣಂತಮನುಗೈರನುಗೀತಕೀರ್ತಿಂ
ಗೋಪ್ಯೋ ದಿದೃಕ್ಷಿತದೃಶೋಽಭ್ಯಗಮನ್ಸಮೇತಾಃ ॥ ೪೨ ॥

ಪೀತ್ವಾ ಮುಕುಂದಮುಖಸಾರಘಮಕ್ಷಿಭೃಂಗೈ-
ಸ್ತಾಪಂ ಜಹುರ್ವಿರಹಜಂ ವ್ರಜಯೋಷಿತೋಽಹ್ನಿ ।
ತತ್ಸತ್ಕೃತಿಂ ಸಮಧಿಗಮ್ಯ ವಿವೇಶ ಗೋಷ್ಠಂ
ಸವ್ರೀಡಹಾಸವಿನಯಂ ಯದಪಾಂಗಮೋಕ್ಷಮ್ ॥ ೪೩ ॥

ಬಲರಾಮನಿಗೆ ಇದೊಂದು ಲೀಲೆಯೇ ಆಗಿತ್ತು. ಆದರೆ ಅವನಿಂದ ಎಸೆಯಲ್ಪಟ್ಟ ಕತ್ತೆಯ ಶರೀರದ ಏಟಿನಿಂದ ಅಲ್ಲಿಯ ಎಲ್ಲ ಮರಗಳೂ ಬಿರುಗಾಳಿಗೆ ಸಿಲುಕಿದಂತೆ ನಡುಗಿ ಹೋದುವು. ॥ ೩೪ ॥ ಭಗವಾನ್ ಬಲರಾಮನು ಸಾಕ್ಷಾತ್ ಜಗದೀಶ್ವರನೇ ಆಗಿದ್ದಾನೆ. ಅವನಲ್ಲಿ ಈ ಜಗತ್ತು ಬಟ್ಟೆಯಲ್ಲಿ ದಾರವು ಹಾಸುಹೊಕ್ಕಾಗಿರುವಂತೆ ಹೆಣೆದುಕೊಂಡಿದೆ. ಹಾಗಿರುವಾಗ ಅವನ ಕುರಿತು ಇದರಲ್ಲಿ ಆಶ್ಚರ್ಯವೇನಿದೆ. ॥ ೩೫ ॥ ಆ ಸಮಯದಲ್ಲಿ ಧೇನುಕಾಸುರನ ಜಾತಿ-ಬಾಂಧವರೆಲ್ಲರೂ ಅತ್ಯಂತ ಕುಪಿತರಾಗಿ ಗಟ್ಟಿಯಾಗಿ ಕಿರುಚಿಕೊಳ್ಳುತ್ತಾ ಬಲರಾಮ ಕೃಷ್ಣರನ್ನು ರಭಸದಿಂದ ಆಕ್ರಮಿಸಿದರು. ॥ ೩೬ ॥ ರಾಜನೇ ! ತಮ್ಮ ಬಳಿಗೆ ಬಂದ ಕತ್ತೆಯ ರೂಪದ ರಾಕ್ಷಸರೆಲ್ಲರನ್ನೂ ರಾಮ-ಕೃಷ್ಣರು ಅವುಗಳ ಹಿಂಗಾಲುಗಳನ್ನು ಹಿಡಿದು ಒಬ್ಬೊಬ್ಬರನ್ನಾಗಿ ಗರ-ಗರನೆ ತಿರುಗಿಸುತ್ತಾ ಲೀಲಾಜಾಲವಾಗಿ ತಾಳೆಮರದ ಮೇಲಕ್ಕೆ ಎಸೆಯ ಗೊಡಗಿದರು. ॥ ೩೭ ॥ ಆಗ ಅಲ್ಲಿಯ ಭೂಮಿಯು ತಾಳೆ ಹಣ್ಣುಗಳಿಂದ, ಮುರಿದು ಬಿದ್ದ ಮರಗಳಿಂದ ಹಾಗೂ ದೈತ್ಯರ ಪ್ರಾಣಹೀನ ಶರೀರಗಳಿಂದ-ಮೋಡಗಳಿಂದ ಆಕಾಶವು ತುಂಬಿ ಹೋಗಿರುವಂತೆ ಮುಚ್ಚಿ ಹೋಗಿ ಶೋಭಿಸುತ್ತಿತ್ತು. ॥ ೩೮ ॥ ಬಲರಾಮ-ಶ್ರೀಕೃಷ್ಣರ ಈ ಮಂಗಲಮಯ ಲೀಲೆಯನ್ನು ನೋಡಿ ದೇವತೆಗಳು ಅವರ ಮೇಲೆ ಪುಷ್ಪವೃಷ್ಟಿಗರೆದರು. ವಾದ್ಯಗಳನ್ನು ನುಡಿಸುತ್ತಾ ಸ್ತುತಿಸತೊಡಗಿದರು. ॥ ೩೯ ॥ ಧೇನುಕಾಸುರನು ಸತ್ತ ದಿನದಿಂದ ಜನರು ಧೈರ್ಯವಾಗಿ ಆ ವನಕ್ಕೆ ಹೋಗಿ ತಾಳೆ ಫಲಗಳನ್ನು ತಿನ್ನ ತೊಡಗಿದರು. ಪಶುಗಳೂ ಸ್ವಚ್ಛಂದವಾಗಿ ಅಲ್ಲಿ ಹುಲ್ಲು ಮೇಯತೊಡಗಿದವು. ॥ ೪೦ ॥

ಇದಾದ ಬಳಿಕ ಕಮಲದಳ ಲೋಚನನಾದ ಭಗವಾನ್ ಶ್ರೀಕೃಷ್ಣನು ಅಣ್ಣನಾದ ಬಲರಾಮನೊಂದಿಗೆ ವ್ರಜಕ್ಕೆ ಆಗಮಿಸಿದನು. ಆಗ ಅವನ ಸಂಗಡಿಗರಾದ ಗೋಪಬಾಲಕರು ಭಗವಂತನ ಲೀಲೆಗಳ ಶ್ರವಣ-ಕೀರ್ತನವೇ ಎಲ್ಲಕ್ಕೂ ಮಿಗಿಲಾದ ಪವಿತ್ರವಾಗಿ ಇರುವುದರಿಂದ ಆ ಕೀರ್ತನೆಗಳಿಂದ ಸ್ತುತಿಸುತ್ತಾ ಹಿಂದೆ-ಹಿಂದೆಯೇ ಬರುತ್ತಿದ್ದರು. ॥ ೪೧ ॥ ಆ ಸಮಯದಲ್ಲಿ ಶ್ರೀಕೃಷ್ಣನ ಗುಂಗುರು ಕೂದಲುಗಳಲ್ಲಿ ಹಸುಗಳ ಗೊರಸಿನಿಂದ ಎದ್ದ ಧೂಳು ತುಂಬಿತ್ತು. ತಲೆಯಲ್ಲಿ ನವಿಲುಗರಿಗಳ ಮುಕುಟವಿತ್ತು. ಕೂದಲುಗಳಲ್ಲಿ ಅಂದವಾದ ವನಪುಷ್ಪಗಳು ಮುಡಿದಿದ್ದುವು. ಅವನ ಕಡೆಗಣ್ಣ ನೋಟವೂ, ಹುಸಿನಗೆಯೂ ಸುಮಧುರವಾಗಿತ್ತು. ಅವನು ಕರ್ಣಾನಂದಕರವಾಗಿ ಮುರಳಿಯನ್ನು ನುಡಿಸುತ್ತಿದ್ದನು. ಜೊತೆಗೆ ಗೊಲ್ಲಬಾಲಕರು ಅವನ ಕೀರ್ತಿಯನ್ನು ಹಾಡುತ್ತಿದ್ದರು. ಕೊಳಲಿನ ಧ್ವನಿಯನ್ನು ಕೇಳಿದ ಅನೇಕ ಗೋಪಿಯರು ಒಟ್ಟಾಗಿ ಹಟ್ಟಿಯಿಂದ ಹೊರಬಂದು ಅವನನ್ನೇ ದಿಟ್ಟಿಸಿ ನೋಡುತ್ತಿದ್ದರು. ಅವರ ಕಣ್ಣುಗಳು ಎಷ್ಟೋ ಹೊತ್ತಿನಿಂದ ಅವನ ದರ್ಶನಕ್ಕಾಗಿ ಕಾತರವಾಗಿ ಇದ್ದವು. ॥ ೪೨ ॥ ಗೋಪಿಯರು ತಮ್ಮ ಕಣ್ಣುಗಳೆಂಬ ಭ್ರಮರಗಳಿಂದ ಭಗವಂತನ ಮುಖಾರವಿಂದದ ಮಕರಂದ ರಸವನ್ನು ಪಾನಮಾಡಿ ಇಡೀ ದಿನದ ಅಗಲುವಿಕೆಯ ತಾಪವನ್ನು ತಣಿಸಿಕೊಂಡರು. ಭಗವಂತನೂ ಕೂಡ ಅವರ ಲಜ್ಜೆಯಿಂದ ಕೂಡಿದ ಮುಗುಳ್ನಗೆಯನ್ನು, ಪ್ರೇಮಪೂರ್ಣ ಓರೆನೋಟಗಳ ಸತ್ಕಾರವನ್ನು ಸ್ವೀಕರಿಸುತ್ತಾ ವ್ರಜವನ್ನು ಪ್ರವೇಶಿಸಿದನು. ॥ ೪೩. ॥

ತಯೋರ್ಯಶೋದಾರೋಹಿಣ್ಯೌ ಪುತ್ರಯೋಃ ಪುತ್ರವತ್ಸಲೇ ।
ಯಥಾಕಾಮಂ ಯಥಾಕಾಲಂ ವ್ಯಧತ್ತಾಂ ಪರಮಾಶಿಷಃ ॥ ೪೪ ॥

ಗತಾಧ್ವಾನಶ್ರಮೌ ತತ್ರ ಮಜ್ಜನೋನ್ಮರ್ದನಾದಿಭಿಃ ।
ನೀವೀಂ ವಸಿತ್ವಾ ರುಚಿರಾಂ ದಿವ್ಯಸ್ರಗ್ಗಂಧಮಂಡಿತೌ ॥ ೪೫ ॥

ಜನನ್ಯುಪಹೃತಂ ಪ್ರಾಶ್ಯ ಸ್ವಾದ್ವನ್ನಮುಪಲಾಲಿತೌ ।
ಸಂವಿಶ್ಯ ವರಶಯ್ಯಾಯಾಂ ಸುಖಂ ಸುಷುಪತುರ್ವ್ರಜೇ ॥ ೪೬ ॥

ಏವಂ ಸ ಭಗವಾನ್ಕೃಷ್ಣೋ ವೃಂದಾವನಚರಃ ಕ್ವಚಿತ್ ।
ಯಯೌ ರಾಮಮೃತೇ ರಾಜನ್ಕಾಲಿಂದೀಂ ಸಖಿಭಿರ್ವೃತಃ ॥ ೪೭ ॥

ಅಥ ಗಾವಶ್ಚ ಗೋಪಾಶ್ಚ ನಿದಾಘಾತಪಪೀಡಿತಾಃ ।
ದುಷ್ಟಂ ಜಲಂ ಪಪುಸ್ತಸ್ಯಾಸ್ತೃಷಾರ್ತಾ ವಿಷದೂಷಿತಮ್ ॥ ೪೮ ॥

ವಿಷಾಂಭಸ್ತದುಪಸ್ಪೃಶ್ಯ ದೈವೋಪಹತಚೇತಸಃ ।
ನಿಪೇತುರ್ವ್ಯಸವಃ ಸರ್ವೇ ಸಲಿಲಾಂತೇ ಕುರೂದ್ವಹ ॥ ೪೯ ॥

ವೀಕ್ಷ್ಯ ತಾನ್ವೈ ತಥಾಭೂತಾನ್ಕೃಷ್ಣೋ ಯೋಗೇಶ್ವರೇಶ್ವರಃ ।
ಈಕ್ಷಯಾಮೃತವರ್ಷಿಣ್ಯಾ ಸ್ವನಾಥಾನ್ಸಮಜೀವಯತ್ ॥ ೫೦ ॥

ತೇ ಸಂಪ್ರತೀತಸ್ಮೃತಯಃ ಸಮುತ್ಥಾಯ ಜಲಾಂತಿಕಾತ್ ।
ಆಸನ್ಸುವಿಸ್ಮಿತಾಃ ಸರ್ವೇ ವೀಕ್ಷಮಾಣಾಃ ಪರಸ್ಪರಮ್ ॥ ೫೧ ॥

ಅನ್ವಮಂಸತ ತದ್ರಾಜನ್ಗೋವಿಂದಾನುಗ್ರಹೇಕ್ಷಿತಮ್ ।
ಪೀತ್ವಾ ವಿಷಂ ಪರೇತಸ್ಯ ಪುನರುತ್ಥಾನಮಾತ್ಮನಃ ॥ ೫೨ ॥

ಆತ್ತ ತಾಯಿ ಯಶೋದೆಯ ಮತ್ತು ರೋಹಿಣಿಯ ಹೃದಯಗಳು ವಾತ್ಸಲ್ಯಭಾವದಿಂದ ಉಕ್ಕಿಹರಿಯುತ್ತಿತ್ತು. ಶ್ಯಾಮ ಮತ್ತು ರಾಮರು ಮನೆಗೆ ಬರುತ್ತಲೇ ಅವರು ಅವರ ಇಚ್ಛೆಗನುಸಾರ ಹಾಗೂ ಸಮಯಕ್ಕನುಸಾರ ಮೊದಲೇ ಸಿದ್ಧಪಡಿಸಿದ್ದ ಭಕ್ಷ್ಯ ಭೋಜ್ಯಗಳನ್ನು ಮೃಷ್ಟಾನ್ನವನ್ನೂ ಅವರಿಗೆ ತಿನ್ನಿಸಿದರು. ॥ ೪೪ ॥ ತಾಯಂದಿರು ಅವರಿಗೆ ಎಣ್ಣೆಹಚ್ಚಿ ಸ್ನಾನಮಾಡಿಸಿದರು. ಅದರಿಂದ ಅವರ ಇಡೀ ದಿನದ ಬಳಲಿಕೆಯು ದೂರವಾಯಿತು. ಮತ್ತೆ ಅವರಿಗೆ ಸುಂದರವಾದ ವಸ್ತ್ರಗಳನ್ನು ತೊಡಿಸಿ ದಿವ್ಯ ಪುಷ್ಪಮಾಲಿಕೆಗಳಿಂದ ಸಿಂಗರಿಸಿ, ಚಂದನವನ್ನು ಪೂಸಿದರು. ॥ ೪೫ ॥ ಬಳಿಕ ಸೋದರರಿಬ್ಬರೂ ತಾಯಂದಿರು ಬಡಿಸಿದ ಸ್ವಾದಿಷ್ಟವಾದ ಭೋಜನವನ್ನು ಮಾಡಿದರು. ಅನಂತರ ಅವರನ್ನು ಮುದ್ದಿಸುತ್ತಾ ಯಶೋದೆ ಮತ್ತು ರೋಹಿಣಿಯರು ಸುಂದರವಾದ ಮೃದುವಾದ ಶಯ್ಯೆಯಲ್ಲಿ ಮಲಗಿಸಿದರು. ರಾಮ-ಕೃಷ್ಣರು ಸುಖವಾಗಿ ನಿದ್ರಿಸಿದರು. ॥ ೪೬ ॥

ಭಗವಾನ್ ಶ್ರೀಕೃಷ್ಣನು ಹೀಗೆ ವೃಂದಾವನದಲ್ಲಿ ಅನೇಕ ಲೀಲೆಗಳನ್ನು ನಡೆಸಿದನು. ಒಂದು ದಿನ ಅವನು ತನ್ನ ಸ್ನೇಹಿತರೊಂದಿಗೆ ಯಮುನಾತೀರಕ್ಕೆ ಹೋದನು. ರಾಜನೇ ! ಆ ದಿನ ಬಲರಾಮನು ಅವನೊಂದಿಗೆ ಹೋಗಿರಲಿಲ್ಲ. ॥ ೪೭ ॥ ಆ ಸಮಯದಲ್ಲಿ ಗೋ-ಗೋಪಾಲಕರು ಬೇಸಿಗೆಯ ಬಿಸಿಲಿನಿಂದ ಬಾಯಾರಿದ್ದು ಅವರ ಗಂಟಲು ಒಣಗಿ ಹೋಗಿತ್ತು. ಇದರಿಂದಾಗಿ ಅವರು ಯಮುನಾನದಿಯ ವಿಷಮಿಶ್ರಿತ ನೀರನ್ನು ಯಥೇಚ್ಛವಾಗಿ ಕುಡಿದರು. ॥ ೪೮ ॥ ಪರೀಕ್ಷಿತನೇ ! ದುರದೃಷ್ಟವಶಾತ್ ಈ ವಿಷಯವು ಅವರಿಗೆ ತಿಳಿದಿರಲಿಲ್ಲ. ಆ ವಿಷಮಿಶ್ರಿತ ನೀರನ್ನು ಕುಡಿಯುತ್ತಲೇ ಎಲ್ಲ ಗೋವುಗಳು, ಗೋಪಾಲಕರು ಗತಪ್ರಾಣರಾಗಿ ಯಮುನಾತೀರದಲ್ಲಿ ಬಿದ್ದುಬಿಟ್ಟರು. ॥ ೪೯ ॥ ಅವರ ಇಂತಹ ಸ್ಥಿತಿಯನ್ನು ನೋಡಿದ ಯೋಗೇಶ್ವರರಿಗೂ ಈಶ್ವರನಾದ ಭಗವಾನ್ ಶ್ರೀಕೃಷ್ಣನು ತನ್ನ ಅಮೃತವನ್ನು ಸುರಿಸುವ ಕೃಪಾದೃಷ್ಟಿಯಿಂದ ಅವರನ್ನು ಬದುಕಿಸಿದನು. ಅವರಿಗೆ ಸ್ವಾಮಿಯೂ ಸರ್ವಸ್ವವೂ ಏಕಮಾತ್ರ ಶ್ರೀಕೃಷ್ಣನೇ ಆಗಿದ್ದನು. ॥ ೫೦ ॥ ಪರೀಕ್ಷಿತನೇ ! ಚೇತರಿಸಿಕೊಂಡು ಅವರೆಲ್ಲರೂ ಯಮುನಾತೀರದಲ್ಲಿ ಎದ್ದು ನಿಂತು ಆಶ್ಚರ್ಯಚಕಿತರಾಗಿ ಒಬ್ಬರು ಮತ್ತೊಬ್ಬರನ್ನು ನೋಡತೊಡಗಿದರು. ॥ ೫೧ ॥ ರಾಜೇಂದ್ರ ! ಕೊನೆಗೆ 'ನಾವೆಲ್ಲರೂ ವಿಷಯುಕ್ತ ನೀರನ್ನು ಕುಡಿದು ಸತ್ತುಹೋಗಿದ್ದೇವು. ಆದರೆ ನಮ್ಮ ಶ್ರೀಕೃಷ್ಣನೇ ತನ್ನ ಅನುಗ್ರಹ ತುಂಬಿದ ದೃಷ್ಟಿಯಿಂದ ನಮ್ಮನ್ನು ಪುನಃ ಬದುಕಿಸಿದನು' ಎಂದು ಅವರೆಲ್ಲರೂ ನಿಶ್ಚಯಿಸಿಕೊಂಡರು. ॥ ೫೨ ॥

*ಹದಿನೈದನೆಯ ಅಧ್ಯಾಯವು ಮುಗಿಯಿತು. ॥ ೧೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಧೇನುಕವಧೋ ನಾಮ ಪಂಚದಶೋಽಧ್ಯಾಯಃ ॥ ೧೫ ॥

# ಹದಿನಾರನೆಯ ಅಧ್ಯಾಯ

## ಕಾಲಿಯನ ಮೇಲೆ ಕೃಪೆದೋರಿದುದು

*ಶ್ರೀಶುಕ ಉವಾಚ*

**ವಿಲೋಕ್ಯ ದೂಷಿತಾಂ ಕೃಷ್ಣಾಂ ಕೃಷ್ಣಃ ಕೃಷ್ಣಾಹಿನಾ ವಿಭುಃ ।**
**ತಸ್ಯಾ ವಿಶುದ್ಧಿ ಮನ್ವಿಚ್ಛನ್ಸರ್ಪಂ ತಮುದವಾಸಯತ್ ॥ ೧ ॥**

*ರಾಜೋವಾಚ*

**ಕಥಮಂತರ್ಜಲೇಽಗಾಧೇ ನ್ಯಗೃಹ್ಣಾದ್ಭಗವಾನಹಿಮ್ ।**
**ಸ ವೈ ಬಹುಯುಗಾವಾಸಂ ಯಥಾಸೀದ್ವಿಪ್ರ ಕಥ್ಯತಾಮ್ ॥ ೨ ॥**

**ಬ್ರಹ್ಮನ್ಭಗವತಸ್ತಸ್ಯ ಭೂಮ್ನಃ ಸ್ವಚ್ಛಂದವರ್ತಿನಃ ।**
**ಗೋಪಾಲೋದಾರಚರಿತಂ ಕಸ್ತೃಪ್ಯೇತಾಮೃತಂ ಜುಷನ್ ॥ ೩ ॥**

*ಶ್ರೀಶುಕ ಉವಾಚ*

**ಕಾಲಿಂದ್ಯಾಂ ಕಾಲಿಯಸ್ಯಾಸೀದ್ಧ್ರದಃ ಕಶ್ಚಿದ್ವಿಷಾಗ್ನಿನಾ ।**
**ಶ್ರಪ್ಯಮಾಣಪಯಾ ಯಸ್ಮಿನ್ಪತಂತ್ಯುಪರಿಗಾಃ ಖಗಾಃ ॥ ೪ ॥**

**ವಿಪ್ರುಷ್ಮತಾ ವಿಷೋದೋರ್ಮಿಮಾರುತೇನಾಭಿಮರ್ಶಿತಾಃ ।**
**ಮ್ರಿಯಂತೇ ತೀರಗಾ ಯಸ್ಯ ಪ್ರಾಣಿನಃ ಸ್ಥಿರಜಂಗಮಾಃ ॥ ೫ ॥**

**ತಂ ಚಂಡವೇಗವಿಷವೀರ್ಯಮವೇಕ್ಷ್ಯ ತೇನ**
**ದುಷ್ಟಾಂ ನದೀಂ ಚ ಖಲಸಂಯಮನಾವತಾರಃ ।**
**ಕೃಷ್ಣಃ ಕದಂಬಮಧಿರುಹ್ಯ ತತೋಽತಿತುಂಗ-**
**ಮಾಸ್ಫೋಟ್ಯ ಗಾಢರಶನೋ ನ್ಯಪತದ್ವಿಷೋದೇ ॥ ೬ ॥**

**ಸರ್ಪಹ್ರದಃ ಪುರುಷಸಾರನಿಪಾತವೇಗ-**
**ಸಂಕ್ಷೋಭಿತೋರಗವಿಷೋಚ್ಛ್ವಸಿತಾಂಬುರಾಶಿಃ ।**
**ಪರ್ಯಕ್ಪ್ಲುತೋ ವಿಷಕಷಾಯವಿಭೀಷಣೋರ್ಮಿ-**
**ರ್ಧಾವನ್ ಧನುಃಶತಮನಂತಬಲಸ್ಯ ಕಿಂ ತತ್ ॥ ೭ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಮಹಾವಿಷವುಳ್ಳ ಕಾಳಿಯನಾಗನು ಯಮುನೆಯ ನೀರನ್ನು ವಿಷ ಭರಿತವನ್ನಾಗಿ ಮಾಡಿಬಿಟ್ಟಿರುವನೆಂಬ ವಿಷಯವನ್ನು ತಿಳಿದ ಭಗವಾನ್ ಶ್ರೀಕೃಷ್ಣನು ಯಮುನೆಯ ನೀರನ್ನು ಶುದ್ಧಗೊಳಿಸ ಲೋಸುಗ ಆ ಸರ್ಪವನ್ನು ಅಲ್ಲಿಂದ ಓಡಿಸಿಬಿಟ್ಟನು. ॥ ೧ ॥

**ಪರೀಕ್ಷಿತರಾಜನು ಕೇಳಿದನು** – ವಿಪ್ರರ್ಷಿಯೇ! ಭಗವಾನ್ ಶ್ರೀಕೃಷ್ಣನು ಯಮುನೆಯ ಅಗಾಧವಾದ ನೀರಿನಲ್ಲಿದ್ದ ಕಾಳಿಯ ನನ್ನು ಹೇಗೆ ದಮನ ಮಾಡಿದನು? ಕಾಳಿಯ ಸರ್ಪವಾದರೋ ಜಲಚರಪ್ರಾಣಿಯಲ್ಲ, ಹಾಗಿದ್ದರೂ ಅದು ಅನೇಕ ಯುಗಗಳಿಂದ ಅಲ್ಲಿ ಹೇಗೆ ವಾಸವಾಗಿತ್ತು? ಈ ವಿಷಯವನ್ನು ದಯವಿಟ್ಟು ತಿಳಿಸಿರಿ. ॥ ೨ ॥ ಬ್ರಾಹ್ಮಣಶ್ರೇಷ್ಠರೇ! ಪರಬ್ರಹ್ಮ ಸ್ವರೂಪನೂ, ತನ್ನ ಇಚ್ಛಾನುಸಾರವಾಗಿ ವರ್ತಿಸುವವನೂ ಆದ ಶ್ರೀಕೃಷ್ಣನು ಗೋಪಾಲ ರೂಪದಿಂದ ನಡೆಸಿದ ಅದ್ಭುತ ಲೀಲಾಮೃತವನ್ನು ಎಷ್ಟು ಕುಡಿ ದರೂ ತೃಪ್ತಿಯುಂಟಾಗುವುದಿಲ್ಲ. ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಯಮುನಾನದಿಯಲ್ಲಿ ಕಾಲಿಯನಾಗಕ್ಕೆ ನೆಲೆಯಾದ ಒಂದು ಕುಂಡವಿತ್ತು. ಅದರ ನೀರು ವಿಷದಿಂದ ಕುದಿಯುತ್ತಿತ್ತು. ಆ ಕುಂಡದ ಮೇಲೆ ಹಾರಿ ಹೋಗುತ್ತಿದ್ದ ಪಕ್ಷಿಗಳು ವಿಷದ ಬೇಗೆಯನ್ನು ತಾಳಲಾರದೆ ಕುಂಡದಲ್ಲೇ ಸತ್ತು ಬೀಳುತ್ತಿದ್ದವು. ॥ ೪ ॥ ಅಲೆಗಳ ಮೂಲಕವಾಗಿ ಹೊರಬಂದ ತುಂತುರುಗಳಿಂದ ಕೂಡಿದ ವಿಷದ ಗಾಳಿಯು ತೀರಪ್ರದೇಶದಲ್ಲಿ ಬೀಸಿ ಅಲ್ಲಿದ್ದ ಮರ-ಬಳ್ಳಿಗಳು ಸುಟ್ಟುಹೋಗಿ, ಪಶು-ಪಕ್ಷಿಗಳು ಸತ್ತು ಹೋಗುತ್ತಿದ್ದವು. ॥ ೫ ॥ ಪರೀಕ್ಷಿತನೇ! ದುಷ್ಟರದಮನಕ್ಕಾಗಿಯೇ ಅವತರಿಸಿದ್ದ ಭಗವಂತನು ಸರ್ಪದ ವಿಷವು ಪ್ರಚಂಡವಾಗಿರುವುದನ್ನು, ಭಯಂಕರವಾದ ಆ ವಿಷವೇ ಕಾಳಿಯ ಸರ್ಪದ ಬಲವಾಗಿರುವುದೆಂಬುದನ್ನೂ, ಆ ಕಾರಣದಿಂದಲೇ ತಾನು ವಿಹರಿಸುವ ಯಮುನೆಯ ಜಲವೂ ವಿಷದಿಂದ ದೂಷಿತವಾಗಿರುವುದೆಂಬುದನ್ನು ತಿಳಿದುಕೊಂಡನು. ಆಗ ಭಗವಾನ್ ಶ್ರೀಕೃಷ್ಣನು ಸೊಂಟಕ್ಕೆ ಪಟ್ಟಿಯನ್ನು ಬಿಗಿದು ಒಂದು ಎತ್ತರವಾದ ಕದಂಬ ವೃಕ್ಷದ ಮೇಲೇರಿ ಕೈಗಳಿಂದ ಎರಡೂ ಭುಜಗಳನ್ನು ತಟ್ಟಿಕೊಳ್ಳುತ್ತಾ ಮಡುವಿನೊಳಗೆ ಧುಮುಕಿದನು. ॥ ೬ ॥ ಯಮುನೆಯ ನೀರು ಸರ್ಪದ ವಿಷದಿಂದ ಮೊದಲೇ ಕುದಿದು ಉಕ್ಕುತ್ತಿತ್ತು. ಅದರ ತೆರೆಗಳು ಕೆಂಪು-ಹಳದಿಯಾಗಿದ್ದು ಅತ್ಯಂತ ಭಯಂಕರವಾಗಿ ಮೇಲೇಳುತ್ತಿದ್ದುವು. ಪುರುಷೋತ್ತಮ ನಾದ ಭಗವಾನ್ ಶ್ರೀಕೃಷ್ಣನು ಹಾರಿದ್ದರಿಂದ ಅದರ ನೀರು ಇನ್ನು ಹೆಚ್ಚು ಉಕ್ಕತೊಡಗಿತು. ಆಗಲಾದರೋ ಕಾಳಿಯ ಮಡುವಿನ ನೀರು ಅತ್ತ-ಇತ್ತ ಹಾರಿ ನೂರು ಗಜಗಳಷ್ಟು ಹರಡಿಕೊಂಡಿತು. ಅಚಿಂತ್ಯ ಅನಂತ ಬಲಶಾಲಿಯಾದ ಭಗವಾನ್ ಶ್ರೀಕೃಷ್ಣನಿಗಾಗಿ ಇದರಲ್ಲಿ ಯಾವುದೇ ಆಶ್ಚರ್ಯದ ವಿಷಯವಾಗಿರಲಿಲ್ಲ. ॥ ೭ ॥

ತಸ್ಯ ಹ್ರದೇ ವಿಹರತೋ ಭುಜದಂಡಘೂರ್ಣ-
ವಾರ್ಘೋಷಮಂಗ ವರವಾರಣವಿಕ್ರಮಸ್ಯ ।
ಆಶ್ರುತ್ಯ ತತ್ಸ್ವಸದನಾಭಿಭವಂ ನಿರೀಕ್ಷ್ಯ
ಚಕ್ಷುಃಶ್ರವಾಃ ಸಮಸರತ್ತದಮೃಷ್ಯಮಾಣಃ ॥ ೮ ॥

ತಂ ಪ್ರೇಕ್ಷಣೀಯ ಸುಕುಮಾರಘನಾವದಾತಂ
ಶ್ರೀವತ್ಸಪೀತವಸನಂ ಸ್ಮಿತಸುಂದರಾಸ್ಯಮ್ ।
ಕ್ರೀಡಂತಮಪ್ರತಿಭಯಂ ಕಮಲೋದರಾಂಘ್ರಿಂ
ಸಂದಶ್ಯ ಮರ್ಮಸು ರುಷಾ ಭುಜಯಾ ಚಛಾದ ॥ ೯ ॥

ತಂ ನಾಗಭೋಗಪರಿವೀತಮದೃಷ್ಟಚೇಷ್ಟ-
ಮಾಲೋಕ್ಯ ತತ್ಪ್ರಿಯಸಖಾಃ ಪಶುಪಾ ಭೃಶಾರ್ತಾಃ ।
ಕೃಷ್ಣೇಽರ್ಪಿತಾತ್ಮಸುಹೃದರ್ಥಕಲತ್ರಕಾಮಾ
ದುಃಖಾನುಶೋಕಭಯಮೂಢಧಿಯೋ ನಿಪೇತುಃ ॥ ೧೦ ॥

ಗಾವೋ ವೃಷಾ ವತ್ಸತರ್ಯಃ ಕ್ರಂದಮಾನಾಃ ಸುದುಃಖಿತಾಃ ।
ಕೃಷ್ಣೇ ನ್ಯಸ್ತೇಕ್ಷಣಾ ಭೀತಾ ರುದತ್ಯ ಇವ ತಸ್ಥಿರೇ ॥ ೧೧ ॥

ಅಥ ವ್ರಜೇ ಮಹೋತ್ಪಾತಾಸ್ತ್ರಿವಿಧಾ ಹ್ಯತಿದಾರುಣಾಃ ।
ಉತ್ಪೇತುರ್ಭುವಿ ದಿವ್ಯಾತ್ಮನ್ಯಾಸನ್ನಭಯಶಂಸಿನಃ ॥ ೧೨ ॥

ತಾನಾಲಕ್ಷ್ಯ ಭಯೋದ್ವಿಗ್ನಾ ಗೋಪಾ ನಂದಪುರೋಗಮಾಃ ।
ವಿನಾ ರಾಮೇಣ ಗಾಃ ಕೃಷ್ಣಂ ಜ್ಞಾತ್ವಾ ಚಾರಯಿತುಂ ಗತಮ್ ॥ ೧೩ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಕಾಳಿಯ ಮಡುವಿಗೆ ಹಾರಿ ಅತುಲ ಬಲಶಾಲಿಯಾದ ಮತ್ತಗಜದಂತೆ ನೀರನ್ನು ಬಡಿಯ ತೊಡಗಿದನು. ಹೀಗೆ ಜಲಕ್ರೀಡೆಯಾಡುತ್ತಾ ಅವನ ಭುಜಗಳ ಬಡಿತದಿಂದ ನೀರಿನಲ್ಲಿ ಜೋರಾದ ಶಬ್ದವಾಗತೊಡಗಿತು. ಕಣ್ಣಿಂದಲೇ ಕೇಳುವ ಕಾಳಿಯ ಸರ್ಪನಿಗೆ ಆ ಶಬ್ದವನ್ನು ಕೇಳಿ, ಯಾರೋ ನನ್ನ ನಿವಾಸಸ್ಥಾನವನ್ನು ತಿರಸ್ಕರಿಸುತ್ತಿದ್ದಾನೆಂದು ತಿಳಿಯಿತು. ಇದನ್ನು ಸಹಿಸಲಾಗದೆ ಕಾಳಿಯನು ಕುಪಿತನಾಗಿ ಶ್ರೀಕೃಷ್ಣನ ಮುಂದೆ ಬಂದನು. ॥ ೮ ॥ ಎದುರಿಗೆ ಶ್ಯಾಮಲವರ್ಣದ ಬಾಲಕನನ್ನು ನೋಡಿದನು. ವರ್ಷಾಕಾಲದ ಮೇಘದಂತೆ ಅತ್ಯಂತ ಸುಕುಮಾರ ಶರೀರವಿದ್ದು, ಪುನಃ ಪುನಃ ನೋಡಬೇಕೆನ್ನುವಷ್ಟು ಸೌಂದರ್ಯವು ಅವನಲ್ಲಿತ್ತು. ಅವನ ವೃಕ್ಷಸ್ಥಳದಲ್ಲಿ ಸ್ವರ್ಣ ರೇಖೆಯಂತೆ ಶ್ರೀವತ್ಸದ ಚಿಹ್ನೆಯಿದ್ದು, ಪೀತಾಂಬರವನ್ನು ಧರಿಸಿದ್ದನು. ಅವನ ಸುಂದರವಾದ ಮುಖಾರವಿಂದದಿಂದ ಸುಮಧುರವಾದ ಮಂದಹಾಸವು ಹೊರಸೂಸುತ್ತಿತ್ತು. ಅವನ ಹೊಕ್ಕುಳು ಮತ್ತು ಪಾದಗಳು ಕಮಲ ಪುಷ್ಪದ ಕರ್ಣಿಕೆಯಂತೆ ಕೋಮಲ ಸುಮನೋಹರವಾಗಿದ್ದವು. ಯಾವ ವಿಧವಾದ ಭಯವು ಇಲ್ಲದೆ ಆ ಸುಂದರ ಬಾಲಕನು ನೀರಿನಲ್ಲಿ ತೊಳಲಾಡು ತ್ತಿದ್ದನು. ಇಂತಹ ತಿರಸ್ಕಾರವನ್ನು ಕಂಡ ಸರ್ಪರಾಜನ ಕೋಪವು ನೆತ್ತಿಗೇರಿತು. ಅವನು ಶ್ರೀಕೃಷ್ಣನ ಮರ್ಮಸ್ಥಾನದಲ್ಲಿ ಬಲವಾಗಿ ಕಚ್ಚಿ ತನ್ನ ಶರೀರದಿಂದ ಅವನನ್ನು ಬಂಧಿಸಿದನು. ॥ ೯ ॥ ಭಗವಾನ್ ಶ್ರೀಕೃಷ್ಣನು ನಾಗಪಾಶದಿಂದ ಬಂಧಿತನಾಗಿ ನಿಶ್ಚೇಷ್ಟಿತನಾದನು. ಇದನ್ನು ನೋಡಿದ ಅವನ ಪ್ರಾಣಪ್ರಿಯರಾದ ಗೋಪಬಾಲಕರು ಬಹಳವಾಗಿ ಸಂಕಟಪಟ್ಟರು. ದುಃಖ-ಪಶ್ಚಾತ್ತಾಪ-ಭಯಗಳಿಂದ ಮೂರ್ಛಿತರಾಗಿ ಕೆಳಗೆ ಬಿದ್ದರು. ಏಕೆಂದರೆ, ಅವರು ತಮ್ಮ ಶರೀರ, ಬಂಧುಗಳು, ಮಿತ್ರರು, ಧನಸಂಪತ್ತು, ಪುತ್ರ, ಕಳತ್ರರು, ಭೋಗ ಗಳು ಮತ್ತು ಸಮಸ್ತ ಕಾಮನೆಗಳು - ಇವೆಲ್ಲವನ್ನು ಭಗವಾನ್ ಶ್ರೀಕೃಷ್ಣನಿಗೆ ಸಮರ್ಪಿಸಿ ಬಿಟ್ಟಿದ್ದರು. ॥ ೧೦ ॥ ಹಸುಗಳು, ಎತ್ತು ಗಳು, ಕರುಗಳು, ಎಳೆಗರುಗಳು ಹೀಗೆ ಎಲ್ಲವೂ ಸರ್ಪಪಾಶದಿಂದ ಕಟ್ಟಲ್ಪಟ್ಟ ಬಾಲಕೃಷ್ಣನನ್ನು ದಿಟ್ಟಿಸಿ ನೋಡುತ್ತಾ ಅಪರಿಮಿತವಾದ ದುಃಖದಿಂದ ಕಿರುಚಿಕೊಳ್ಳುತ್ತಿದ್ದವು. ಭಯಗೊಂಡು ಅಳುತ್ತಿವೆಯೋ ಎಂಬಂತೆ ಸ್ವಲ್ಪವೂ ಕದಲದೆ ನಿಂತಿದ್ದವು. ॥ ೧೧ ॥

ಅತ್ತ ಗೋಕುಲದಲ್ಲಿ ಭಯವು ಸನ್ನಿಹಿತವಾಗುವುದೆಂಬುದನ್ನು ಸೂಚಿಸುವ ಮೂರು ಬಗೆಯ ದಾರುಣವಾದ ಮಹೋತ್ಪಾತಗಳು ಕಾಣಿಸಿಕೊಂಡವು. ಭೂಮಿಯು ಕಂಪಿಸಿತು, ಅಂತರಿಕ್ಷದಿಂದ ಉಲ್ಕೆಗಳು ಬೀಳತೊಡಗಿದವು. ಪುರುಷರ ಎಡ ಅಂಗಗಳು, ಸ್ತ್ರೀಯರ ಬಲ ಅಂಗಗಳೂ ಅದರು ತೊಡಗಿದವು. ॥ ೧೨ ॥ ನಂದ ಗೋಪನೇ ಮೊದಲಾದವರು ಮಹೋತ್ಪಾತಗಳನ್ನು ನೋಡಿ ಭಯದಿಂದ ಉದ್ವಿಗ್ನರಾದರು. ಬಲರಾಮನನ್ನು ಬಿಟ್ಟು ಶ್ರೀಕೃಷ್ಣ ನೊಬ್ಬನೇ ಹಸುಗಳನ್ನು ಮೇಯಿಸಲು ಹೋಗಿರುವನೆಂದು ತಿಳಿದ ಬಳಿಕ ಅವರ ಭಯವು ಮತ್ತಷ್ಟು ಉಲ್ಬಣಿಸಿತು. ॥ ೧೩ ॥ ಅವರು ಭಗವಂತನ ಮಹಿಮೆಯನ್ನು ತಿಳಿಯುತ್ತಿರಲಿಲ್ಲ, ಅದಕ್ಕಾಗಿ ಆ ಅಪಶಕುನಗಳನ್ನು ನೋಡಿ - ಇಂದು ಶ್ರೀಕೃಷ್ಣನಿಗೆ ಮೃತ್ಯುವೇ

ತೈರ್ದುರ್ನಿಮಿತ್ತೈರ್ನಿಧನಂ ಮತ್ವಾ ಪ್ರಾಪ್ತಮತದ್ವಿದಃ ।
ತತ್ಪ್ರಾಣಾಸ್ತನ್ಮನಸ್ಕಾಸ್ತೇ ದುಃಖಶೋಕಭಯಾತುರಾಃ
॥ ೧೪ ॥

ಆಬಾಲವೃದ್ಧವನಿತಾಃ ಸರ್ವೇಽಂಗ ಪಶುವೃತ್ತಯಃ ।
ನಿರ್ಜಗ್ಮುರ್ಗೋಕುಲಾದ್ದೀನಾಃ ಕೃಷ್ಣದರ್ಶನಲಾಲಸಾಃ
॥ ೧೫ ॥

ತಾಂಸ್ತಥಾ ಕಾತರಾನ್ವೀಕ್ಷ್ಯ ಭಗವಾನ್ಮಾಧವೋ ಬಲಃ ।
ಪ್ರಹಸ್ಯ ಕಿಂಚಿನ್ನೋವಾಚ ಪ್ರಭಾವಜ್ಞೋಽನುಜಸ್ಯ ಸಃ
॥ ೧೬ ॥

ತೇಽನ್ವೇಷಮಾಣಾ ದಯಿತಂ ಕೃಷ್ಣಂ ಸೂಚಿತಯಾ ಪದೈಃ ।
ಭಗವಲ್ಲಕ್ಷಣೈರ್ಜಗ್ಮುಃ ಪದವ್ಯಾ ಯಮುನಾತಟಮ್
॥ ೧೭ ॥

ತೇ ತತ್ರ ತತ್ರಾಬ್ಜಯವಾಂಕುಶಾಶನಿ-
ಧ್ವಜೋಪಪನ್ನಾನಿ ಪದಾನಿ ವಿಶ್ಪತೇಃ ।
ಮಾರ್ಗೇ ಗವಾಮನ್ಯಪದಾಂತರಾಂತರೇ
ನಿರೀಕ್ಷಮಾಣಾ ಯಯುರಂಗ ಸತ್ವರಾಃ ॥ ೧೮ ॥

ಅಂತರ್ಹ್ರದೇ ಭುಜಗಭೋಗಪರೀತಮಾರಾತ್
ಕೃಷ್ಣಂ ನಿರೀಹಮುಪಲಭ್ಯ ಜಲಾಶಯಾಂತೇ ।
ಗೋಪಾಂಶ್ಚ ಮೂಢಧಿಷಣಾನ್ಪರಿತಃ ಪಶೂಂಶ್ಚ
ಸಂಕ್ರಂದತಃ ಪರಮಕಶ್ಮಲಮಾಪುರಾರ್ತಾಃ ॥ ೧೯ ॥

ಗೋಪ್ಯೋಽನುರಕ್ತಮನಸೋ ಭಗವತ್ಯನಂತೇ
ತತ್ಸೌಹೃದಸ್ಮಿತವಿಲೋಕಗಿರಃ ಸ್ಮರಂತ್ಯಃ ।
ಗ್ರಸ್ತೇಽಹಿನಾ ಪ್ರಿಯತಮೇ ಭೃಶದುಃಖತಪ್ತಾಃ
ಶೂನ್ಯಂ ಪ್ರಿಯವ್ಯತಿಹೃತಂ ದದೃಶುಸ್ತ್ರಿಲೋಕಮ್ ॥ ೨೦ ॥

ಸಂಭವಿಸಬಹುದೆಂದು ಅವರ ಮನಸ್ಸಿಗೆ ಅನಿಸಿತು. ಅವರು ಆ ಕ್ಷಣವೇ ದುಃಖ, ಶೋಕ, ಭಯದಿಂದ ಆತುರರಾದರು. ಶ್ರೀಕೃಷ್ಣನೇ ಅವರಿಗೆ ಪಂಚಪ್ರಾಣವಾಗಿದ್ದನು. ಅವರ ಮನಸ್ಸು ಯಾವಾಗಲೂ ಅವನಲ್ಲೇ ಲೀನವಾಗಿ ಬಿಟ್ಟಿತ್ತು. ॥ ೧೪ ॥ ಪ್ರಿಯ ಪರೀಕ್ಷಿತನೇ! ವ್ರಜದ ಬಾಲಕ, ವೃದ್ಧ, ಸ್ತ್ರೀಯರ ಸ್ವಭಾವವೂ ಹಸುಗಳಂತೆ ವಾತ್ಸಲ್ಯಪೂರ್ಣವಾಗಿತ್ತು. ಮನಸ್ಸಿಗೆ ಹೀಗೆ ಅನಿಸುತ್ತಲೇ ಅವರು ಅತ್ಯಂತ ದುಃಖಿತರಾಗಿ ತಮ್ಮ ಪ್ರಿಯ ಮುದ್ದು ಕಂದಮ್ಮನನ್ನು ನೋಡಲು ಉತ್ಕಟ ಇಚ್ಛೆಯಿಂದ ಮನೆ-ಮಠ ಬಿಟ್ಟು ಹೊರಟೇ ಬಿಟ್ಟರು. ॥ ೧೫ ॥ ಬಲರಾಮನು ಸಾಕ್ಷಾತ್ ಭಗವಂತನ ಸ್ವರೂಪನೇ ಆಗಿದ್ದು ಸರ್ವಶಕ್ತನಾಗಿದ್ದನು. ವ್ರಜವಾಸಿಗಳು ಇಷ್ಟೊಂದು ಕಾತುರ ಮತ್ತು ಆತುರರಾಗಿರುವುದನ್ನು ನೋಡಿ ಅವನಿಗೆ ನಗುಬಂತು. ಆದರೆ ಅವನು ಏನೂ ಮಾತನಾಡದೆ ಸುಮ್ಮನೆ ಇದ್ದನು. ಏಕೆಂದರೆ, ಅವನು ತನ್ನ ತಮ್ಮನಾದ ಶ್ರೀಕೃಷ್ಣನ ಮಹಿಮೆಯನ್ನು ಚೆನ್ನಾಗಿ ತಿಳಿದಿದ್ದನು. ॥ ೧೬ ॥ ಅನಂತರ ವ್ರಜ ವಾಸಿಗಳು ತಮಗೆ ಅತ್ಯಂತ ಪ್ರಿಯನಾದ ಶ್ರೀಕೃಷ್ಣನನ್ನು ಹುಡುಕಲು ತೊಡಗಿದರು. ಹುಡುಕಲು ಅವರಿಗೆ ಅಷ್ಟೇನೂ ಕಷ್ಟವಾಗಲಿಲ್ಲ, ಭಗವಂತನಿಟ್ಟಿದ್ದ ಕಮಲ, ಅಂಕುಶಾದಿ ವಿಶೇಷ ಲಕ್ಷಣಗಳುಳ್ಳ ಹೆಜ್ಜೆಗಳನ್ನು ಅನುಸರಿಸಿ ಹೋದರು. ಹೀಗೆ ಅವು ಅವರನ್ನು ಯಮುನಾನದಿಯ ತೀರಕ್ಕೆ ಒಯ್ದುವು. ॥ ೧೭ ॥

ಪರೀಕ್ಷಿತನೇ! ಮಾರ್ಗದಲ್ಲಿ ಹೋಗುತ್ತಿದ್ದಾಗ ಗೋವುಗಳ, ಕರುಗಳ, ಗೋಪಬಾಲಕರ ಹೆಜ್ಜೆಗಳ ನಡು-ನಡುವೆ ಭಗವಂತನ ಕಮಲ, ಯವ, ಅಂಕುಶ, ವಜ್ರಾಯುಧ, ಧ್ವಜಗಳ ಚಿಹ್ನೆಗಳಿಂದ ಕೂಡಿದ ಹೆಜ್ಜೆಗಳ ಗುರುತೂ ಸ್ಪಷ್ಟವಾಗಿ ಕಾಣಿಸುತ್ತಿದ್ದಿತು. ಅದನ್ನು ನೋಡಿಕೊಂಡು ಅದನ್ನೇ ಅನುಸರಿಸಿ ಗೋವಳರು ಅವಸರದಿಂದ ಯಮುನಾತೀರಕ್ಕೆ ಹೋದರು. ॥ ೧೮ ॥ ದೂರದಿಂದಲೇ ಅವರು ಶ್ರೀಕೃಷ್ಣನು ಕಾಳಿಯ ಸರ್ಪದಿಂದ ಬಂಧಿಸಲ್ಪಟ್ಟು ನಿಶ್ಚೇಷ್ಟ ನಾಗಿರುವುದನ್ನು ನೋಡಿದರು. ಮಡುವಿನ ಸಮೀಪದಲ್ಲಿ ಗೋಪ ಬಾಲಕರೂ, ಮೂರ್ಛಿತರಾಗಿ ಬಿದ್ದಿರುವುದನ್ನು, ಹಸುಗಳೂ ಎತ್ತುಗಳೂ-ಕರುಗಳೂ ಕುಂಡದ ಸುತ್ತಲೂ ನಿಂತು ಆರ್ತನಾದ ವನ್ನು ಮಾಡುತ್ತಿರುವುದನ್ನು ನೋಡಿದರು. ಇದೆಲ್ಲವನ್ನು ನೋಡಿದ ನಂದಗೋಪಾದಿಗಳು ಅತ್ಯಂತ ವ್ಯಾಕುಲರಾಗಿ ಕೊನೆಗೆ ಮೂರ್ಛಿತ ರಾಗಿ ಬಿದ್ದರು. ॥ ೧೯ ॥ ಗೋಪಿಯರ ಸಂಕಟವಂತೂ ವರ್ಣಿ ಸಲು ಅಸದಳವಾದದ್ದು, ಭಗವಂತನಾದ ಅನಂತನಲ್ಲಿಯೇ ಅವರ ಮನಸ್ಸು ಅನುರಕ್ತವಾಗಿದ್ದಿತು. ನಿತ್ಯ ನಿರಂತರವಾದ ಭಗವಂತನ ಸೌಹಾರ್ದ, ಅವನ ಸುಮಧುರ ಮಂದಹಾಸ, ಪ್ರೇಮಪೂರ್ಣ ವಾದ ಮನಸ್ಸನ್ನು ಸೆಳೆಯುವ ಕುಡಿನೋಟ, ಅವನ ಸುಮಧುರ ವಾದ ವಾಣಿ ಇವೆಲ್ಲವನ್ನೂ ಗೋಪಿಯರು ಒಂದೊಂದಾಗಿ ಸ್ಮರಿಸಿ ಕೊಂಡರು. ತಮ್ಮ ಪ್ರಿಯತಮನಾದ ಶ್ಯಾಮಸುಂದರನು ಸರ್ಪ ಪಾಶದಿಂದ ಬಂಧಿತನಾಗಿರುವುದನ್ನು ನೋಡಿ ದೊಡನೆಯೇ ಅಸಹನೀಯವಾದ ದುಃಖದಿಂದ ಪರಿತಪಿಸಿದರು. ಅವರ ಹೊಟ್ಟೆಗೆ ಬೆಂಕಿ ಬಿದ್ದಂತಾಯಿತು. ಪ್ರಿಯತಮನಾದ ಶ್ರೀಕೃಷ್ಣನಿಲ್ಲದ ಮೂರು ಲೋಕಗಳೂ ಅವರಿಗೆ ಶೂನ್ಯವಾಗಿ ಕಂಡಿತು. ॥ ೨೦ ॥

ತಾಃ ಕೃಷ್ಣಮಾತರಮಪತ್ಯಮನುಪ್ರವಿಷ್ಟಾಂ
ತುಲ್ಯವ್ಯಥಾಃ ಸಮನುಗೃಹ್ಯ ಶುಚಃ ಸ್ರವಂತ್ಯಃ ।
ತಾಸ್ತಾ ವ್ರಜಪ್ರಿಯಕಥಾಃ ಕಥಯಂತ್ಯ ಆಸನ್
ಕೃಷ್ಣಾನನೇಽರ್ಪಿತದೃಶೋ ಮೃತಕಪ್ರತೀಕಾಃ ॥ ೨೦ ॥

ತಾಯಿಯಾದ ಯಶೋದೆಯಂತೂ ತಾನು ಮಡುವಿಗೆ ಬಿದ್ದು ಬಿಡುವೆನೆಂದೇ ಧಾವಿಸಿದಳು. ಆದರೆ ಇತರ ಗೋಪಿಯರು ಆಕೆಯನ್ನು ತಡೆದರು. ಇತರ ಗೋಪಿಯರಿಗೂ ಕೃಷ್ಣನಿಲ್ಲದ ದುಃಖವು ಯಶೋದೆಯ ದುಃಖಕ್ಕಿಂತ ಕಡಿಮೆಯಾಗಿರಲಿಲ್ಲ. ಅವರ ಕಣ್ಣುಗಳಿಂದ ಕಂಬನಿಯು ಧಾರಾಕಾರವಾಗಿ ಸುರಿಯುತ್ತಿತ್ತು. ಎಲ್ಲರ ಕಣ್ಣುಗಳೂ ಶ್ರೀಕೃಷ್ಣನಲ್ಲಿಯೇ ಕೇಂದ್ರಿಕೃತವಾಗಿದ್ದವು. ಕೆಲವು ಗೋಪಿಯರು ಪೂತನಾವಧೆ, ತೃಣಾವರ್ತಸಂಹಾರ, ಬಕಾಸುರಸಂಹಾರ, ಇವೇ ಮುಂತಾದ ಕಥೆಗಳನ್ನು ಹೇಳಿಕೊಂಡು ಯಶೋದೆಗೆ ಧೈರ್ಯ ತುಂಬುತ್ತಿದ್ದರು. ಆದರೆ ಹೆಚ್ಚು ಜನರು ಜೀವವಿಲ್ಲದ ಶವಗಳಂತೆಯೇ ಆಗಿಬಿಟ್ಟಿದ್ದರು. ॥ ೨೦ ॥ ಪರೀಕ್ಷಿತನೇ ! ಶ್ರೀಕೃಷ್ಣನೇ ತಮ್ಮ ಪಂಚಪ್ರಾಣವೆಂದು ಭಾವಿಸಿಕೊಂಡಿದ್ದ ನಂದನೇ ಮೊದಲಾದ ಗೋಪರು ಮೂರ್ಛೆಯು ತಿಳಿದೊಡನೆಯೇ ಶ್ರೀಕೃಷ್ಣನಿದ್ದ ಕುಂಡಕ್ಕೆ ಧುಮುಕಲು ಮುಂದಾದರು. ಆದರೆ ಬಲರಾಮನು ಶ್ರೀಕೃಷ್ಣನ ಮಹಿಮೆಯನ್ನು ಚೆನ್ನಾಗಿ ತಿಳಿದವನಾದ್ದರಿಂದ ಹಾಗೆ ಕುಂಡಕ್ಕೆ ಧುಮುಕದಂತೆ ಅವರೆಲ್ಲರನ್ನು ತಡೆದನು. ॥ ೨೧ ॥

ಕೃಷ್ಣಪ್ರಾಣಾನ್ನಿರ್ವಿಶತೋ ನಂದಾದೀನ್ವೀಕ್ಷ್ಯ ತಂ ಹ್ರದಮ್ ।
ಪ್ರತ್ಯಷೇಧತ್ಸ ಭಗವಾನ್ರಾಮಃ ಕೃಷ್ಣಾನುಭಾವವಿತ್ ॥ ೨೧ ॥

ಇತ್ಥಂ ಸ್ವಗೋಕುಲಮನನ್ಯಗತಿಂ ನಿರೀಕ್ಷ್ಯ
ಸಸ್ತ್ರೀಕುಮಾರಮತಿದುಃಖಿತಮಾತ್ಮಹೇತೋಃ ।
ಆಜ್ಞಾಯ ಮರ್ತ್ಯಪದವೀಮನುವರ್ತಮಾನಃ
ಸ್ಥಿತ್ವಾ ಮುಹೂರ್ತಮುದತಿಷ್ಠದುರಂಗಬಂಧಾತ್ ॥ ೨೨ ॥

ಪರೀಕ್ಷಿತನೇ ! ಸರ್ಪದ ಬಂಧನಕ್ಕೆ ಒಳಪಟ್ಟಿದ್ದು ಶ್ರೀಕೃಷ್ಣನ ಒಂದು ಮಾನುಷ ಲೀಲೆಯೇ ಆಗಿತ್ತು. ವ್ರಜದ ಎಲ್ಲ ಜನರು ಸ್ತ್ರೀಯರೂ ಮಕ್ಕಳಾದಿಯಾಗಿ ನನಗಾಗಿ ಹೀಗೆ ಅತ್ಯಂತ ದುಃಖಿತರಾಗಿದ್ದಾರೆ, ಇವರಿಗೆ ನಿಜವಾಗಿಯೂ ನಾನಲ್ಲದೆ ಬೇರೆ ಯಾವುದೇ ಆಸರೆಯೂ ಇಲ್ಲವೆಂದು ತಿಳಿದಾಗ ಒಂದು ಮುಹೂರ್ತಕಾಲ ಸರ್ಪದ ಬಂಧನದಲ್ಲಿದ್ದು ಹೊರಕ್ಕೆ ಬಂದನು. ॥ ೨೨ ॥ ಭಗವಾನ್ ಶ್ರೀಕೃಷ್ಣನು ಆ ಸಮಯದಲ್ಲಿ ತನ್ನ ಶರೀರವನ್ನು ಹಿಗ್ಗಿಸಿ ಕೊಂಡನು. ಇದರಿಂದ ಸರ್ಪದ ಶರೀರವು ತುಂಡಾಗುವುದೋ ಎಂದೆನಿಸಿ ಅದು ಕೃಷ್ಣನನ್ನು ಬಿಟ್ಟು ದೂರಹೋಗಿ ನಿಂತಿತು. ಹೆಡೆಯನ್ನು ಬಿಚ್ಚಿಕೊಂಡು ಅತಿರೋಷದಿಂದ ವಿಷದ ಬಾಣಗಳಂತೆ ಮೂಗಿನ ಹೊಳ್ಳೆಗಳಿಂದ ನಿಟ್ಟುಸಿರನ್ನು ಬಿಡುತ್ತಾ ಸ್ವಲ್ಪವಾದರೂ ಅಲುಗಾಡದೆ ಉರಿಯುವ ಪಂಜಿನಂತಹ ಕಣ್ಣುಗಳಿಂದ ಶ್ರೀಕೃಷ್ಣನನ್ನು ದಿಟ್ಟಿಸಿ ನೋಡುತ್ತಾ ಸಟೆದು ನಿಂತನು. ॥ ೨೩ ॥ ಕಾಳಿಯನು ಅತ್ಯಂತ ಕಂಪಿತನಾಗಿ ತನ್ನ ಹೆಡೆಗಳಲ್ಲಿದ್ದ ಎರಡೆರಡು ನಾಲಿಗೆಗಳಿಂದ ಕಟವಾಯಿಯನ್ನು ನೆಕ್ಕಿಕೊಳ್ಳುತ್ತಿದ್ದನು. ಭಯಂಕರವಾದ ಕಣ್ಣುಗಳಿಂದ ವಿಷದ ಜ್ವಾಲೆಗಳನ್ನು ಕಾರುತ್ತಿದ್ದನು. ಆಕಾಶದಲ್ಲಿ ಹಾರಾಡುತ್ತಿರುವ ಗರುಡನು ಭೂಮಿಯ ಮೇಲಿರುವ ಹಾವನ್ನು ಹಿಡಿಯಲು ಹೊಂಚು ಹಾಕುವಂತೆ ಶ್ರೀಕೃಷ್ಣನು ಸರ್ಪವನ್ನು ಹಿಡಿಯಲು ಹೊಂಚುಹಾಕುತ್ತಾ ಅದರ ಸುತ್ತಲೂ ತಿರುಗುತ್ತಿದ್ದನು. ಅಂತೆಯೇ ಕಾಳಿಯನೂ ಶ್ರೀಕೃಷ್ಣನನ್ನು ಬಗ್ಗುಬಡಿಯಲು ಹೊಂಚುಹಾಕುತ್ತಾ ಸುತ್ತಲೂ ಸುತ್ತುತ್ತಿದ್ದನು. ॥ ೨೪ ॥ ಹೀಗೆ ಪರಸ್ಪರ ಒಬ್ಬರು ಮತ್ತೊಬ್ಬರನ್ನು ಹಿಡಿಯಲು ಸುತ್ತುತ್ತಿರುವಾಗ ಕಾಳಿಯನ ಬಲವು ಕ್ಷೀಣಿಸುತ್ತಾ ಬಂತು. ಇದೇ ಸಮಯವನ್ನು ಕಾಯುತ್ತಿದ್ದ ಶ್ರೀಕೃಷ್ಣನು ಸರ್ಪದ ದೊಡ್ಡ-ದೊಡ್ಡ ಹೆಡೆಗಳನ್ನು ಸ್ವಲ್ಪ ಬಗ್ಗಿಸಿ ಛಂಗನೆ ಅವುಗಳ ಮೇಲೆ ಹತ್ತಿದನು. ಕಾಳಿಯನ ಹೆಡೆಗಳಲ್ಲಿದ್ದ ಥಳಥಳಿಸುತ್ತಿದ್ದ ಕೆಂಪು ರತ್ನಗಳು ಶ್ರೀಕೃಷ್ಣನಪಾದಗಳನ್ನು ಬೆಳಗತೊಡಗಿದವು. ರತ್ನಗಳ ಕಾಂತಿಯಿಂದ ಶ್ರೀಕೃಷ್ಣನ ಪಾದಗಳು ಮತ್ತಷ್ಟು ಕೆಂಪಾಗಿ ಕಂಡವು. ಆ ರತ್ನಗಳ ಬೆಳಕಿನಲ್ಲಿ ಸಮಸ್ತ ಕಲೆಗಳಿಗೂ ಆದಿ ಪ್ರವರ್ತಕನಾದ ಶ್ರೀಕೃಷ್ಣನು ನಾನಾ ಭಂಗಿಗಳಲ್ಲಿ ನೃತ್ಯಮಾಡತೊಡಗಿದನು. ॥ ೨೫ ॥

ತತ್ಪ್ರಥ್ಯಮಾನವಪುಷಾ ವ್ಯಥಿತಾತ್ಮಭೋಗ-
ಸ್ತ್ಯಕ್ತ್ವೋನ್ನಮಯ್ಯ ಕುಪಿತಃ ಸ್ವಫಣಾನ್ ಭುಜಂಗಃ ।
ತಸ್ಥೌ ಶ್ವಸಞ್ಛ್ವಸನರಂಧ್ರವಿಷಾಂಬರೀಷ-
ಸ್ತಬ್ಧೇಕ್ಷಣೋಲ್ಮುಕಮುಖೋ ಹರಿಮೀಕ್ಷಮಾಣಃ ॥ ೨೩ ॥

ತಂ ಜಿಹ್ವಯಾ ದ್ವಿಶಿಖಯಾ ಪರಿಲೇಲಿಹಾನಂ
ದ್ವೇ ಸೃಕ್ಕಿಣೀ ಹ್ಯತಿಕರಾಲವಿಷಾಗ್ನಿದೃಷ್ಟಿಮ್ ।
ಕ್ರೀಡನ್ನಮುಂ ಪರಿಸಸಾರ ಯಥಾ ಖಗೇಂದ್ರೋ
ಬಭ್ರಾಮ ಸೋಽಪ್ಯವಸರಂ ಪ್ರಸಮೀಕ್ಷಮಾಣಃ ॥ ೨೪ ॥

ಏವಂ ಪರಿಭ್ರಮಹತೌಜಸಮುನ್ನತಾಂಸ-
ಮಾನಮ್ಯ ತತ್ಪೃಥುಶಿರಃಸ್ವಧಿರೂಢ ಆದ್ಯಃ ।
ತನ್ಮೂರ್ಧರತ್ನನಿಕರಸ್ಪರ್ಶಾತಿತಾಮ್ರ-
ಪಾದಾಂಬುಜೋಽಖಿಲಕಲಾದಿಗುರುರ್ನನರ್ತ ॥ ೨೫ ॥

ತಂ ನರ್ತುಮುದ್ಯತಮವೇಕ್ಷ್ಯ ತದಾ ತದೀಯ-
ಗಂಧರ್ವಸಿದ್ಧಸುರಚಾರಣದೇವವಧ್ವಃ ।
ಪ್ರೀತ್ಯಾ ಮೃದಂಗಪಣವಾನಕವಾದ್ಯಗೀತ-
ಪುಷ್ಪೋಪಹಾರನುತಿಭಿಃ ಸಹಸೋಪಸೇದುಃ ॥ ೨೭ ॥

ಯದ್ಯಚ್ಛಿರೋ ನ ನಮತೇಽಂಗ ಶತೈಕಶೀರ್ಷ್ಣ-
ಸ್ತತ್ತನ್ಮಮರ್ದ ಖರದಂಡಧರೋಽಂಘ್ರಿಪಾತೈಃ ।
ಕ್ಷೀಣಾಯುಷೋ ಭ್ರಮತ ಉಲ್ಬಣಮಾಸ್ಯತೋಽಸೃಜ
ನಸ್ತೋ ವಮನ್ಪರಮಕಶ್ಮಲಮಾಪ ನಾಗಃ ॥ ೨೮ ॥

ತಸ್ಯಾಕ್ಷಿಭಿರ್ಗರಲಮುದ್ವಮತಃ ಶಿರಸ್ಸು
ಯದ್ಯತ್ಸಮುನ್ನಮತಿ ನಿಃಶ್ವಸತೋ ರುಷೋಚ್ಚೈಃ ।
ನೃತ್ಯನ್ಪದಾನುನಮಯನ್ ದಮಯಾಂಬಭೂವ
ಪುಷ್ಪೈಃ ಪ್ರಪೂಜಿತ ಇವೇಹ ಪುಮಾನ್ಪುರಾಣಃ ॥ ೨೯ ॥

ತಚ್ಚಿತ್ರತಾಂಡವವಿರುಗ್ಣಫಣಾತಪತ್ರೋ
ರಕ್ತಂ ಮುಖೈರುರು ವಮನ್ನೃಪ ಭಗ್ನಗಾತ್ರಃ ।
ಸ್ಮೃತ್ವಾ ಚರಾಚರಗುರುಂ ಪುರುಷಂ ಪುರಾಣಂ
ನಾರಾಯಣಂ ತಮರಣಂ ಮನಸಾ ಜಗಾಮ ॥ ೩೦ ॥

ಕೃಷ್ಣಸ್ಯ ಗರ್ಭಜಗತೋಽತಿಭರಾವಸನ್ನಂ
ಪಾರ್ಷ್ಣಿಪ್ರಹಾರಪರಿರುಗ್ಣಫಣಾತಪತ್ರಮ್ ।
ದೃಷ್ಟ್ವಾಹಿಮಾದ್ಯಮುಪಸೇದುರಮುಷ್ಯ ಪತ್ನ್ಯ
ಆರ್ತಾಃ ಶ್ಲಥದ್ವಸನಭೂಷಣಕೇಶಬಂಧಾಃ ॥ ೩೧ ॥

ತಾಸ್ತಂ ಸುವಿಗ್ನಮನಸೋಽಥ ಪುರಸ್ಕೃತಾರ್ಭಾಃ
ಕಾಯಂ ನಿಧಾಯ ಭುವಿ ಭೂತಪತಿಂ ಪ್ರಣೇಮುಃ ।
ಸಾಧ್ವ್ಯಃ ಕೃತಾಂಜಲಿಪುಟಾಃ ಶಮಲಸ್ಯ ಭರ್ತು-
ರ್ಮೋಕ್ಷೇಪ್ಸವಃ ಶರಣದಂ ಶರಣಂ ಪ್ರಪನ್ನಾಃ ॥ ೩೨ ॥

ಭಗವಂತನು ನೃತ್ಯವಾಡುತ್ತಿರಲು ಅವನ ಪ್ರಿಯಭಕ್ತರಾದ ಗಂಧರ್ವ-ಸಿದ್ಧ-ಚಾರಣರೂ-ದೇವತೆಗಳೂ, ದೇವಾಂಗನೆಯರೂ ಅತ್ಯಂತ ಪ್ರೀತಿಯಿಂದ ತಾಳ-ಮೃದಂಗ-ನಗಾರಿ ಇವೇ ಮೊದಲಾದ ವಾದ್ಯಗಳಿಂದ ಕೂಡಿದವರಾಗಿ ಶ್ರೀಕೃಷ್ಣನ ಲೀಲೆಗಳನ್ನು ಗಾನ ಮಾಡುತ್ತಾ ಪುಷ್ಪೋಪಹಾರಗಳನ್ನು ತೆಗೆದುಕೊಂಡು ಶ್ರೀಕೃಷ್ಣನ ಬಳಿಗೆ ಆಗಮಿಸಿದರು. ॥ ೨೭ ॥ ಪರೀಕ್ಷಿತನೇ ! ಕಾಲಿಯನಾಗನಿಗೆ ಒಂದು ಸಾವಿರ ಹೆಡೆಗಳಿದ್ದವು. ಅವನು ತನ್ನ ಯಾವ ಹೆಡೆಯನ್ನು ಮೇಲೆತ್ತುವನೋ ಅದನ್ನು ಪ್ರಚಂಡ ದಂಡಧಾರಿಯಾದ ಭಗವಂತನು ತನ್ನ ಕಾಲಿನ ತುಳಿತದಿಂದ ಬಗ್ಗು ಬಡಿಯುತ್ತಿದ್ದನು. ಇದರಿಂದ ಕಾಳಿಯನ ಜೀವನ ಶಕ್ತಿಯು ಕ್ಷೀಣಿಸತೊಡಗಿತು. ಅವನ ಮೂಗಿನಿಂದ, ಬಾಯಿಂದ ರಕ್ತವು ಹರಿಯತೊಡಗಿತು. ಕೊನೆಗೆ ಅವನು ಯಾತನೆಯನ್ನು ತಡೆಯಲಾರದೆ ಮೂರ್ಛಿತನಾಗಿ ಬಿಟ್ಟನು. ॥ ೨೮ ॥ ಅವನು ಸ್ವಲ್ಪ ಎಚ್ಚರಗೊಂಡೊಡನೆಯೇ ಕುಪಿತನಾಗಿ ಪುನಃ ಕಣ್ಣುಗಳಿಂದ ವಿಷವನ್ನು ಸುರಿಸುವನು. ಗಟ್ಟಿಯಾಗಿ ಬುಸುಗುಟ್ಟುವನು. ಹೀಗೆ ಬುಸುಗುಟ್ಟುತ್ತಾ ಯಾವುದಾದರೂ ತಲೆಯನ್ನು ಮೇಲೆತ್ತಿದನೆಂದರೆ ಶ್ರೀಕೃಷ್ಣನು ಒಡನೆಯೇ ಆ ಹೆಡೆಯ ಮೇಲೆ ಹಾರಿ ನಾಟ್ಯವಾಡುತ್ತಾ ಆ ಹೆಡೆಯನ್ನು ಬಗ್ಗಿಸಿಬಿಡುವನು. ಆ ಸಮಯದಲ್ಲಿ ಪುರಾಣ ಪುರುಷೋತ್ತಮ ಭಗವಾನ್ ಶ್ರೀಕೃಷ್ಣನ ಚರಣಗಳಲ್ಲಿ ಬಿದ್ದ ರಕ್ತದ ಬಿಂದುಗಳು-ಗಂಧರ್ವರು ರಕ್ತಪುಷ್ಪಗಳಿಂದ ಅವನ ಪಾದಗಳಿಗೆ ಪೂಜಿಸುತ್ತಿರುವರೋ ಎಂಬಂತೆ ಭಾಸವಾಗುತ್ತಿತ್ತು. ॥ ೨೯ ॥ ಪರೀಕ್ಷಿತನೇ ! ಭಗವಂತನ ಆ ಅದ್ಭುತವಾದ ತಾಂಡವ ನೃತ್ಯದಿಂದಾಗಿ ಕಾಳಿಯನ ಛತ್ರರೂಪವಾಗಿದ್ದ ಹೆಡೆಗಳು ಛಿನ್ನ-ಭಿನ್ನವಾದುವು. ಅದರ ಪ್ರತಿಯೊಂದು ಅಂಗವೂ ನುಚ್ಚುನೂರಾಯಿತು. ಬಾಯಿಂದ ರಕ್ತದ ಕೋಡಿಯೇ ಹರಿಯಿತು. ಆಗ ನಾಗನಿಗೆ ಚರಾಚರಾತ್ಮಕವಾದ ಜಗತ್ತಿಗೇ ಗುರುವಾಗಿದ್ದ ಪುರಾಣ ಪುರುಷ ಭಗವಾನ್ ನಾರಾಯಣನ ಸ್ಮರಣೆಯಾಯಿತು. ಕಾಳಿಯನು ಮನಸ್ಸಿನಿಂದಲೇ ಭಗವಂತನಿಗೆ ಶರಣಾದನು. ॥ ೩೦ ॥ ಭಗವಾನ್ ಶ್ರೀಕೃಷ್ಣನ ಉದರದಲ್ಲಿ ಸಂಪೂರ್ಣ ವಿಶ್ವವು ಅಡಗಿದೆ. ಆದರಿಂದಾಗಿ ಅವನ ಅಪಾರವಾದ ಭಾರವನ್ನು ತಡೆಯಲಾರದೆ ಕುಸಿದುಬಿದ್ದ ಫಣೀಂದ್ರನ ಛತ್ರಿರೂಪವಾಗಿದ್ದ ಫಣಗಳು ಬಾಲಕೃಷ್ಣನ ಹಿಮ್ಮಡಿಗಳ ಏಟಿನಿಂದಾಗಿ ನುಚ್ಚುನೂರಾದವು. ತನ್ನ ಪತಿಯ ಈ ದುರ್ದಶೆಯನ್ನು ಕಂಡ ಅವನ ಪತ್ನಿಯರು ಭಗವಂತನಿಗೆ ಶರಣಾದರು. ಅವರೆಲ್ಲರೂ ಅತ್ಯಂತ ದುಃಖಿತರಾಗಿದ್ದರು. ಭಯಗ್ರಸ್ತರಾದ ಆ ನಾಗಪತ್ನಿಯರ ವಸ್ತ್ರಾಭರಣಗಳು ಅಸ್ತ-ವ್ಯಸ್ತವಾಗಿದ್ದು, ತಲೆಕೂದಲು ಕೆದರಿ ಹೋಗಿದ್ದವು. ॥ ೩೧ ॥ ಆ ಸಮಯದಲ್ಲಿ ಸಾಧ್ವಿಯರಾದ ನಾಗಪತ್ನಿಯರು ಬಹಳವಾಗಿ ಗಾಬರಿಗೊಂಡಿದ್ದರು. ತಮ್ಮ ಮಕ್ಕಳನ್ನು ಮುಂದೆ ಮಾಡಿಕೊಂಡು, ತಲೆಯನ್ನು ಭೂಮಿಗೆ ಮುಟ್ಟಿಸಿ, ಪ್ರಾಣಿಮಾತ್ರರ ಏಕಮಾತ್ರ ಸ್ವಾಮಿಯಾದ ಭಗವಾನ್ ಶ್ರೀಕೃಷ್ಣನಿಗೆ ಪ್ರಣಾಮ ಮಾಡಿದರು. ಶ್ರೀಕೃಷ್ಣನನ್ನು ಶರಣಾಗತ ವತ್ಸಲನೆಂದು ಅರಿತು ಅಪರಾಧಿಯಾದ ತಮ್ಮ ಪತಿಯನ್ನು ಬಿಡಿಸಿಕೊಳ್ಳುವ ಇಚ್ಛೆಯಿಂದ ಅವರೆಲ್ಲರೂ ಶ್ರೀಕೃಷ್ಣನಿಗೆ ಶರಣಾಗಿ ಅವನನ್ನು ಪರಿಪರಿಯಾಗಿ ಸ್ತುತಿಸುತ್ತಾ ಇತೆಂದರು. ॥ ೩೨ ॥

ನಾಗಪತ್ನ್ಯ ಊಚುಃ

ನ್ಯಾಯ್ಯೋ ಹಿ ದಂಡಃ ಕೃತಕಿಲ್ಬಿಷೇಽಸ್ಮಿಂ-
ಸ್ತವಾವತಾರಃ ಖಲನಿಗ್ರಹಾಯ ।
ರಿಪೋಃ ಸುತಾನಾಮಪಿ ತುಲ್ಯದೃಷ್ಟೇ-
ರ್ಧತ್ಸೇ ದಮಂ ಫಲಮೇವಾನುಶಂಸನ್ ॥ ೩೩ ॥

ಅನುಗ್ರಹೋಽಯಂ ಭವತಃ ಕೃತೋ ಹಿ ನೋ
ದಂಡೋಽಸತಾಂ ತೇ ಖಲು ಕಲ್ಮಷಾಪಹಃ ।
ಯದ್ದಂದಶೂಕತ್ವಮಮುಷ್ಯ ದೇಹಿನಃ
ಕ್ರೋಧೋಽಪಿ ತೇಽನುಗ್ರಹ ಏವ ಸಮ್ಮತಃ ॥ ೩೪ ॥

ತಪಃ ಸುತಪ್ತಂ ಕಿಮನೇನ ಪೂರ್ವಂ
ನಿರಸ್ತಮಾನೇನ ಚ ಮಾನದೇನ ।
ಧರ್ಮೋಽಥ ವಾ ಸರ್ವಜನಾನುಕಂಪಯಾ
ಯತೋ ಭವಾಂಸ್ತುಷ್ಯತಿ ಸರ್ವಜೀವಃ ॥ ೩೫ ॥

ಕಸ್ಯಾನುಭಾವೋಽಸ್ಯ ನ ದೇವ ವಿದ್ಮಹೇ
ತವಾಂಘ್ರಿರೇಣುಸ್ಪರ್ಶಾಧಿಕಾರಃ ।
ಯದ್ವಾಂಛಯಾ ಶ್ರೀರ್ಲಲನಾಽಽಚರತ್ತಪೋ
ವಿಹಾಯ ಕಾಮಾನ್ಸುಚಿರಂ ಧೃತವ್ರತಾ ॥ ೩೬ ॥

ನ ನಾಕಪೃಷ್ಠಂ ನ ಚ ಸಾರ್ವಭೌಮಂ
ನ ಪಾರಮೇಷ್ಠ್ಯಂ ನ ರಸಾಧಿಪತ್ಯಮ್ ।
ನ ಯೋಗಸಿದ್ಧೀರಪುನರ್ಭವಂ ವಾ
ವಾಂಛಂತಿ ಯತ್ಪಾದರಜಃಪ್ರಪನ್ನಾಃ ॥ ೩೭ ॥

ತದೇಷ ನಾಥಾಪ ದುರಾಪಮನ್ಯೈ-
ಸ್ತಮೋಜನಿಃ ಕ್ರೋಧವಶೋಽಪ್ಯಹೀಶಃ ।
ಸಂಸಾರಚಕ್ರೇ ಭ್ರಮತಃ ಶರೀರಿಣೋ
ಯದಿಚ್ಛತಃ ಸ್ಯಾದ್ವಿಭವಃ ಸಮಕ್ಷಃ ॥ ೩೮ ॥

**ನಾಗಪತ್ನಿಯರು ಹೇಳುತ್ತಾರೆ** - ಪ್ರಭುವೇ! ನಿನ್ನ ಈ ಅವತಾರವು ದುಷ್ಟರನ್ನು ಶಿಕ್ಷಿಸುವುದಕ್ಕಾಗಿಯೇ ಆಗಿದೆ. ಅದಕ್ಕಾಗಿ ಈ ಕಾಳಿಯನನ್ನು ಶಿಕ್ಷಿಸುವುದು ಉಚಿತವೇ ಆಗಿದೆ. ನಿನ್ನ ದೃಷ್ಟಿಯಲ್ಲಿ ಶತ್ರು ಮತ್ತು ಪುತ್ರರಲ್ಲಿ ಯಾವ ಭೇದವೂ ಇಲ್ಲ, ಆದರಿಂದ ನೀನು ಕೊಡುವ ಶಿಕ್ಷೆಯು ಅವರ ಪಾಪದ ಪ್ರಾಯಶ್ಚಿತ್ತಕ್ಕಾಗಿ ಮತ್ತು ಅವರ ಪರಮ ಕಲ್ಯಾಣಕ್ಕಾಗಿಯೇ ಇರುತ್ತದೆ. ॥ ೩೩ ॥ ನೀನು ನಮ್ಮ ಮೇಲೆ ಮಹದನುಗ್ರಹವನ್ನೇ ಮಾಡಿರುವೆ. ಇದಾದರೋ ನಿನ್ನ ಕೃಪಾಪ್ರಸಾದವೇ ಆಗಿದೆ. ಏಕೆಂದರೆ, ದುಷ್ಟ ಜನರಿಗೆ ನೀನು ಕೊಡುವ ಶಿಕ್ಷೆಯಿಂದ ಅವರ ಎಲ್ಲ ಪಾಪಗಳೂ ನಾಶವಾಗಿ ಹೋಗುತ್ತವೆ. ಈ ಸರ್ಪವು ಅಪರಾಧಿಯಾಗಿರುವುದರಲ್ಲಿ ಯಾವ ಸಂದೇಹವೂ ಇಲ್ಲ, ಅಪರಾಧಿಯಲ್ಲದಿದ್ದರೆ ಇವನಿಗೆ ಸರ್ಪಯೋನಿ ಏಕೆ ದೊರೆಯುತ್ತಿತ್ತು. ಅದಕ್ಕಾಗಿ ನಾವು ನಿಜವಾದ ಹೃದಯದಿಂದ ನಿನ್ನ ಈ ಕ್ರೋಧವನ್ನು ನಿನ್ನ ಅನುಗ್ರಹವೆಂದೇ ತಿಳಿಯುತ್ತೇವೆ. ॥ ೩೪ ॥ ಇವನು ಹಿಂದಿನ ಜನ್ಮದಲ್ಲಿ ಖಂಡಿತವಾಗಿ ನಿರಹಂಕಾರಿಯಾಗಿ, ಬೇರೆಯವರನ್ನು ಸಮ್ಮಾನಿಸುತ್ತಾ ಯಾವುದೋ ದೊಡ್ಡ ತಪಸ್ಸು ಮಾಡಿರಬೇಕು. ಅಥವಾ ಎಲ್ಲ ಜೀವರ ಮೇಲೆ ದಯೆ ಮಾಡುತ್ತಾ ಇವನು ಯಾವುದೋ ದೊಡ್ಡ ಧರ್ಮಕಾರ್ಯವನ್ನು ಮಾಡಿರಬೇಕು. ಆದರಿಂದಲೇ ನೀನು ಇವನ ಮೇಲೆ ಸಂತುಷ್ಟನಾಗಿರುವೆ. ಏಕೆಂದರೆ, ಸರ್ವಜೀವರ ಸ್ವರೂಪನಾದ ನಿನ್ನ ಪ್ರಸನ್ನತೆಗಾಗಿ ಇದೇ ಉಪಾಯವಾಗಿದೆ. ॥೩೫ ॥ ಭಗವಂತಾ! ನಿನ್ನ ಚರಣ ರಜದ ಸ್ಪರ್ಶವನ್ನು ಪಡೆಯುವ ಅಧಿಕಾರಿಯಾದುದು ಇದು ಇವನ ಯಾವ ಸಾಧನೆಯ ಫಲವೆಂದು ನಾವು ತಿಳಿಯುತ್ತಿಲ್ಲ, ನಿನ್ನ ಚರಣಗಳ ರಜವು ಎಷ್ಟು ದುರ್ಲಭವಾದುದೆಂದರೆ, ಅದಕ್ಕಾಗಿ ಅರ್ಧಾಂಗಿನಿಯಾದ ಲಕ್ಷ್ಮೀದೇವಿಯೂ ಕೂಡ ಬಹಳ ದಿನಗಳವರೆಗೆ ಸಮಸ್ತ ಭೋಗಗಳನ್ನು ತ್ಯಜಿಸಿ ನಿಯಮಗಳನ್ನು ಪಾಲಿಸುತ್ತಾ ತಪಸ್ಸು ಮಾಡಬೇಕಾಯಿತು. ॥ ೩೬ ॥ ಪ್ರಭೋ! ನಿನ್ನ ಚರಣಧೂಳಿಯನ್ನು ಶರಣು ಹೋಗುವ ಭಗವದ್ಭಕ್ತರು ಸ್ವರ್ಗವನ್ನಾಗಲೀ, ಸಾರ್ವಭೌಮತ್ವವನ್ನಾಗಲೀ, ರಸಾತಲದ ಆಧಿಪತ್ಯವನ್ನಾಗಲೀ, ಬ್ರಹ್ಮಪದವಿಯನ್ನಾಗಲೀ ಬಯಸುವುದಿಲ್ಲ, ಅವರಿಗೆ ಅಣಿಮಾದಿ ಅಷ್ಟಸಿದ್ಧಿಗಳ ಇಚ್ಛೆಯೇ ಇರುವುದಿಲ್ಲ, ಅವರು ಜನ್ಮ-ಮರಣವನ್ನು ತಪ್ಪಿಸುವ ಕೈವಲ್ಯ ಮೋಕ್ಷವನ್ನೂ ಅಪೇಕ್ಷಿಸುವುದಿಲ್ಲ. ॥ ೩೭॥ ಸ್ವಾಮಿ! ಈ ನಾಗರಾಜನು ತಮೋಗುಣಿಗಳ ಯೋನಿಯಲ್ಲಿ ಹುಟ್ಟಿದವನು. ಸ್ವಾಭಾವಿಕವಾಗಿಯೇ ಮಹಾಕೋಪಿಷ್ಠನೂ ಆಗಿರುವನು. ಹೀಗಿದ್ದರೂ ಇವನಿಗೆ ಬೇರೆಯವರಿಗೆ ದುರ್ಲಭವಾದ ನಿನ್ನ ಪರಮ ಪವಿತ್ರ ಚರಣರಜವು ಪ್ರಾಪ್ತವಾಗಿದೆ. ಅದನ್ನು ಪಡೆಯುವ ಇಚ್ಛಾಮಾತ್ರದಿಂದಲೇ ಸಂಸಾರಚಕ್ರದಲ್ಲಿ ಬಿದ್ದಿರುವ ಜೀವನಿಗೆ ವೈಭವ-ಸಂಪತ್ತುಗಳ ಮಾತೇನು ? ಮೋಕ್ಷವೂ ಪ್ರಾಪ್ತವಾಗುತ್ತದೆ. ॥ ೩೮ ॥

ಪ್ರಭೋ! ಅಚಿಂತ್ಯವಾದ ಐಶ್ವರ್ಯವೂ ನಿತ್ಯನಿಧಿಯಾಗಿರತಕ್ಕವನೇ! ಸಮಸ್ತರ ಅಂತಃಕರಣದಲ್ಲಿಯೂ ವಿರಾಜಿಸುತ್ತಿರುವವನೇ! ಸಮಸ್ತ ಪ್ರಾಣಿಗಳಿಗೂ ಮತ್ತು ವಸ್ತುಗಳಿಗೂ ಆಶ್ರಯ

ನಮಸ್ತುಭ್ಯಂ ಭಗವತೇ ಪುರುಷಾಯ ಮಹಾತ್ಮನೇ ।
ಭೂತಾವಾಸಾಯ ಭೂತಾಯ ಪರಾಯ ಪರಮಾತ್ಮನೇ ॥ ೩೯ ॥

ಜ್ಞಾನವಿಜ್ಞಾನನಿಧಯೇ ಬ್ರಹ್ಮಣೇಽನಂತಶಕ್ತಯೇ ।
ಅಗುಣಾಯಾವಿಕಾರಾಯ ನಮಸ್ತೇಽಪ್ರಾಕೃತಾಯ ಚ ॥ ೪೦ ॥

ಕಾಲಾಯ ಕಾಲನಾಭಾಯ ಕಾಲಾವಯವಸಾಕ್ಷಿಣೇ ।
ವಿಶ್ವಾಯ ತದುಪದ್ರಷ್ಟ್ರೇ ತತ್ಕರ್ತ್ರೇ ವಿಶ್ವಹೇತವೇ ॥ ೪೧ ॥

ಭೂತಮಾತ್ರೇಂದ್ರಿಯಪ್ರಾಣಮನೋಬುದ್ಧ್ಯಾಶಯಾತ್ಮನೇ ।
ತ್ರಿಗುಣೇನಾಭಿಮಾನೇನ ಗೂಢಸ್ವಾತ್ಮಾನುಭೂತಯೇ ॥ ೪೨ ॥

ನಮೋಽನಂತಾಯ ಸೂಕ್ಷ್ಮಾಯ ಕೂಟಸ್ಥಾಯ ವಿಪಶ್ಚಿತೇ ।
ನಾನಾವಾದಾನುರೋಧಾಯ ವಾಚ್ಯವಾಚಕಶಕ್ತಯೇ ॥ ೪೩ ॥

ನಮಃ ಪ್ರಮಾಣಮೂಲಾಯ ಕವಯೇ ಶಾಸ್ತ್ರಯೋನಯೇ ।
ಪ್ರವೃತ್ತಾಯ ನಿವೃತ್ತಾಯ ನಿಗಮಾಯ ನಮೋ ನಮಃ ॥ ೪೪ ॥

ನಮಃ ಕೃಷ್ಣಾಯ ರಾಮಾಯ ವಸುದೇವಸುತಾಯ ಚ ।
ಪ್ರದ್ಯುಮ್ನಾಯಾನಿರುದ್ಧಾಯ ಸಾತ್ವತಾಂ ಪತಯೇ ನಮಃ ॥ ೪೫ ॥

ನಮೋ ಗುಣಪ್ರದೀಪಾಯ ಗುಣಾತ್ಮಚ್ಛಾದನಾಯ ಚ ।
ಗುಣವೃತ್ತ್ಯುಪಲಕ್ಷ್ಯಾಯ ಗುಣದ್ರಷ್ಟ್ರೇ ಸ್ವಸಂವಿದೇ ॥ ೪೬ ॥

ನಾಗಿರತಕ್ಕವನೇ! ಪ್ರಾಣಗಳ ಹಾಗೂ ಪದಾರ್ಥಗಳ ರೂಪದಲ್ಲಿ ಇರುವವನೇ! ಪ್ರಕೃತಿಗೂ ಅತೀತನಾದ ಪರಮಾತ್ಮನೇ! ನಿನಗೆ ನಮಸ್ಕಾರವು. ॥ ೩೯ ॥ ದೇವ! ನೀನು ಸಮಸ್ತವಾದ ಜ್ಞಾನಗಳಿಗೂ ಮತ್ತು ಅನುಭವಗಳಿಗೂ ನಿಧಿಪ್ರಾಯನಾಗಿರುವೆ. ನಿನ್ನ ಮಹಿಮೆ ಮತ್ತು ಶಕ್ತಿಯು ಅನಂತವಾದುದು. ನಿನ್ನ ಸ್ವರೂಪವು ಅಪ್ರಾಕೃತವೂ, ದಿವ್ಯವೂ, ಚಿನ್ಮಯವೂ ಆಗಿದೆ. ನೀನು ನಿರ್ಗುಣ ನಿರಾಕಾರ- ನಿರ್ವಿಕಾರನು. ನೀನೇ ಪರಬ್ರಹ್ಮ ವಸ್ತುವು. ಅಂತಹ ನಿನಗೆ ನಾವು ನಮಸ್ಕರಿಸುತ್ತೇವೆ. ॥ ೪೦ ॥ ನೀನು ಪ್ರಕೃತಿಯಲ್ಲಿ ಕ್ಷೋಭೆಯನ್ನುಂಟುಮಾಡುವ ಕಾಲಪುರುಷನಾಗಿದ್ದು, ಕಾಲಶಕ್ತಿಗೆ ಆಶ್ರಯನಾಗಿರುವೆ. ಕಾಲದ ಕ್ಷಣ-ಕಲ್ಪಾದಿ ಸಮಸ್ತ ಅವಯವಗಳಿಗೂ ಸಾಕ್ಷಿಯಾಗಿರುವೆ. ನೀನು ವಿಶ್ವರೂಪನಾಗಿದ್ದರೂ ಅದರಿಂದ ಬೇರೆಯಾಗಿದ್ದು ಆದರ ದ್ರಷ್ಟಾರನಾಗಿರುವೆ. ಜಗತ್ತಿಗೆ ಕಾರಣನೂ ನೀನೇ ಆಗಿರುವೆ. ಅಂತಹ ನಿನಗೆ ನಮಸ್ಕರಿಸುತ್ತೇವೆ. ॥ ೪೧ ॥ ಪ್ರಭೋ! ಪಂಚಭೂತಗಳೂ ಮತ್ತು ಪಂಚತನ್ಮಾತ್ರೆಗಳೂ, ಇಂದ್ರಿಯಗಳೂ, ಪ್ರಾಣ, ಮನಸ್ಸು, ಬುದ್ಧಿ ಮತ್ತು ಇವೆಲ್ಲಕ್ಕೆ ಆಶ್ರಯಸ್ಥಾನವಾದ ಚಿತ್ತ - ಇವೆಲ್ಲವೂ ನೀನೆ ಆಗಿರುವೆ. ನಿನ್ನ ಅಂಶಭೂತರಾದ ಜೀವಾತ್ಮರ ಶುದ್ಧಜ್ಞಾನವನ್ನು ತ್ರಿಗುಣಾತ್ಮಕವಾದ ಅಹಂಕಾರದಿಂದ ಮರೆ ಮಾಡಿರುವ ನಿನಗೆ ನಮಸ್ಕಾರವು. ॥ ೪೨ ॥ ನೀನು ಅನಂತನೂ, ಸೂಕ್ಷ್ಮನು, ವಿಕಾರವಿಲ್ಲದವನೂ, ಸರ್ವಜ್ಞನೂ ಆಗಿರುವೆ. ಇಂತಹ ನಿನಗೆ ನಮಸ್ಕಾರವು. 'ಪರಮಾತ್ಮನು ಇದ್ದಾನೆ, 'ಪರಮಾತ್ಮನು ಇಲ್ಲ, ಅವನು ಸರ್ವಜ್ಞನು, ಸರ್ವಜ್ಞನಲ್ಲ' - ಇವೇ ಮುಂತಾದ ವಾದ-ವಿವಾದಗಳಿಗೆ ವಿಷಯನಾಗಿಯೂ, ಶಬ್ದರೂಪನಾಗಿಯೂ, ಶಬ್ದಾರ್ಥರೂಪನಾಗಿಯೂ ಮತ್ತು ಅವೆರಡಕ್ಕೂ ಸಂಬಂಧವನ್ನು ಕಲ್ಪಿಸುವ ಶಕ್ತಿಯುಳ್ಳವನಾಗಿಯೂ ಇರುವ ನಿನಗೆ ನಮಸ್ಕಾರವು. ॥ ೪೩ ॥ ಪ್ರತ್ಯಕ್ಷ-ಅನುಮಾನ ಮುಂತಾದ ಪ್ರಮಾಣಗಳನ್ನು ಪ್ರಮಾಣೀಕರಿಸುವ ಮೂಲಪುರುಷನು ನೀನೇ ಆಗಿರುವೆ. ಸಮಸ್ತ ವೇದಶಾಸ್ತ್ರಗಳಿಗೂ ನೀನೇ ಉಗಮಸ್ಥಾನವಾಗಿರುವೆ. ನೀನು ಜ್ಞಾನಸ್ವರೂಪನಾಗಿರುವೆ. ಪ್ರವೃತ್ತಿ ಮಾರ್ಗಸ್ವರೂಪನೂ, ನಿವೃತ್ತಿಮಾರ್ಗಸ್ವರೂಪನೂ ನೀನೇ ಆಗಿರುವೆ. ಪ್ರವೃತ್ತಿ-ನಿವೃತ್ತಿ ಮಾರ್ಗಗಳ ವಿಧಾಯಕಗಳ ವೇದಸ್ವರೂಪನೂ ನೀನೇ. ಅಂತಹ ನಿನಗೆ ಪುನಃ ಪುನಃ ನಮಸ್ಕಾರಗಳು. ॥ ೪೪ ॥ ನೀನು ಶುದ್ಧ ಸತ್ತ್ವಮಯ ವಸುದೇವನ ಪುತ್ರನಾದ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನೂ ನೀನೇ ಆಗಿರುವೆ. ಹೀಗೆ ಚತುರ್ವ್ಯೂಹದ ರೂಪದಲ್ಲಿ ನೀನು ಭಕ್ತರಿಗೆ ಹಾಗೂ ಯಾದವರಿಗೆ ಒಡೆಯನಾಗಿರುವೆ. ಶ್ರೀಕೃಷ್ಣ! ನಾವು ನಿನಗೆ ನಮಸ್ಕರಿಸುತ್ತೇವೆ. ॥ ೪೫ ॥ ನೀನು ಅಂತಃಕರಣ ಮತ್ತು ಅದರ ವೃತ್ತಿಗಳ ಪ್ರಕಾಶಕನಾಗಿರುವೆ. ಅವುಗಳ ಮೂಲಕವೇ ತಾನೇ-ತನ್ನನ್ನು ಮುಚ್ಚಿಟ್ಟುಕೊಂಡಿರುವೆ. ಆ ಅಂತಃಕರಣ ಮತ್ತು ವೃತ್ತಿಗಳಿಂದಲೇ ನಿನ್ನ ಸ್ವರೂಪದ ಅಲ್ಪ-ಸ್ವಲ್ಪ ಸಂಕೇತವೂ ದೊರೆಯುತ್ತದೆ. ನೀನು ಆ ಗುಣಗಳ ಹಾಗೂ ಅವುಗಳ ವೃತ್ತಿಗಳ ಸಾಕ್ಷಿ ಮತ್ತು ಸ್ವಯಂ ಪ್ರಕಾಶನಾಗಿರುವೆ. ಅಂತಹ ನಿನಗೆ ನಾವು ನಮಸ್ಕರಿಸುತ್ತೇವೆ. ॥ ೪೬ ॥

ಅವ್ಯಾಕೃತವಿಹಾರಾಯ ಸರ್ವವ್ಯಾಕೃತಸಿದ್ಧಯೇ ।
ಹೃಷೀಕೇಶ ನಮಸ್ತೇಽಸ್ತು ಮುನಯೇ ಮೌನಶೀಲಿನೇ
॥ ೪೭ ॥

ನೀನು ಈ ಮೂಲ ಪ್ರಕೃತಿಯಲ್ಲಿ ನಿತ್ಯವೂ ವಿಹರಿಸುತ್ತಿರುವೆ. ಸಮಸ್ತವಾದ ಸ್ಥೂಲ, ಸೂಕ್ಷ್ಮ ಜಗತ್ತು ನಿನ್ನಿಂದಲೇ ಸಿದ್ಧವಾಗುತ್ತದೆ. ಹೃಷೀಕೇಶನೇ! ನೀನು ಮನನಶೀಲನಾದ ಆತ್ಮಾರಾಮನಾಗಿರುವೆ. ಮೌನವೇ ನಿನ್ನ ಸ್ವಭಾವವಾಗಿದೆ. ಅಂತಹ ನಿನಗೆ ನಮಸ್ಕರಿಸುತ್ತೇವೆ. ॥ ೪೭ ॥

ಪರಾವರಗತಿಜ್ಞಾಯ ಸರ್ವಾಧ್ಯಕ್ಷಾಯ ತೇ ನಮಃ ।
ಅವಿಶ್ವಾಯ ಚ ವಿಶ್ವಾಯ ತದ್ದ್ರಷ್ಟ್ರೇಽಸ್ಯ ಚ ಹೇತವೇ
॥ ೪೮ ॥

ನೀನು ಸ್ಥೂಲ, ಸೂಕ್ಷ್ಮ ಸಮಸ್ತ ಗತಿಗಳನ್ನು ತಿಳಿದವನೂ, ಎಲ್ಲರ ಸಾಕ್ಷಿಯೂ ಆಗಿರುವೆ. ನೀನು ವಿಶ್ವವಲ್ಲದಿದ್ದರೂ ವಿಶ್ವದ ಸ್ವರೂಪನಾಗಿರುವೆ. ಅಂತಹ ವಿಶ್ವಕ್ಕೆ ಸಾಕ್ಷಿಭೂತನೂ ಆಗಿರುವೆ ಮತ್ತು ಕಾರಣನೂ ಆಗಿರುವೆ. ಅಂತಹ ಸರ್ವೋತ್ಕೃಷ್ಟ ಮಹಿಮನಾಗಿರುವ ನಿನಗೆ ನಮಸ್ಕಾರ ಮಾಡುತ್ತೇವೆ. ॥ ೪೮ ॥

ತ್ವಂ ಹ್ಯಸ್ಯ ಜನ್ಮಸ್ಥಿತಿಸಂಯಮಾನ್ಪ್ರಭೋ
ಗುಣೈರನೀಹೋಽಕೃತ ಕಾಲಶಕ್ತಿಧೃಕ್ ।
ತತ್ತತ್ಸ್ವಭಾವಾನ್ಪ್ರತಿಬೋಧಯನ್ಸತಃ
ಸಮೀಕ್ಷಯಾಮೋಘವಿಹಾರ ಈಹಸೇ ॥ ೪೯ ॥

ಪ್ರಭುವೇ ! ಕರ್ತೃತ್ವವಿಲ್ಲದ ಕಾರಣ ನೀನು ಯಾವುದೇ ಕರ್ಮವನ್ನು ಮಾಡದೇ ನಿಷ್ಕ್ರಿಯನಾಗಿರುವೆ. ಹಾಗಿದ್ದರೂ ಅನಾದಿಯಾದ ಕಾಲಶಕ್ತಿಯನ್ನು ಸ್ವೀಕರಿಸಿ ಪ್ರಕೃತಿಯ ಗುಣಗಳ ಮೂಲಕ ನೀನೇ ಈ ವಿಶ್ವದ ಉತ್ಪತ್ತಿ, ಸ್ಥಿತಿ, ಪ್ರಳಯ ಎಂಬ ಲೀಲೆಯನ್ನು ಮಾಡುತ್ತಿರುವೆ. ಏಕೆಂದರೆ, ನಿನ್ನ ಲೀಲೆಗಳು ಅಮೋಘವಾಗಿವೆ. ನೀನು ಸತ್ಯ ಸಂಕಲ್ಪನಾಗಿರುವೆ. ಅದಕ್ಕಾಗಿ ಜೀವರ ಸಂಸ್ಕಾರರೂಪದಿಂದ ಅಡಗಿದ್ದ ಸ್ವಭಾವಗಳನ್ನು ನಿನ್ನ ದೃಷ್ಟಿಯಿಂದ ಜಾಗ್ರತಗೊಳಿಸುತ್ತಿರುವೆ. ॥ ೪೯ ॥ ಪ್ರಭುವೇ ! ಮೂರು ಲೋಕಗಳಲ್ಲಿಯೂ ಸತ್ತ್ವಗುಣ ಪ್ರಧಾನವಾದ ಶಾಂತ, ರಜೋಗುಣ ಪ್ರಧಾನವಾದ ಅಶಾಂತ ಮತ್ತು ತಮೋಗುಣ ಪ್ರಧಾನ ಮೂಢ ಎಂಬ ಮೂರು ರೀತಿಯ ಯೋನಿಗಳಿವೆ. ಇವೆಲ್ಲವೂ ನಿನ್ನ ಲೀಲಾ ಮೂರ್ತಿಗಳೇ ಆಗಿವೆ. ಹೀಗಿದ್ದರೂ ಈ ಸಮಯದಲ್ಲಿ ಸತ್ತ್ವಗುಣ ಪ್ರಧಾನವಾದ ಶಾಂತ ಜನರೇ ನಿನ್ನ ವಿಶೇಷ ಪ್ರೀತಿಗೆ ಪಾತ್ರರಾಗಿದ್ದಾರೆ. ಏಕೆಂದರೆ, ನಿನ್ನ ಈ ಅವತಾರವು ಮತ್ತು ಈ ಲೀಲೆಗಳು ಸಾಧುಗಳ ರಕ್ಷಣೆಗಾಗಿಯೂ, ಧರ್ಮದ ರಕ್ಷಣೆ ಹಾಗೂ ವಿಸ್ತಾರಕ್ಕಾಗಿಯೇ ಇದೆ. ॥ ೫೦ ॥

ತಸ್ಯೈವ ತೇಽಮೂಸ್ತನವಸ್ತ್ರಿಲೋಕ್ಯಾಂ
ಶಾಂತಾ ಅಶಾಂತಾ ಉತ ಮೂಢಯೋನಯಃ ।
ಶಾಂತಾಃ ಪ್ರಿಯಾಸ್ತೇ ಹ್ಯಧುನಾವಿತುಂ ಸತಾಂ
ಸ್ಥಾತುಶ್ಚ ತೇ ಧರ್ಮಪರೀಪ್ಸಯೇಹತಃ ॥ ೫೦ ॥

ಅಪರಾಧಃ ಸಕೃದ್ಭರ್ತ್ರಾ ಸೋಢವ್ಯಃ ಸ್ವಪ್ರಜಾಕೃತಃ ।
ಕ್ಷಂತುಮರ್ಹಸಿ ಶಾಂತಾತ್ಮನ್ಮೂಢಸ್ಯ ತ್ವಾಮಜಾನತಃ
॥ ೫೧ ॥

ಶಾಂತಾತ್ಮನೇ ! ರಾಜನಾದವನು ತನ್ನ ಪ್ರಜೆಗಳು ಮಾಡಿದ ಮೊದಲ ಅಪರಾಧವನ್ನು ಕ್ಷಮಿಸಬೇಕು. ಹಾಗೆಯೇ ನೀನು ಯಾರೆಂಬುದನ್ನು ತಿಳಿಯದೇ ಮಾಡಿರುವ ಈ ಮೂಢನ (ನಮ್ಮ ಪತಿ) ಈ ಅಪರಾಧವನ್ನು ಕ್ಷಮಿಸಬೇಕು. ॥ ೫೧ ॥ ಭಗವಂತನೇ ! ದಯೆದೋರು. ಇಷ್ಟರಲ್ಲೇ ಈ ನಾಗರಾಜನು ಸಾಯುವುದರಲ್ಲಿದ್ದಾನೆ. ಸಾಧುಪುರುಷರು ಯಾವಾಗಲೂ ನಮ್ಮಂತಹ ಅಬಲೆಯರ ಮೇಲೆ ದಯೆತೋರುತ್ತಾರೆ. ಆದುದರಿಂದ ಪ್ರಾಣ ಸ್ವರೂಪನಾಗಿರುವ ನಮ್ಮ ಪತಿಯನ್ನು ನಮಗೆ ದಯಪಾಲಿಸು. ॥ ೫೨ ॥ ನಾವು ನಿನ್ನ ದಾಸಿಯರಾಗಿದ್ದೇವೆ. ನಾವು ನಿನಗೆ ಯಾವ ವಿಧವಾದ ಸೇವೆಯನ್ನು ಮಾಡಬೇಕೆಂಬುದರ ಕುರಿತು ನಮಗೆ ಆಜ್ಞಾಪಿಸು. ನಿನ್ನ ಆಜ್ಞೆಯನ್ನು ಪಾಲಿಸುತ್ತಾ, ಶ್ರದ್ಧೆಯಿಂದ ಸೇವೆಯನ್ನು ಮಾಡುವವರು ಸಮಸ್ತವಾದ ಭಯಗಳಿಂದಲೂ ಮುಕ್ತರಾಗುತ್ತಾರೆ. ॥ ೫೩ ॥

ಅನುಗೃಹ್ಣೀಷ್ವ ಭಗವನ್ಪ್ರಾಣಾಂಸ್ತ್ಯಜತಿ ಪನ್ನಗಃ ।
ಸ್ತ್ರೀಣಾಂ ನಃ ಸಾಧುಶೋಚ್ಯಾನಾಂ ಪತಿಃ ಪ್ರಾಣಃ ಪ್ರದೀಯತಾಮ್
॥ ೫೨ ॥

ವಿಧೇಹಿ ತೇ ಕಿಂಕರೀಣಾಮನುಷ್ಠೇಯಂ ತವಾಜ್ಞಯಾ ।
ಯಚ್ಛ್ರದ್ಧಯಾನುತಿಷ್ಠನ್ವೈ ಮುಚ್ಯತೇ ಸರ್ವತೋಭಯಾತ್
॥ ೫೩ ॥

*ಶ್ರೀಶುಕ ಉವಾಚ*

ಇತ್ಥಂ ಸ ನಾಗಪತ್ನೀಭಿರ್ಭಗವಾನ್ಸಮಭಿಷ್ಟುತಃ ।
ಮೂರ್ಚ್ಛಿತಂ ಭಗ್ನಶಿರಸಂ ವಿಸಸರ್ಜಾಂಘ್ರಿಕುಟ್ಟನೈಃ
॥ ೫೪ ॥

ಪ್ರತಿಲಬ್ಧೇಂದ್ರಿಯಪ್ರಾಣಃ ಕಾಲಿಯಃ ಶನಕೈರ್ಹರಿಮ್ ।
ಕೃಚ್ಛ್ರಾತ್ಸಮುಚ್ಛ್ವಸನ್ ದೀನಃ ಕೃಷ್ಣಂ ಪ್ರಾಹ ಕೃತಾಂಜಲಿಃ
॥ ೫೫ ॥

*ಕಾಲಿಯ ಉವಾಚ*

ವಯಂ ಖಲಾಃ ಸಹೋತ್ಪತ್ತ್ಯಾ ತಾಮಸಾ ದೀರ್ಘಮನ್ಯವಃ ।
ಸ್ವಭಾವೋ ದುಸ್ತ್ಯಜೋ ನಾಥ ಲೋಕಾನಾಂ ಯದಸದ್ಗ್ರಹಃ
॥ ೫೬ ॥

ತ್ವಯಾ ಸೃಷ್ಟಮಿದಂ ವಿಶ್ವಂ ಧಾತರ್ಗುಣವಿಸರ್ಜನಮ್ ।
ನಾನಾಸ್ವಭಾವವೀರ್ಯೌಜೋಯೋನಿಬೀಜಾಶಯಾಕೃತಿ
॥ ೫೭ ॥

ವಯಂ ಚ ತತ್ರ ಭಗವನ್ಸರ್ಪಾ ಜಾತ್ಯುರುಮನ್ಯವಃ ।
ಕಥಂ ತ್ಯಜಾಮಸ್ತ್ವನ್ಮಾಯಾಂ ದುಸ್ತ್ಯಜಾಂ ಮೋಹಿತಾಃ ಸ್ವಯಮ್
॥ ೫೮ ॥

ಭವಾನ್ಹಿ ಕಾರಣಂ ತತ್ರ ಸರ್ವಜ್ಞೋ ಜಗದೀಶ್ವರಃ ।
ಅನುಗ್ರಹಂ ನಿಗ್ರಹಂ ವಾ ಮನ್ಯಸೇ ತದ್ವಿಧೇಹಿ ನಃ
॥ ೫೯ ॥

*ಶ್ರೀಶುಕ ಉವಾಚ*

ಇತ್ಯಾಕರ್ಣ್ಯ ವಚಃ ಪ್ರಾಹ ಭಗವಾನ್ಕಾರ್ಯಮಾನುಷಃ ।
ನಾತ್ರ ಸ್ಥೇಯಂ ತ್ವಯಾ ಸರ್ಪ ಸಮುದ್ರಂ ಯಾಹಿ ಮಾ ಚಿರಮ್ ।
ಸ್ವಜ್ಞಾತ್ಯಪತ್ಯದಾರಾಢ್ಯೋ ಗೋನೃಭಿರ್ಭುಜ್ಯತಾಂ ನದೀ
॥ ೬೦ ॥

ಯ ಏತತ್ಸಂಸ್ಮರೇನ್ಮರ್ತ್ಯಸ್ತುಭ್ಯಂ ಮದನುಶಾಸನಮ್ ।
ಕೀರ್ತಯನ್ನುಭಯೋಃ ಸಂಧ್ಯೋರ್ನ ಯುಷ್ಮದ್ಭಯಮಾಪ್ನುಯಾತ್
॥ ೬೧ ॥

ಯೋಽಸ್ಮಿನ್ಸ್ನಾತ್ವಾ ಮದಾಕ್ರೀಡೇ ದೇವಾದೀನ್ಸ್ತರ್ಪಯೇಜ್ಜಲೈಃ ।
ಉಪೋಷ್ಯ ಮಾಂ ಸ್ಮರನ್ನರ್ಚೇತ್ಸರ್ವಪಾಪೈಃ ಪ್ರಮುಚ್ಯತೇ
॥ ೬೨ ॥

ದ್ವೀಪಂ ರಮಣಕಂ ಹಿತ್ವಾ ಹ್ರದಮೇತಮುಪಾಶ್ರಿತಃ ।
ಯದ್ಭಯಾತ್ಸ ಸುಪರ್ಣಸ್ತ್ವಾಂ ನಾದ್ಯಾನ್ಮತ್ಪಾದಲಾಂಛಿತಮ್
॥ ೬೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಂತನ ಪಾದಗಳ ಪ್ರಹಾರದಿಂದ ಕಾಳಿಯ ನಾಗನ ಹೆಡೆಗಳು ಛಿನ್ನ-ಭಿನ್ನವಾಗಿದ್ದವು. ಅವನು ಎಚ್ಚರತಪ್ಪಿ ತಲೆ ತಗ್ಗಿಸಿದ್ದನು. ನಾಗಪತ್ನಿಯರು ಭಗವಂತನನ್ನು ಹೀಗೆ ಸ್ತುತಿಸಿದಾಗ ದಯಾಮಯನಾದ ಭಗವಂತನು ಕಾಳಿಯನನ್ನು ಬಿಟ್ಟುಬಿಟ್ಟನು. ॥ ೫೪ ॥ ನಿಧಾನವಾಗಿ ಕಾಳಿಯನ ಇಂದ್ರಿಯಗಳಲ್ಲಿ, ಪ್ರಾಣಗಳಲ್ಲಿ ಚೈತನ್ಯವುಂಟಾಯಿತು. ಅವನು ಕಷ್ಟಪಟ್ಟು ಉಸಿರಾಡತೊಡಗಿದನು. ಸ್ವಲ್ಪ ಹೊತ್ತಿನಲ್ಲಿ ಅತಿದೀನತೆಯಿಂದ ವಿನಮ್ರನಾಗಿ ಭಗವಾನ್ ಶ್ರೀಕೃಷ್ಣನಲ್ಲಿ ಹೀಗೆ ಪ್ರಾರ್ಥಿಸಿದನು. ॥ ೫೫ ॥

**ಕಾಳಿಯನಾಗನು ಹೇಳುತ್ತಾನೆ** – ನಾಥನೇ! ನಾವು ಜನ್ಮದಿಂದಲೇ ದುಷ್ಟರಾಗಿದ್ದೇವೆ. ತಮೋಗುಣಿಗಳಾಗಿದ್ದೇವೆ. ದೀರ್ಘಕೋಪಿಗಳಾಗಿದ್ದೇವೆ. ಪ್ರಾಣಿಗಳಿಗೆ ತಮ್ಮ ಸ್ವಭಾವವವನ್ನು ಬಿಡುವುದು ಬಹಳ ಕಷ್ಟವೇ ಸರಿ. ಈ ಕಾರಣದಿಂದಲೇ ಪ್ರಪಂಚದ ಜನರು ನಾನಾ ಪ್ರಕಾರವಾದ ದುರಾಗ್ರಹಗಳಿಂದ ಕೂಡಿರುತ್ತಾರೆ. ॥ ೫೬ ॥ ವಿಶ್ವವಿಧಾತನೇ! ಸತ್ತ್ವ-ರಜಸ್ತಮೋ ಗುಣಗಳಿಂದ ನೀನೇ ಸೃಷ್ಟಿಸಿರುವ ಈ ಜಗತ್ತಿನಲ್ಲಿ ನಾನಾ ಪ್ರಕಾರವಾದ ಸ್ವಭಾವ, ವೀರ್ಯ, ಬಲ, ಯೋನಿ, ಬೀಜ, ಚಿತ್ತ ಮತ್ತು ಆಕೃತಿಗಳಿವೆ. ॥ ೫೭ ॥ ಭಗವಂತಾ! ನಿನ್ನದೇ ಆದ ಸೃಷ್ಟಿಯಲ್ಲೇ ಸರ್ಪಗಳಾದ ನಾವು ಇರುವುದು. ನಾವು ಹುಟ್ಟಿನಿಂದಲೇ ಅತಿಕ್ರೋಧಿಗಳಾಗಿದ್ದೇವೆ. ನಾವು ಈ ಮಾಯಾಜಾಲದಲ್ಲಿ ಮೋಹಿತರಾಗಿದ್ದೇವೆ. ಹಾಗಿರುವಾಗ ನಮ್ಮ ಪ್ರಯತ್ನದಿಂದ ಈ ದಾಟಲಶಕ್ಯವಾದ ಮಾಯೆಯನ್ನು ಹೇಗೆ ತ್ಯಜಿಸಬಲ್ಲೆವು ? ॥ ೫೮ ॥ ನೀನು ಸರ್ವಜ್ಞನೂ, ಸಮಸ್ತ ಜಗತ್ತಿನ ಸ್ವಾಮಿಯೂ ಆಗಿರುವೆ. ನೀನೆ ನಮ್ಮ ಸ್ವಭಾವ ಮತ್ತು ಈ ಮಾಯೆಗೆ ಕಾರಣನಾಗಿರುವೆ. ಈಗ ನೀನು ನಿನ್ನ ಇಚ್ಛೆಯಂತೆ ನಿಗ್ರಹಿಸಬಹುದು, ಅನುಗ್ರಹಿಸಲೂಬಹುದು. ॥ ೫೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಕಾಳಿಯನಾಗನ ಮಾತನ್ನು ಕೇಳಿದ ಲೀಲಾಮಾನುಷ ವಿಗ್ರಹನಾದ ಶ್ರೀಕೃಷ್ಣನು ಹೀಗೆ ಎಂದನು – ಎಲೈ ಸರ್ಪವೇ! ನೀನು ಇನ್ನು ಮುಂದೆ ಇಲ್ಲಿರಬಾರದು. ನೀನು ನಿನ್ನ ಪುತ್ರ, ಭ್ರಾತೃ, ಭಾರ್ಯೆ, ಬಂಧುಗಳೊಡನೆ ಸಮುದ್ರಕ್ಕೆ ಹೊರಟುಹೋಗು. ಇಲ್ಲಿರುವ ಗೋವುಗಳೂ, ಗೋಪಾಲಕರೂ ಯಮುನೆಯ ನೀರನ್ನು ಉಪಯೋಗಿಸುವಂತಾಗಲಿ. ॥ ೬೦ ॥ ಎರಡೂ ಸಂಧ್ಯೆಗಳಲ್ಲಿ ನಾನು ನಿನಗಿತ್ತಿರುವ ಆಜ್ಞೆಯನ್ನು ಸ್ಮರಿಸುವವನಿಗೆ, ಕೀರ್ತಿಸುವವನಿಗೆ ಸರ್ಪಗಳಿಂದ ಭಯವು ಎಂದೂ ಉಂಟಾಗದಿರಲಿ. ॥ ೬೧ ॥ ಈ ಕಾಳಿಯ ಮಡುವಿನಲ್ಲಿ ನಾನು ಕ್ರೀಡಿಸಿದ್ದರಿಂದ ಇದರಲ್ಲಿ ಸ್ನಾನಮಾಡಿ, ನೀರಿನಿಂದ ದೇವತೆಗಳಿಗೆ, ತರ್ಪಣ ಮಾಡುವ ಜನರು ಹಾಗೂ ಉಪವಾಸವಿದ್ದು ನನ್ನನ್ನು ಸ್ಮರಿಸುತ್ತಾ, ಪೂಜೆ ಮಾಡುವವರು ಎಲ್ಲ ಪಾಪಗಳಿಂದ ಮುಕ್ತರಾಗಿ ಹೋಗುವರು. ॥ ೬೨ ॥ ನೀನು ಗರುಡನ ಭಯದಿಂದ ರಮಣಕದ್ವೀಪವನ್ನು ಬಿಟ್ಟು ಈ ಮಡುವಿನಲ್ಲಿ ಬಂದು ನೆಲೆಸಿದ್ದೆ ಎಂಬುದನ್ನು ನಾನು ಬಲ್ಲೆ. ಈಗ ನಿನ್ನ ಶರೀರವು ನನ್ನ ಚರಣಚಿಹ್ನೆಯಿಂದ ಅಂಕಿತವಾದ್ದರಿಂದ ಇನ್ನು ಮುಂದೆ ಗರುಡನು ನಿನ್ನನ್ನು ತಿನ್ನಲಾರನು ; ಹೋಗು. ॥ ೬೩ ॥

*ಶ್ರೀಶುಕ ಉವಾಚ*

**ಏವಮುಕ್ತೋ ಭಗವತಾ ಕೃಷ್ಣೇನಾದ್ಭುತಕರ್ಮಣಾ ।**
**ತಂ ಪೂಜಯಾಮಾಸ ಮುದಾ ನಾಗಪತ್ನ್ಯಶ್ಚ ಸಾದರಮ್ ॥ ೬೪ ॥**

**ದಿವ್ಯಾಂಬರಸ್ರಙ್ಮಣಿಭಿಃ ಪರಾರ್ಧ್ಯೈರಪಿ ಭೂಷಣೈಃ ।**
**ದಿವ್ಯಗಂಧಾನುಲೇಪೈಶ್ಚ ಮಹತ್ಯೋತ್ಪಲಮಾಲಯಾ ॥ ೬೫ ॥**

**ಪೂಜಯಿತ್ವಾ ಜಗನ್ನಾಥಂ ಪ್ರಸಾದ್ಯ ಗರುಡಧ್ವಜಮ್ ।**
**ತತಃ ಪ್ರೀತೋಽಭ್ಯನುಜ್ಞಾತಃ ಪರಿಕ್ರಮ್ಯಾಭಿವಂದ್ಯತಮ್ ॥ ೬೬ ॥**

**ಸಕಲತ್ರಸುಹೃತ್ಪುತ್ರೋ ದ್ವೀಪಮಬ್ಧೇರ್ಜಗಾಮ ಹ ।**
**ತದೈವ ಸಾಮೃತಜಲಾ ಯಮುನಾ ನಿರ್ವಿಷಾಭವತ್ ।**
**ಅನುಗ್ರಹಾದ್ಭಗವತಃ ಕ್ರೀಡಾಮಾನುಷರೂಪಿಣಃ ॥ ೬೭ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಭಗವಾನ್ ಶ್ರೀಕೃಷ್ಣನ ಒಂದೊಂದು ಲೀಲೆಯೂ ಅದ್ಭುತವಾಗಿವೆ. ಅವನ ಆಜ್ಞೆಯನ್ನು ಪಡೆದು ಕಾಳಿಯ ನಾಗನು ಪತ್ನಿಯರೊಂದಿಗೆ ಆನಂದದಿಂದ ಬಹಳ ಆದರದಿಂದ ಶ್ರೀಕೃಷ್ಣನನ್ನು ಪೂಜಿಸಿದನು. ॥ ೬೪ ॥ ಅವನು ದಿವ್ಯವಸ್ತ್ರ, ಪುಷ್ಪಮಾಲೆ, ಮಣಿ, ಬಹುಮೂಲ್ಯ ಆಭೂಷಣ, ದಿವ್ಯಗಂಧ, ಚಂದನ ಮತ್ತು ಅತಿ ಉತ್ತಮ ಕಮಲಗಳ ಮಾಲೆಗಳಿಂದ ಜಗತ್ಸ್ವಾಮಿಯಾದ ಗರುಡಧ್ವಜ ಭಗವಾನ್ ಶ್ರೀಕೃಷ್ಣನನ್ನು ಪೂಜಿಸಿ ಸಂತೋಷಪಡಿಸಿದನು. ಇದಾದ ಬಳಿಕ ಪ್ರೇಮಾನಂದದಿಂದ ಅವನ ಪ್ರದಕ್ಷಿಣೆ ಮಾಡಿ, ವಂದಿಸಿ, ಅವನಿಂದ ಬೀಳ್ಕೊಂಡು, ತನ್ನ ಪತ್ನೀ, ಪುತ್ರರೊಂದಿಗೆ ಹಾಗೂ ಬಂಧು ಬಾಂಧವರೊಂದಿಗೆ ಸಮುದ್ರದಲ್ಲಿ ಸರ್ಪಗಳು ವಾಸವಾಗಿರುವ ರಮಣಕದ್ವೀಪಕ್ಕೆ ಪ್ರಯಾಣ ಮಾಡಿದನು. ಲೀಲಾಮಾನುಷನಾದ ಭಗವಾನ್ ಶ್ರೀಕೃಷ್ಣನ ಕೃಪೆಯಿಂದ ಯಮುನೆಯ ನೀರು ಕೇವಲ ವಿಷಹೀನವಾದುದಲ್ಲ, ಆಗಿನಿಂದಲೇ ಅಮೃತದಂತೆ ಮಧುರವೂ ಪವಿತ್ರವೂ ಆಯಿತು. ॥ ೬೫-೬೭ ॥

*ಹದಿನಾರನೆಯ ಅಧ್ಯಾಯವು ಮುಗಿಯಿತು. ॥ ೧೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಕಾಲಿಯಮೋಕ್ಷಣಂ ನಾಮ ಷೋಡಶೋಽಧ್ಯಾಯಃ ॥ ೧೬ ॥

# ಹದಿನೇಳನೆಯ ಅಧ್ಯಾಯ

## ಕಾಲಿಯನು ಯಮುನೆಯ ಮಡುವಿಗೆ ಬರಲು ಕಾರಣ, ದಾವಾನಲದಿಂದ ವ್ರಜವಾಸಿಗಳನ್ನು ಬದುಕಿಸಿದುದು

*ರಾಜೋವಾಚ*

**ನಾಗಾಲಯಂ ರಮಣಕಂ ಕಸ್ಮಾತ್ತತ್ಯಾಜ ಕಾಲಿಯಃ ।**
**ಕೃತಂ ಕಿಂ ವಾ ಸುಪರ್ಣಸ್ಯ ತೇನೈಕೇನಾಸಮಂಜಸಮ್ ॥ ೧ ॥**

**ಪರೀಕ್ಷಿದ್ರಾಜನು ಕೇಳಿದನು** - ಪೂಜ್ಯರೇ! ಕಾಲಿಯ ನಾಗನು ನಾಗಗಳ ನಿವಾಸ ಸ್ಥಾನವಾದ ರಮಣಕ ದ್ವೀಪವನ್ನು ಏಕೆ ಬಿಟ್ಟು ಬಂದನು? ಅವನೊಬ್ಬನೇ ಗರುಡನ ಕುರಿತು ಯಾವ ಅಪರಾಧವನ್ನೆಸಗಿದ್ದನು? ॥ ೧ ॥

*ಶ್ರೀಶುಕ ಉವಾಚ*

**ಉಪಹಾರ್ಯೈಃ ಸರ್ಪಜನೈರ್ಮಾಸಿ ಮಾಸೀಹ ಯೋ ಬಲಿಃ ।**
**ವಾನಸ್ಪತ್ಯೋ ಮಹಾಬಾಹೋ ನಾಗಾನಾಂ ಪ್ರಾಙ್ನಿರೂಪಿತಃ ॥ ೨ ॥**

**ಸ್ವಂ ಸ್ವಂ ಭಾಗಂ ಪ್ರಯಚ್ಛಂತಿ ನಾಗಾಃ ಪರ್ವಣಿ ಪರ್ವಣಿ ।**
**ಗೋಪೀಥಾಯಾತ್ಮನಃ ಸರ್ವೇ ಸುಪರ್ಣಾಯ ಮಹಾತ್ಮನೇ ॥ ೩ ॥**

**ಶ್ರೀಶುಕಮಹಾಮುನಿಗಳು ಹೇಳಿದರು** - ಪರೀಕ್ಷಿತನೇ! ಹಿಂದಿನ ಕಾಲದಲ್ಲಿ ಗರುಡನೂ ಸರ್ಪಗಳೂ ಸೇರಿ ಗರುಡನ ಸರ್ಪಾಹಾರದ ವಿಷಯದಲ್ಲಿ ಒಂದು ಒಪ್ಪಂದವನ್ನು ಮಾಡಿಕೊಂಡಿದ್ದವು. ಆ ಒಪ್ಪಂದದಂತೆ ಪ್ರತಿ ತಿಂಗಳು ನಿರ್ದಿಷ್ಟವಾದ ಒಂದು ವೃಕ್ಷದಡಿಯಲ್ಲಿ ಗರುಡನ ಆಹಾರಕ್ಕಾಗಿ ಹಾವನ್ನು ಒಪ್ಪಿಸಬೇಕಾಗಿತ್ತು. ॥ ೨ ॥ ಈ ನಿಯಮಕ್ಕನುಸಾರವಾಗಿ ಪ್ರತಿ ಅಮಾವಾಸ್ಯೆ ದಿನ ಸಕಲ ಸರ್ಪಗಳು ತಮ್ಮ ರಕ್ಷಣೆಗಾಗಿ ಮಹಾತ್ಮ ಗರುಡನಿಗೆ ತಮ್ಮ-ತಮ್ಮ ಭಾಗವನ್ನು ಕೊಡುತ್ತಾ ಇದ್ದರು. * ॥ ೩ ॥

* ಇದಕ್ಕೆ ಸಂಬಂಧಪಟ್ಟ ಒಂದು ಕಥೆ ಹೀಗಿದೆ - ಗರುಡನ ತಾಯಿ ವಿನತಾ ಮತ್ತು ಸರ್ಪಗಳ ತಾಯಿ ಕದ್ರುವಿಗೆ ಪರಸ್ಪರ ವೈರವಿತ್ತು. ತಾಯಿಯ ವೈರವನ್ನು ನೆನೆದುಕೊಂಡು ಗರುಡನು ಸಿಕ್ಕಿದ ಸರ್ಪಗಳನ್ನು ತಿನ್ನುತ್ತಾ ಹೋದನು. ಇದರಿಂದ ದುಃಖಿತರಾಗಿ ಎಲ್ಲ ಸರ್ಪಗಳು ಬ್ರಹ್ಮದೇವರಿಗೆ ಶರಣಾದವು. ಆಗ ಬ್ರಹ್ಮದೇವರು - ಪ್ರತಿಯೊಂದು ಅಮಾವಾಸ್ಯೆಗೆ ಪ್ರತಿಯೊಂದು ಸರ್ಪಪರಿವಾರದವರು ಗರುಡನಿಗೆ ಒಂದು ಸರ್ಪವನ್ನು ಬಲಿಕೊಡುತ್ತಾ ಬರಬೇಕೆಂಬ ನಿಯಮವನ್ನು ಮಾಡಿದರು.

ವಿಷವೀರ್ಯಮದಾವಿಷ್ಟಃ ಕಾದ್ರವೇಯಸ್ತು ಕಾಲಿಯಃ ।
ಕದರ್ಥೀಕೃತ್ಯ ಗರುಡಂ ಸ್ವಯಂ ತಂ ಬುಭುಜೇ ಬಲಿಮ್ ॥ ೪ ॥

ತಚ್ಛ್ರುತ್ವಾ ಕುಪಿತೋ ರಾಜನ್ಭಗವಾನ್ಭಗವತ್ಪ್ರಿಯಃ ।
ವಿಜಿಘಾಂಸುರ್ಮಹಾವೇಗಃ ಕಾಲಿಯಂ ಸಮುಪಾದ್ರವತ್ ॥ ೫ ॥

ತಮಾಪತಂತಂ ತರಸಾ ವಿಷಾಯುಧಃ
ಪ್ರತ್ಯಭ್ಯಯಾದುಚ್ಛ್ರಿತನೈಕಮಸ್ತಕಃ ।
ದದ್ಭಿಃ ಸುಪರ್ಣಂ ವ್ಯದಶದ್ದದಾಯುಧಃ
ಕರಾಲಜಿಹ್ವೋಚ್ಛ್ವಸಿತೋಗ್ರಲೋಚನಃ ॥ ೬ ॥

ತಂ ತಾರ್ಕ್ಷ್ಯಪುತ್ರಃ ಸ ನಿರಸ್ಯ ಮನ್ಯುಮಾನ್
ಪ್ರಚಂಡವೇಗೋ ಮಧುಸೂದನಾಸನಃ ।
ಪಕ್ಷೇಣ ಸವ್ಯೇನ ಹಿರಣ್ಯರೋಚಿಷಾ
ಜಘಾನ ಕದ್ರೂಸುತಮುಗ್ರವಿಕ್ರಮಃ ॥ ೭ ॥

ಸುಪರ್ಣಪಕ್ಷಾಭಿಹತಃ ಕಾಲಿಯೋಽತೀವ ವಿಹ್ವಲಃ ।
ಹ್ರದಂ ವಿವೇಶ ಕಾಲಿಂದ್ಯಾಸ್ತದಗಮ್ಯಂ ದುರಾಸದಮ್ ॥ ೮ ॥

ತತ್ರೈಕದಾ ಜಲಚರಂ ಗರುಡೋ ಭಕ್ಷ್ಯಮೀಪ್ಸಿತಮ್ ।
ನಿವಾರಿತಃ ಸೌಭರಿಣಾ ಪ್ರಸಹ್ಯ ಕ್ಷುಧಿತೋಽಹರತ್ ॥ ೯ ॥

ಮೀನಾನ್ಸುದುಃಖಿತಾನ್ ದೃಷ್ಟ್ವಾ ದೀನಾನ್ಮೀನಪತೌ ಹತೇ ।
ಕೃಪಯಾ ಸೌಭರಿಃ ಪ್ರಾಹ ತತ್ರತ್ಯಕ್ಷೇಮಮಾಚರನ್ ॥ ೧೦ ॥

ಅತ್ರ ಪ್ರವಿಶ್ಯ ಗರುಡೋ ಯದಿ ಮತ್ಸ್ಯಾನ್ಸಖಾದತಿ ।
ಸದ್ಯಃ ಪ್ರಾಣೈರ್ವಿಯುಜ್ಯೇತ ಸತ್ಯಮೇತದ್ಬ್ರವೀಮ್ಯಹಮ್ ॥ ೧೧ ॥

ತಂ ಕಾಲಿಯಃ ಪರಂ ವೇದ ನಾನ್ಯಃ ಕಶ್ಚನ ಲೇಲಿಹಃ ।
ಅವಾತ್ಸೀದ್ಗರುಡಾದ್ಭೀತಃ ಕೃಷ್ಣೇನ ಚ ವಿವಾಸಿತಃ ॥ ೧೨ ॥

ಆ ಸರ್ಪಗಳಲ್ಲಿ ಕದ್ರುವಿನ ಪುತ್ರನಾದ ಕಾಲಿಯನಾಗನು ತನ್ನ ವಿಷಬಲದ ಗರ್ವದಿಂದ ಉನ್ಮತ್ತನಾಗಿದ್ದನು. ಅವನು ಗರುಡನನ್ನು ತಿರಸ್ಕರಿಸಿ ಸ್ವತಃ ಬಲಿಕೊಡುವುದಿರಲಿ, ಬೇರೆ ಸರ್ಪಗಳು ಗರುಡನಿಗಾಗಿ ಕೊಟ್ಟ ಬಲಿಯನ್ನು ತಿಂದುಬಿಡುತ್ತಿದ್ದನು. ॥ ೪ ॥ ಪರೀಕ್ಷಿತನೇ! ಇದನ್ನು ತಿಳಿದ ಭಗವಂತನ ಪ್ರಿಯ ಪಾರ್ಷದನಾದ ಶಕ್ತಿಶಾಲಿ ಗರುಡನಿಗೆ ಭಾರೀ ಸಿಟ್ಟು ಬಂತು. ಆದಕ್ಕಾಗಿ ಅವನು ಕಾಲಿಯನಾಗವನ್ನು ಕೊಂದು ಹಾಕುವ ವಿಚಾರದಿಂದ ಅತಿವೇಗದಿಂದ ಅವನ ಮೇಲೆ ಆಕ್ರಮಣ ಮಾಡಿದನು. ॥ ೫ ॥ ವಿಷಧರನಾದ ಕಾಲಿಯನು-ಗರುಡನು ತನ್ನ ಮೇಲೆ ಆಕ್ರಮಿಸುತ್ತಿರುವುದನ್ನು ನೋಡಿದಾಗ ಅವನು ತನ್ನ ನೂರೊಂದು ಹೆಡೆಗಳಿಂದ ಕಚ್ಚಲು ಅವನ ಮೇಲೆ ಎರಗಿದನು. ವಿಷವಿರುವ ಹಲ್ಲುಗಳೇ ಕಾಲಿಯನ ಶಸ್ತ್ರವಾಗಿತ್ತು. ಆದಕ್ಕಾಗಿ ಆ ಹಲ್ಲುಗಳಿಂದಲೇ ಗರುಡನನ್ನು ಕಚ್ಚತೊಡಗಿದನು. ಆಗ ಅವನು ತನ್ನ ಭಯಂಕರವಾದ ನಾಲಿಗೆಗಳಿಂದ ಕಟವಾಯಿಯನ್ನು ನೆಕ್ಕಿಕೊಳ್ಳುತ್ತಿದ್ದನು. ದೀರ್ಘವಾಗಿ ನಿಟ್ಟುಸುರುಬಿಡುತ್ತಾ ಭಯಂಕರವಾದ ಕಣ್ಣುಗಳಿಂದ ಗರುಡನನ್ನೇ ದುರುಗುಟ್ಟಿಕೊಂಡು ನೋಡುತ್ತಿದ್ದನು. ॥ ೬ ॥ ತಾರ್ಕ್ಷ್ಯನಂದನ ಗರುಡನು ಭಗವಾನ್ ವಿಷ್ಣುವಿನ ವಾಹನನಾಗಿದ್ದು ಅವನ ವೇಗ ಪರಾಕ್ರಮಗಳು ಅತುಲನೀಯವಾಗಿತ್ತು. ಕಾಲಿಯನಾಗನ ಈ ಉದ್ಧಟತನವನ್ನು ಕಂಡು ಅತ್ಯಂತ ಕುಪಿತನಾಗಿ ಸುವರ್ಣಮಯವಾದ ತನ್ನ ಎಡರೆಕ್ಕೆಯಿಂದ ಜೋರಾಗಿ ನಾಗನನ್ನು ಅಪ್ಪಳಿದನು. ॥ ೭ ॥ ಅವನ ಪಕ್ಷಾಘಾತದಿಂದ ಕಾಳಿಯ ನಾಗನು ಗಾಯಗೊಂಡನು. ಅವನು ಗಾಬರಿಗೊಂಡು ಅಲ್ಲಿಂದ ಓಡಿಹೋಗಿ ಯಮುನೆಯ ಮಡುವಿಗೆ ಬಂದು ನೆಲೆಸಿದನು. ಯಮುನೆಯ ಈ ಕುಂಡವು ಗರುಡನಿಗೆ ಅಗಮ್ಯವಾಗಿತ್ತು. ಮೇಲಾಗಿ ಆ ಕುಂಡವು ಬೇರೆಯವರು ಪ್ರವೇಶಿಸಲಾಗದಷ್ಟು ಆಳವಾಗಿತ್ತು. ॥ ೮ ॥

ಪರೀಕ್ಷಿತನೇ! ಇದೇ ಸ್ಥಳದಲ್ಲಿ ಒಂದು ದಿನ ಹಸಿದಿರುವ ಗರುಡನು ತಪಸ್ವೀ ಸೌಭರಿಋಷಿಗಳು ತಡೆದರೂ ತನಗೆ ಪ್ರಿಯ ಭಕ್ಷ್ಯವಾದ ಮೀನುಗಳನ್ನು ಬಲವಂತವಾಗಿ ಸೆಳೆದು ಹಿಡಿದು ತಿಂದುಬಿಟ್ಟನು. ॥ ೯ ॥ ತಮಗೆ ಮುಖಂಡನಾಗಿದ್ದ ಮಹಾ ಮತ್ಸ್ಯವು ಹೀಗೆ ವಿನಾಶವಾಗಲು ಅಲ್ಲಿದ್ದ ಮೀನುಗಳಿಗೆ ಬಹಳ ದುಃಖವುಂಟಾಯಿತು. ಬಹಳ ದೈನ್ಯದಿಂದಿನ ದುಃಖಿಸುತ್ತಿದ್ದ ಆ ಮೀನುಗಳನ್ನು ನೋಡಿ ಪರಮದಯಾಳುವಾದ ಸೌಭರಿ ಮುನಿಯು ಅವುಗಳ ಒಳಿತಿಗಾಗಿ ಗರುಡನಿಗೆ ಶಾಪವಿತ್ತರು. ॥ ೧೦ ॥ ಮುಂದೆ ಗರುಡನೇನಾದರು ಈ ಮಡುವನ್ನು ಪ್ರವೇಶಿಸಿ ಮೀನುಗಳನ್ನು ತಿಂದನಾದರೆ ಅವನು ಒಡನೆಯೇ ಪ್ರಾಣಕಳೆದು ಕೊಳ್ಳುತ್ತಾನೆ. ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ. ॥ ೧೧ ॥ ಪರೀಕ್ಷಿತನೇ! ಮಹರ್ಷಿ ಸೌಭರಿಯ ಈ ಶಾಪ ವೃತ್ತಾಂತವು ಕಾಲಿಯನಾಗನಲ್ಲದೆ ಬೇರೆ ಯಾವ ಸರ್ಪಕ್ಕೂ ತಿಳಿದಿರಲಿಲ್ಲ. ಆದಕ್ಕಾಗಿ ಅವನು ಗರುಡನ ಭಯದಿಂದ ಅಲ್ಲಿ ನೆಲೆಸಿದ್ದನು. ಈಗ ಭಗವಾನ್ ಶ್ರೀಕೃಷ್ಣನು ಅವನನ್ನು ನಿರ್ಭಯನನ್ನಾಗಿಸಿ ಅಲ್ಲಿಂದ ರಮಣಕ ದ್ವೀಪಕ್ಕೆ ಕಳಿಸಿಬಿಟ್ಟನು. ॥ ೧೨ ॥

ಕೃಷ್ಣಂ ಹ್ರದಾದ್ವಿನಿಷ್ಕ್ರಾಂತಂ ದಿವ್ಯಸ್ರಗ್ಗಂಧವಾಸಸಮ್ ।
ಮಹಾಮಣಿಗಣಾಕೀರ್ಣಂ ಜಾಂಬೂನದಪರಿಷ್ಕೃತಮ್ ॥ ೧೩ ॥

ಉಪಲಭ್ಯೋತ್ಥಿತಾಃ ಸರ್ವೇ ಲಬ್ಧಪ್ರಾಣಾ ಇವಾಸವಃ ।
ಪ್ರಮೋದನಿಭೃತಾತ್ಮಾನೋ ಗೋಪಾಃ ಪ್ರೀತ್ಯಾಭಿರೇಭಿರೇ ॥ ೧೪ ॥

ಯಶೋದಾ ರೋಹಿಣೀ ನಂದೋ ಗೋಪ್ಯೋ ಗೋಪಾಶ್ಚ ಕೌರವ ।
ಕೃಷ್ಣಂ ಸಮೇತ್ಯ ಲಬ್ಧೇಹಾ ಆಸಲ್ಲಬ್ಧಮನೋರಥಾಃ ॥ ೧೫ ॥

ರಾಮಶ್ಚಾಚ್ಯುತಮಾಲಿಂಗ್ಯ ಜಹಾಸಾಸ್ಯಾನುಭಾವವಿತ್ ।
ನಗಾ ಗಾವೋ ವೃಷಾ ವತ್ಸಾ ಲೇಭಿರೇ ಪರಮಾಂ ಮುದಮ್ ॥ ೧೬ ॥

ನಂದಂ ವಿಪ್ರಾಃ ಸಮಾಗತ್ಯ ಗುರವಃ ಸಕಲತ್ರಕಾಃ ।
ಊಚುಸ್ತೇ ಕಾಲಿಯಗ್ರಸ್ತೋ ದಿಷ್ಟ್ಯಾ ಮುಕ್ತಸ್ತವಾತ್ಮಜಃ ॥ ೧೭ ॥

ದೇಹಿ ದಾನಂ ದ್ವಿಜಾತೀನಾಂ ಕೃಷ್ಣನಿರ್ಮುಕ್ತಿಹೇತವೇ ।
ನಂದಃ ಪ್ರೀತಮನಾ ರಾಜನ್ಗಾಃ ಸುವರ್ಣಂ ತದಾದಿಶತ್ ॥ ೧೮ ॥

ಯಶೋದಾಪಿ ಮಹಾಭಾಗಾ ನಷ್ಟಲಬ್ಧಪ್ರಜಾ ಸತೀ ।
ಪರಿಷ್ವಜ್ಯಾಂಕಮಾರೋಪ್ಯ ಮುಮೋಚಾಶ್ರುಕಲಾಂ ಮುಹುಃ ॥ ೧೯ ॥

ತಾಂ ರಾತ್ರಿಂ ತತ್ರ ರಾಜೇಂದ್ರ ಕ್ಷುತ್ತೃಡ್ಭ್ಯಾಂ ಶ್ರಮಕರ್ಶಿತಾಃ ।
ಊಷುರ್ವ್ರಜೌಕಸೋ ಗಾವಃ ಕಾಲಿಂದ್ಯಾ ಉಪಕೂಲತಃ ॥ ೨೦ ॥

ತದಾ ಶುಚಿವನೋದ್ಭೂತೋ ದಾವಾಗ್ನಿಃ ಸರ್ವತೋ ವ್ರಜಮ್ ।
ಸುಪ್ತಂ ನಿಶೀಥ ಆವೃತ್ಯ ಪ್ರದಗ್ಧುಮುಪಚಕ್ರಮೇ ॥ ೨೧ ॥

ತತ ಉತ್ಥಾಯ ಸಂಭ್ರಾಂತಾ ದಹ್ಯಮಾನಾ ವ್ರಜೌಕಸಃ ।
ಕೃಷ್ಣಂ ಯಯುಸ್ತೇ ಶರಣಂ ಮಾಯಾಮನುಜಮೀಶ್ವರಮ್ ॥ ೨೨ ॥

ಕೃಷ್ಣ ಕೃಷ್ಣ ಮಹಾಭಾಗ ಹೇ ರಾಮಾಮಿತವಿಕ್ರಮ ।
ಏಷ ಘೋರತಮೋ ವಹ್ನಿಸ್ತಾವಕಾನ್ ಗ್ರಸತೇ ಹಿ ನಃ ॥ ೨೩ ॥

ಪರೀಕ್ಷಿತನೇ! ಇತ್ತಲಾಗಿ ಶ್ರೀಕೃಷ್ಣನು ನಾಗಪತ್ನಿಯರಿಂದ ಕೊಡಲ್ಪಟ್ಟ ದಿವ್ಯವಾದ ಮಾಲೆ-ಗಂಧ-ವಸ್ತ್ರ ಬಹುಮೂಲ್ಯವಾದ ಮಣಿಗಳು - ಸುವರ್ಣಮಯ ಆಭರಣಗಳು - ಇವುಗಳಿಂದ ಅಲಂಕೃತನಾಗಿ ಆ ಮಡುವಿನಿಂದ ಹೊರಕ್ಕೆ ಬಂದನು. ॥ ೧೩ ॥ ಅವನನ್ನು ನೋಡಿದೊಡನೆಯೇ - ಪ್ರಾಣಗಳನ್ನು ಪಡೆದ ಇಂದ್ರಿಯಗಳು ಚೇತನವಾಗುವಂತೆ ಎಲ್ಲ ವ್ರಜವಾಸಿಗಳು ಎದ್ದು ನಿಂತರು. ಸಮಸ್ತ ಗೋಪರ ಹೃದಯ ಆನಂದದಿಂದ ತುಂಬಿಹೋಯಿತು. ಅವರು ಅತ್ಯಂತ ಪ್ರೇಮ ಮತ್ತು ಆನಂದದಿಂದ ಬಾಲಕೃಷ್ಣನನ್ನು ಬಾಚಿ ತಬ್ಬಿಕೊಂಡರು. ॥ ೧೪ ॥ ಪರೀಕ್ಷಿತನೇ! ಯಶೋದೆ, ರೋಹಿಣಿ, ನಂದಗೋಪ, ಗೋಪ-ಗೋಪಿಯರು ಎಲ್ಲರೂ ಶ್ರೀಕೃಷ್ಣನನ್ನು ಪಡೆದುಕೊಂಡು ನವಚೈತನ್ಯವನ್ನು ಹೊಂದಿದರು. ಅವರ ಮನೋರಥ ಸಫಲವಾಯಿತು. ॥ ೧೫ ॥ ಬಲರಾಮನಿಗಾದರೋ ಭಗವಂತನ ಪ್ರಭಾವವು ತಿಳಿದೇ ಇತ್ತು. ಅವನು ಶ್ರೀಕೃಷ್ಣನನ್ನು ಗಾಢವಾಗಿ ಆಲಿಂಗಿಸಿಕೊಂಡು ನಗತೊಡಗಿದನು. ಶ್ರೀಕೃಷ್ಣನ ಪುನರಾಗಮನದಿಂದ ಪರ್ವತ, ವೃಕ್ಷಗಳು, ಹಸುಗಳು, ಎತ್ತುಗಳು, ಕರುಗಳು ಆನಂದಿಸಿದವು. ॥ ೧೬ ॥ ಗೋಪರ ಕುಲಗುರು ಬ್ರಾಹ್ಮಣರು ತಮ್ಮ ಪತ್ನಿಯರೊಂದಿಗೆ ನಂದಗೋಪನ ಬಳಿಗೆ ಬಂದು - ನಂದಮಹಾರಾಜ! ನಿನ್ನ ಬಾಲಕನನ್ನು ಕಾಳಿಯ ನಾಗನು ಹಿಡಿದಿದ್ದನು. ಅವನು ಸೌಭಾಗ್ಯ ವಶದಿಂದ ಬಿಡುಗಡೆ ಹೊಂದಿ ಬಂದನು. ॥ ೧೭ ॥ ಶ್ರೀಕೃಷ್ಣನು ಮೃತ್ಯುಮುಖದಿಂದ ಬದುಕಿ ಬಂದ ಕಾರಣ ನೀನು ಬ್ರಾಹ್ಮಣರಿಗೆ ಯಥೇಚ್ಛವಾಗಿ ದಾನ ಮಾಡು. ಪರೀಕ್ಷಿತನೇ! ಬ್ರಾಹ್ಮಣರ ಮಾತನ್ನು ಕೇಳಿ ನಂದಗೋಪನಿಗೆ ಪರಮಾನಂದವಾಯಿತು. ಅವನು ಬಹಳಷ್ಟು ಚಿನ್ನ, ಹಸುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿದನು. ॥ ೧೮ ॥ ಪರಮ ಸೌಭಾಗ್ಯವತಿಯಾದ ಯಶೋದಾದೇವಿಯು ಕಾಲನ ದವಡೆಯಿಂದ ಬದುಕಿಬಂದ ತನ್ನ ಮುದ್ದುಕಂದನಾದ ಕೃಷ್ಣನನ್ನು ತೊಡೆಯಲ್ಲಿಟ್ಟಿಕೊಂಡು, ಬಾಚಿ ತಬ್ಬಿಕೊಂಡಳು. ಆಕೆಯ ಕಣ್ಣುಗಳಿಂದ ಸುರಿದ ಆನಂದಾಶ್ರುಗಳು ಕೃಷ್ಣನನ್ನು ತೋಯಿಸಿದವು. ॥ ೧೯ ॥

ರಾಜೇಂದ್ರನೇ! ವ್ರಜವಾಸಿಗಳು ಮತ್ತು ಗೋವುಗಳು ಬಹಳ ಆಯಾಸಗೊಂಡಿದ್ದರು. ಮೇಲಾಗಿ ಹಸಿವು-ಬಾಯಾರಿಕೆಯಿಂದ ಬಳಲಿದ್ದರು. ಆದುದರಿಂದ ಅಂದಿನ ರಾತ್ರಿಯಲ್ಲಿ ಅವರು ವ್ರಜಕ್ಕೆ ಹೋಗದೆ, ಅಲ್ಲೇ ಯಮುನಾ ತೀರದಲ್ಲಿ ಮಲಗಿದ್ದರು. ॥ ೨೦ ॥ ಅದು ಬೇಸಿಗೆಯ ಕಾಲವಾಗಿತ್ತು. ಮರ-ಗಿಡಗಳೆಲ್ಲವೂ ಒಣಗಿ ಹೋಗಿದ್ದವು. ಅರ್ಧರಾತ್ರಿಯ ಸಮಯದಲ್ಲಿ ಅವಕ್ಕೆ ಬೆಂಕಿ ಹತ್ತಿಕೊಂಡಿತು. ಆ ಬೆಂಕಿಯು ಮಲಗಿರುವ ವ್ರಜವಾಸಿಗಳನ್ನು ಸುತ್ತುವರೆದು ಅವರನ್ನು ಸುಡತೊಡಗಿತು. ॥ ೨೧ ॥ ಬೆಂಕಿಯ ಶಾಖ ತಗಲುತ್ತಲೇ ವ್ರಜವಾಸಿಗಳು ಗಾಬರಿಯಿಂದ ಎದ್ದು ನಿಂತು ಲೀಲಾಮಾನುಷವಿಗ್ರಹನಾದ ಭಗವಾನ್ ಶ್ರೀಕೃಷ್ಣನಿಗೆ ಶರಣು ಹೋದರು. ॥ ೨೨ ॥ "ಕೃಷ್ಣ! ಮುಕುಂದ! ಮಹಾ ಭಾಗ್ಯಶಾಲಿಯೇ! ಅಮಿತ ವಿಕ್ರಮನಾದ ಬಲರಾಮನೇ! ನಿಮ್ಮಿಬ್ಬರ ಬಲಪರಾಕ್ರಮಗಳು ಅಮಿತವಾಗಿವೆ. ನೋಡಿ! ನೋಡಿ! ಈ ಭಯಂಕರ ಕಾಡ್ಗಿಚ್ಚು ನಿಮ್ಮ ಸ್ವಜನ ಸಂಬಂಧಿಗಳಾದ ನಮ್ಮನ್ನು ಸುಡಲು ಬಯಸುತ್ತಿದೆ. ॥ ೨೩ ॥

ಸುದುಸ್ತರಾನ್ನಃ ಸ್ವಾನ್ಪಾಹಿ ಕಾಲಾಗ್ನೇಃ ಸುಹೃದಃ ಪ್ರಭೋ ।
ನ ಶಕ್ನುಮಸ್ತ್ವಚ್ಚರಣಂ ಸಂತ್ಯಕ್ತುಮಕುತೋಭಯಮ್
॥ ೨೪ ॥

ನೀವು ಸರ್ವಸಮರ್ಥ ರಾಗಿರುವಿರಿ. ನಾವು ನಿಮ್ಮ ಸುಹೃದ ರಾಗಿದ್ದೇವೆ. ಆದರಿಂದ ಈ ಪ್ರಳಯಾಗ್ನಿಯಿಂದ ರಕ್ಷಿಸಿರಿ. ಪ್ರಭೋ! ನಾವು ಮೃತ್ಯುವಿಗೆ ಹೆದರುವುದಿಲ್ಲ, ಆದರೆ ಅಪಾಯ ರಹಿತವಾದ ನಿನ್ನ ದಿವ್ಯ ಚರಣಕಮಲಗಳನ್ನು ಬಿಟ್ಟು ಹೋಗಲು ನಾವು ಸಮರ್ಥರಾಗಿಲ್ಲ.'' ॥ ೨೪ ॥ ಭಗವಂತನು ಅನಂತನಾಗಿ ದ್ದಾನೆ. ಅವನು ಅನಂತ ಶಕ್ತಿಗಳನ್ನು ಧರಿಸಿರುವವನು. ಆ ಜಗದೀಶ್ವರ ಭಗವಾನ್ ಶ್ರೀಕೃಷ್ಣನು ತನ್ನ ಸ್ವಜನರು ಹೀಗೆ ದುಃಖಿತರಾಗಿರು ವುದನ್ನು ನೋಡಿದಾಗ ಅವನು ಆ ಭಯಂಕರ ಕಾಡುಗಿಚ್ಚನ್ನು ಕುಡಿದುಬಿಟ್ಟನು. ॥ ೨೫ ॥

ಇತ್ಥಂ ಸ್ವಜನವೈಕ್ಲವ್ಯಂ ನಿರೀಕ್ಷ್ಯ ಜಗದೀಶ್ವರಃ ।
ತಮಗ್ನಿಮಪಿಬತ್ತೀವ್ರಮನಂತೋಽನಂತ ಶಕ್ತಿಧೃಕ್
॥ ೨೫ ॥

*ಹದಿನೇಳನೆಯ ಅಧ್ಯಾಯವು ಮುಗಿಯಿತು. ॥ ೧೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ದಾವಾಗ್ನಿಮೋಚನಂ ನಾಮ ಸಪ್ತದಶೋಽಧ್ಯಾಯಃ ॥ ೧೭ ॥

# ಹದಿನೆಂಟನೆಯ ಅಧ್ಯಾಯ

## ಪ್ರಲಂಬಾಸುರ ಉದ್ಧಾರ

*ಶ್ರೀಶುಕ ಉವಾಚ*

ಅಥ ಕೃಷ್ಣಃ ಪರಿವೃತೋ ಜ್ಞಾತಿಭಿರ್ಮುದಿತಾತ್ಮಭಿಃ ।
ಅನುಗೀಯಮಾನೋ ನ್ಯವಿಶದ್ವ್ರಜಂ ಗೋಕುಲಮಂಡಿತಮ್
॥ ೧ ॥

ವ್ರಜೇ ವಿಕ್ರೀಡತೋರೇವಂ ಗೋಪಾಲಚ್ಛದ್ಮಮಾಯಯಾ ।
ಗ್ರೀಷ್ಮೋ ನಾಮರ್ತುರಭವನ್ನಾತಿಪ್ರೇಯಾನ್ ಶರೀರಿಣಾಮ್
॥ ೨ ॥

ಸ ಚ ವೃಂದಾವನಗುಣೈರ್ವಸಂತ ಇವ ಲಕ್ಷಿತಃ ।
ಯತ್ರಾಸ್ತೇ ಭಗವಾನ್ಸಾಕ್ಷಾದ್ರಾಮೇಣ ಸಹ ಕೇಶವಃ
॥ ೩ ॥

ಯತ್ರ ನಿರ್ಝರನಿರ್ಹ್ರಾದನಿವೃತ್ತಸ್ವನಝಿಲ್ಲಿಕಮ್ ।
ಶಶ್ವತ್ತಚ್ಛೀಕರರ್ಜೀಷದ್ರುಮಮಂಡಲಮಂಡಿತಮ್
॥ ೪ ॥

ಸರಿತ್ಸರಃ ಪ್ರಸ್ರವಣೋರ್ಮಿವಾಯುನಾ
ಕಹ್ಲಾರಕಂಜೋತ್ಪಲರೇಣುಹಾರಿಣಾ ।
ನ ವಿದ್ಯತೇ ಯತ್ರ ವನೌಕಸಾಂ ದವೋ
ನಿದಾಘಹ್ನ್ಯರ್ಕಭವೋಽತಿಶಾದ್ವಲೇ ॥ ೫ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಆನಂದತುಂದಿಲರಾದ ಜ್ಞಾತಿಬಾಂಧವರಿಂದ ಸುತ್ತುವರಿಯಲ್ಪಟ್ಟ ಶ್ರೀಕೃಷ್ಣನು ತನ್ನ ಅನುಯಾಯಿಗಳಿಂದ ಸ್ತುತಿಸಲ್ಪಡುತ್ತಾ ಗೋವುಗಳ ಸಮೂಹದಿಂದ ಸಮಲಂಕೃತವಾದ ಗೊಲ್ಲರಹಳ್ಳಿಯನ್ನು ಪ್ರವೇಶಿಸಿ ದನು. ॥ ೧ ॥ ಹೀಗೆ ತನ್ನ ಯೋಗಮಾಯೆಯಿಂದ ಗೋಪಾಲ ನಂತೆ ವೇಷವನ್ನು ತೊಟ್ಟು ರಾಮ-ಕೃಷ್ಣರು ವ್ರಜದಲ್ಲಿ ಕ್ರೀಡಿಸು ತ್ತಿದ್ದರು. ಆಗ ಗ್ರೀಷ್ಮ ಋತುವು ಬಂದಿತ್ತು. ಇದು ಶರೀರ ಧಾರಿಗಳಿಗೆ ಅಷ್ಟು ಪ್ರಿಯವಾಗಿರಲಿಲ್ಲ. ॥ ೨ ॥ ಆದರೆ ವೃಂದಾವನದ ಸ್ವಾಭಾವಿಕ ಗುಣಗಳಿಂದ ಅಲ್ಲಿ ವಸಂತ ಋತುವಿನದೇ ಲಕ್ಷಣ ಗಳಿದ್ದವು. ಭಗವಾನ್ ಶ್ಯಾಮಸುಂದರನೂ, ಬಲರಾಮನೂ ಅಲ್ಲಿ ವಾಸಿಸುತ್ತಿದ್ದುದೇ ಇದಕ್ಕೆ ಕಾರಣವಾಗಿತ್ತು. ॥ ೩ ॥ ಜೀರುಂಡೆಗಳ ಕರ್ಕಶ ಧ್ವನಿಯು ಅಲ್ಲಿ ಹರಿಯುತ್ತಿದ್ದ ನದಿಯ ಮಂಜುಳ ಧ್ವನಿಯಿಂದ ಅಡಗಿಹೋಗಿತ್ತು. ನದಿಗಳ ಪ್ರವಾಹದ ತುಂತುರು ಗಳಿಂದ ನೆನೆಸಲ್ಪಟ್ಟು ಹಸಿರಾದ ವೃಕ್ಷಗಳ ಗುಂಪಿನಿಂದ ವೃಂದಾ ವನವು ಸಮಲಂಕೃತವಾಗಿತ್ತು. ॥ ೪ ॥ ನೋಡಿದಲ್ಲೆಲ್ಲ ಹಚ್ಚ ಹಸಿ ರಾದ ಹುಲ್ಲಿನಿಂದಾಗಿ ಭೂಪ್ರದೇಶವೆಲ್ಲ ಹಸಿರು ಹಾಸಿಗೆ ಹಾಸಿದಂತಿತ್ತು. ಅಲ್ಲಿನ ತಂಗಾಳಿಯು ನದಿ, ಸರೋವರ, ಗಿರಿ ನದಿಗಳ ಅಲೆಗಳ ಮೂಲಕವಾಗಿ ಬೀಸುತ್ತಾ ಸೌಗಂಧಿಕ, ಕಮಲ, ಕನ್ನೈದಿಲೆಗಳ ಸುಗಂಧಮಯವಾದ ಧೂಳಿಯನ್ನು ಹೊತ್ತುತಂದು ವೃಂದಾವನವನ್ನೇ ಸುಗಂಧಮಯವಾಗಿಯೂ, ಶೀತಲವಾಗಿಯೂ ಮಾಡುತ್ತಿದ್ದಿತು. ಇಲ್ಲಿ ವಾಸಮಾಡುವವರಿಗೆ ಕಾಡ್ಗಿಚ್ಚಿನ ಬೇಗೆ ಯಾಗಲೀ, ಗ್ರೀಷ್ಮಸೂರ್ಯನ ತಾಪವಾಗಲೀ ಇರಲಿಲ್ಲ. ॥ ೫ ॥

ಅಗಾಧತೋಯಹ್ರದಿನೀತಟೋರ್ಮಿಭಿಃ
ದ್ರವತ್ಪುರೀಷ್ಯಾಃ ಪುಲಿನೈಃ ಸಮಂತತಃ ।
ನ ಯತ್ರ ಚಂಡಾಂಶುಕರಾ ವಿಷೋಲ್ಬಣಾ
ಭುವೋ ರಸಂ ಶಾದ್ವಲಿತಂ ಚ ಗೃಹ್ಣತೇ ॥ ೬ ॥

ವನಂ ಕುಸುಮಿತಂ ಶ್ರೀಮನ್ನದಚ್ಚಿತ್ರಮೃಗದ್ವಿಜಮ್ ।
ಗಾಯನ್ಮಯೂರಭ್ರಮರಂ ಕೂಜತ್ಕೋಕಿಲಸಾರಸಮ್
॥ ೭ ॥

ಕ್ರೀಡಿಷ್ಯಮಾಣಸ್ತತ್ಕೃಷ್ಣೋ ಭಗವಾನ್ಬಲಸಂಯುತಃ ।
ವೇಣುಂ ವಿರಣಯನ್ಗೋಪೈರ್ಗೋಧನೈಃ ಸಂವೃತೋಽವಿಶತ್
॥ ೮ ॥

ಪ್ರವಾಲಬರ್ಹಸ್ತಬಕಸ್ರಗ್ಧಾತುಕೃತಭೂಷಣಾಃ ।
ರಾಮಕೃಷ್ಣಾದಯೋ ಗೋಪಾ ನನೃತುರ್ಯುಯುಧುರ್ಜಗುಃ
॥ ೯ ॥

ಕೃಷ್ಣಸ್ಯ ನೃತ್ಯತಃ ಕೇಚಿಜ್ಜಗುಃ ಕೇಚಿದವಾದಯನ್ ।
ವೇಣುಪಾಣಿತಲೈಃ ಶೃಂಗೈಃ ಪ್ರಶಶಂಸುರಥಾಪರೇ
॥ ೧೦ ॥

ಗೋಪಜಾತಿಪ್ರತಿಚ್ಛನ್ನಾ ದೇವಾ ಗೋಪಾಲರೂಪಿಣಃ ।
ಈಡಿರೇ ಕೃಷ್ಣರಾಮೌ ಚ ನಟಾ ಇವ ನಟಂ ನೃಪ
॥ ೧೧ ॥

ನದಿಗಳಲ್ಲಿ ಆಳವಾದ ನೀರು ತುಂಬಿದ್ದು ಎತ್ತರವಾಗಿ ಎದ್ದು ಬರುತ್ತಿದ್ದ ಅಲೆಗಳು ದಡದಲ್ಲಿದ್ದ ಮರಳು ದಿಣ್ಣೆಗಳಿಗೆ ರಭಸದಿಂದ ಅಪ್ಪಳಿಸುತ್ತಿದ್ದು ಅವನ್ನು ಸ್ವಚ್ಛಗೊಳಿಸುತ್ತಿದ್ದವು. ಅದರಿಂದಾಗಿ ಸುತ್ತಲಿನ ಭೂಮಿಯು ಒದ್ದೆಯಾಗುತ್ತಿತ್ತು. ಸೂರ್ಯನ ಅತ್ಯಂತ ಉಗ್ರಕಿರಣಗಳೂ ಅವನ್ನು ಒಣಗಿಸಲಾಗದೆ ಹಚ್ಚ ಹಸುರಾಗಿಯೇ ಇರುತ್ತಿತ್ತು. ॥ ೬ ॥ ಆ ವೃಂದಾವನದಲ್ಲಿ ವೃಕ್ಷಗಳ ಸಾಲು-ಸಾಲುಗಳು ಹೂವುಗಳಿಂದ ಸೊಂಪಾಗಿ ಸಂಪತ್ ಭರಿತವಾಗಿತ್ತು. ನೋಡಿದಲ್ಲೆಲ್ಲ ಸೌಂದರ್ಯವೇ ಮೂರ್ತಿಭವಿಸಿ ದಂತಿತ್ತು. ಕೆಲವೆಡೆ ಬಣ್ಣ-ಬಣ್ಣದ ಹಕ್ಕಿಗಳು ಚಿಲಿಪಿಲಿಗುಟ್ಟುತ್ತಿದ್ದರೆ, ಕೆಲವೆಡೆ ಜಿಂಕೆಗಳು ನೆಗೆಯುತ್ತಾ ಓಡುತ್ತಿದ್ದವು. ಕೆಲವುಕಡೆ ನವಿಲುಗಳು ಜಾಗರವಾಡುತ್ತಿದ್ದರೆ, ದುಂಬಿಗಳು ಝೇಂಕರಿಸು ತ್ತಿದ್ದವು. ಕೆಲವೆಡೆ ಕೋಗಿಲೆ ಸಾರಸಪಕ್ಷಿಗಳು ಸುಮಧುರವಾಗಿ ಕೂಗುತ್ತಿದ್ದವು. ॥ ೭ ॥ ಅಂತಹ ಸುಂದರ ವನವನ್ನು ನೋಡಿ ಶ್ಯಾಮಸುಂದರ ಶ್ರೀಕೃಷ್ಣನು ಮತ್ತು ಗೌರಸುಂದರ ಬಲರಾಮನು ಆ ವನದಲ್ಲಿ ವಿಹರಿಸಲು ಮನಮಾಡಿದರು. ಮುಂದೆ-ಮುಂದೆ ಹಸುಗಳು ಹೋಗುತ್ತಿದ್ದವು, ಹಿಂದೆ-ಹಿಂದೆ ಗೋಪಬಾಲಕರು ಮತ್ತು ನಡುವೆ ಅಣ್ಣನೊಡನೆ ಮುರಲಿಯನ್ನು ನುಡಿಸುತ್ತಾ ಶ್ರೀಕೃಷ್ಣನು ಹೋಗುತ್ತಿದ್ದನು. ॥ ೮ ॥

ರಾಮ-ಶ್ಯಾಮರೂ ಮತ್ತು ಗೋಪಾಲ ಬಾಲಕರು ಹೊಚ್ಚ ಹೊಸದಾದ ಚಿಗುರುಗಳಿಂದಲೂ, ನವಿಲುಗರಿಗಳಿಂದಲೂ, ವಿಕಸಿತ ಸುಗಂಧ ಪುಷ್ಪಗಳಿಂದಲೂ, ಬಣ್ಣ-ಬಣ್ಣದ ಹರಿದಳ, ಮಣಿಶಿಲೆ, ಸಿಂಧೂರವೇ ಮೊದಲಾದ ಗೈರಿಕ ಧಾತುಗಳಿಂದಲೂ ತಮ್ಮ ಶರೀರಗಳನ್ನು ನಾನಾ ರೀತಿಯಿಂದ ಸಿಂಗರಿಸಿಕೊಂಡರು. ಅವರಲ್ಲಿ ಕೆಲವರು ಆನಂದ ಮಗ್ನರಾಗಿ ನರ್ತಿಸಲು ತೊಡಗಿದರು. ಕೆಲವರು ತೊಡೆಗಳನ್ನು ತಟ್ಟಿಕೊಂಡು ಕುಸ್ತಿಯಾಡತೊಡಗಿದರು. ಕೆಲವರು ಹಾಡಲು ಪ್ರಾರಂಭಿಸಿದರು. ॥ ೯ ॥ ಶ್ರೀಕೃಷ್ಣನು ನರ್ತಿಸು ವಾಗ ಕೆಲವು ಗೊಲ್ಲರು ಹಾಡುವರು, ಕೆಲವರು ಕೊಳಲನ್ನು ನುಡಿಸುವರು, ಕೆಲವರು ಕೈಗಳಿಂದ ಚಪ್ಪಾಳೆತಟ್ಟಿ ತಾಳ ಹಾಕು ತ್ತಿದ್ದರು. ಕೆಲವರು ಕೊಂಬುಗಳನ್ನೂದುವರು, ಉಳಿದವರು 'ಭಲೇ ಕೃಷ್ಣ!' ಎನ್ನುತ್ತಾ ನೃತ್ಯವನ್ನು ಪ್ರೋತ್ಸಾಹಿಸುವರು. ॥ ೧೦ ॥ ಪರೀಕ್ಷಿದ್ರಾಜನೇ! ಆ ಸಮಯದಲ್ಲಿ ನಟರು ತಮ್ಮ ನಾಯಕನನ್ನು ಪ್ರಶಂಸೆಮಾಡುವಂತೆ – ಗೋಪಾಲಕರ ವೇಷಗಳನ್ನು ಧರಿಸಿದ್ದ ದೇವತೆಗಳು ಗೊಲ್ಲರಜಾತಿಯಲ್ಲಿ ಜನ್ಮತಳೆದು ತಮ್ಮ ನಿಜ ಸ್ವರೂಪ ವನ್ನು ಮರೆಸಿಕೊಂಡಿದ್ದ ರಾಮ-ಶ್ಯಾಮರನ್ನು ಸ್ತೋತ್ರಮಾಡ ತೊಡಗಿದರು. ॥ ೧೧ ॥ ಕಾಕಪಕ್ಷಧರರಾದ* ರಾಮಕೃಷ್ಣರು ಒಮ್ಮೆ ಪರಸ್ಪರ ಕೈಗಳನ್ನು ಹಿಡಿದುಕೊಂಡು ಕುಂಬಾರನ ಚಕ್ರದಂತೆ ಗರಗರನೆ ಸುತ್ತುವರು. ಅಪ್ಪಾಲೆ ತಿಪ್ಪಾಲೆ ಆಟವನ್ನು ಆಡುವರು.

* ಕಾಕ ಪಕ್ಷ – ಬಾಲಕರ ಕಿವಿಗಳ ಪಕ್ಕದ ಕೆನ್ನೆಗಳ ಮೇಲಿರುವ ಕೂದಲು; ತಲೆಯ ಪಕ್ಕದ ಕೂದಲು, ಕಾಕಪಕ್ಷಧರರೆಂದರೆ ಚಿಕ್ಕ ವಯಸ್ಸಿನವರೂ ಎಂದರ್ಥವಿದೆ.

ಭ್ರಾಮಣೈರ್ಲಂಘನೈಃ ಕ್ಷೇಪೈರಾಸ್ಫೋಟನವಿಕರ್ಷಣೈಃ ।
ಚಿಕ್ರೀಡತುರ್ನಿಯುದ್ಧೇನ ಕಾಕಪಕ್ಷಧರೌ ಕ್ವಚಿತ್ ॥ ೧೨ ॥

ಕ್ವಚಿನ್ನೃತ್ಯತ್ಸು ಚಾನ್ಯೇಷು ಗಾಯಕೌ ವಾದಕೌ ಸ್ವಯಮ್ ।
ಶಶಂಸತುರ್ಮಹಾರಾಜ ಸಾಧು ಸಾಧ್ವಿತಿ ವಾದಿನೌ ॥ ೧೩ ॥

ಕ್ವಚಿದ್ಬಿಲ್ವೈಃ ಕ್ವಚಿತ್ಕುಂಭೈಃ ಕ್ವ ಚಾಮಲಕಮುಷ್ಟಿಭಿಃ ।
ಅಸ್ಪೃಶ್ಯನೇತ್ರಬಂಧಾದ್ಯೈಃ ಕ್ವಚಿನ್ಮೃಗಖಗೇಹಯಾ ॥ ೧೪ ॥

ಕ್ವಚಿಚ್ಚ ದರ್ದುರಪ್ಲಾವೈರ್ವಿವಿಧೈರುಪಹಾಸಕೈಃ ।
ಕದಾಚಿತ್ಸ್ಪಂದೋಲಿಕಯಾ ಕರ್ಹಿಚಿನ್ನೃಪಚೇಷ್ಟಯಾ ॥ ೧೫ ॥

ಏವಂ ತೌ ಲೋಕಸಿದ್ಧಾಭಿಃ ಕ್ರೀಡಾಭಿಶ್ಚೇರತುರ್ವನೇ ।
ನದ್ಯದ್ರಿದ್ರೋಣಿಕುಂಜೇಷು ಕಾನನೇಷು ಸರಸ್ಸು ಚ ॥ ೧೬ ॥

ಪಶೂಂಶ್ಚಾರಯತೋರ್ಗೋಪೈಸ್ತದ್ವನೇ ರಾಮಕೃಷ್ಣಯೋಃ ।
ಗೋಪರೂಪೀ ಪ್ರಲಂಬೋಽಗಾದಸುರಸ್ತಜ್ಜಿಹೀರ್ಷಯಾ ॥ ೧೭ ॥

ತಂ ವಿದ್ವಾನಪಿ ದಾಶಾರ್ಹೋ ಭಗವಾನ್ಸರ್ವದರ್ಶನಃ ।
ಅನ್ವಮೋದತ ತತ್ಸಖ್ಯಂ ವಧಂ ತಸ್ಯ ವಿಚಿಂತಯನ್ ॥ ೧೮ ॥

ತತ್ರೋಪಾಹೂಯ ಗೋಪಾಲಾನ್ಕೃಷ್ಣಃ ಪ್ರಾಹ ವಿಹಾರವಿತ್ ।
ಹೇ ಗೋಪಾ ವಿಹರಿಷ್ಯಾಮೋ ದ್ವಂದ್ವೀಭೂಯ ಯಥಾಯಥಮ್ ॥ ೧೯ ॥

ತತ್ರ ಚಕ್ರುಃ ಪರಿವೃಢೌ ಗೋಪಾ ರಾಮಜನಾರ್ದನೌ ।
ಕೃಷ್ಣಸಂಘಟ್ಟಿನಃ ಕೇಚಿದಾಸನ್ರಾಮಸ್ಯ ಚಾಪರೇ ॥ ೨೦ ॥

ಮತ್ತೊಮ್ಮೆ ಎತ್ತರಕ್ಕೂ ಮತ್ತು ದೂರಕ್ಕೂ ನೆಗೆಯುವರು. ಕೆಲವೊಮ್ಮೆ ವೃಕ್ಷಗಳಲ್ಲಿರುತ್ತಿದ್ದ ಹಣ್ಣುಗಳಿಗೆ ಕವಣೆ ಕಲ್ಲಿನಿಂದ ಹೊಡೆಯುವರು. ಪರಸ್ಪರ ಗುದ್ದಾಡುವರು. ಎರಡು ಗುಂಪಿನವರು ಹಗ್ಗವನ್ನು ಎಳೆದಾಡುತ್ತಾ ಹಗ್ಗಜಗ್ಗಾಟ ಆಟವಾಡುವರು. ಹೀಗೆ ಗೋಪಬಾಲಕರಿಂದ ಕೂಡಿದ ರಾಮ-ಶ್ಯಾಮರು ನಾನಾ ವಿಧವಾದ ಆಟಗಳನ್ನಾಡುತ್ತಿದ್ದರು. ॥ ೧೨ ॥ ಕೆಲವು ಸಮಯಗಳಲ್ಲಿ ಗೋಪಬಾಲಕರು ನೃತ್ಯವನ್ನಾಡುವಾಗ ರಾಮ-ಶ್ಯಾಮರು ಹಾಡುವರು, ಕೊಳಲನ್ನೂದುವರು, ಕೊಂಬು ಬಾರಿಸುವರು, ನಡು-ನಡುವೆ ಭಲೇ! ಭಲೇ! ಎಂದು ಪ್ರಶಂಸೆಯನ್ನು ಮಾಡುವರು. ॥ ೧೩. ॥ ಗೋಪಬಾಲಕರಿಂದ ಪರಿವೃತರಾದ ರಾಮ-ಕೃಷ್ಣರು ಕೆಲವು ವೇಳೆ ಬೇಲದಕಾಯಿಗಳಿಂದಲೂ, ಬಿಲ್ವದ ಕಾಯಿಗಳಿಂದಲೂ, ನೆಲ್ಲಿಕಾಯಿಗಳಿಂದಲೂ ಚೆಂಡಿನ ಆಟಗಳನ್ನಾಡುವರು. ಕೆಲವೊಮ್ಮೆ ಗೋಪಬಾಲಕರ ಕಣ್ಣುಗಳಿಗೆ ಬಟ್ಟೆಕಟ್ಟಿ ಕಣ್ಣುಮುಚ್ಚಾಲೆ ಆಟವನ್ನು ಆಡುವರು. ಕೆಲವು ವೇಳೆ ಮೃಗಗಳಂತೆಯೂ, ಪಕ್ಷಿಗಳಂತೆಯೂ ಕೂಗುವರು. ॥ ೧೪ ॥ ಕೆಲವು ಸಲ ಕಪ್ಪೆಗಳಂತೆ ಕುಪ್ಪಳಿಸುವರು. ಕೆಲವು ವೇಳೆ ವಿದೂಷಕರಂತೆ ಮುಖಮಾಡಿಕೊಂಡು ನಾನಾ ವಿಧವಾದ ಅಂಗಚೇಷ್ಟೆಗಳಿಂದ ಎಲ್ಲರನ್ನು ನಗಿಸುವರು. ಕೆಲವು ವೇಳೆ ಮರಗಳ ಕೊಂಬೆಗಳಲ್ಲಿ ಜೋಕಾಲಿಕಟ್ಟಿ ಉಯ್ಯಾಲೆಯಾಡುವರು. ಕೆಲವು ವೇಳೆ ಒಬ್ಬರು ಮತ್ತೊಬ್ಬರನ್ನು ಹೆಗಲಮೇಲೆ ಹೊತ್ತುಕೊಂಡು 'ಕೂಸುಮರಿ' ಆಟವಾಡುವರು. ಕೆಲವೊಮ್ಮೆ ರಾಜಾ-ಮಂತ್ರಿಗಳ ಆಟವಾಡುವರು. ॥ ೧೫ ॥ ಹೀಗೆ ರಾಮ-ಶ್ಯಾಮರು ನದಿಗಳ ತೀರದಲ್ಲಿಯೂ, ಪರ್ವತ ತಪ್ಪಲುಗಳಲ್ಲೂ, ಪೊದರುಗಳಲ್ಲಿಯೂ, ವನ-ಸರೋವರಗಳಲ್ಲಿಯೂ ಸಾಧಾರಣ ಹುಡುಗರು ಆಟವಾಡುವಂತೆ ಆಟವಾಡುತ್ತಾ ಆನಂದದಿಂದ ಸಂಚರಿಸಿದರು. ॥ ೧೬ ॥

ಒಂದು ದಿನ ಬಲರಾಮ-ಕೃಷ್ಣರು ಗೋಪಬಾಲಕರೊಂದಿಗೆ ಆ ವನದಲ್ಲಿ ಹಸುಗಳನ್ನು ಮೇಯಿಸುತ್ತಿದ್ದಾಗ ಪ್ರಲಂಬನೆಂಬ ರಾಕ್ಷಸನು ಗೊಲ್ಲನ ವೇಷವನ್ನು ಧರಿಸಿ ಅಲ್ಲಿಗೆ ಬಂದನು. ರಾಮ-ಶ್ಯಾಮರನ್ನು ಅಪಹರಿಸಿಕೊಂಡು ಹೋಗುವುದೇ ಅವನ ಉದ್ದೇಶವಾಗಿತ್ತು. ॥ ೧೭ ॥ ಸರ್ವಜ್ಞನಾದ ಭಗವಾನ್ ಶ್ರೀಕೃಷ್ಣನು ಅವನನ್ನು ನೋಡುತ್ತಲೆ ಅವನಾರೆಂದು ತಿಳಿದುಕೊಂಡನು. ಹೀಗಿದ್ದರೂ ಅವನ ಮೈತ್ರಿಯ ಪ್ರಸ್ತಾಪವನ್ನು ಸ್ವೀಕರಿಸಿದರೂ, ಇವನನ್ನು ಯಾವ ಯುಕ್ತಿಯಿಂದ ವಧಿಸುವುದೆಂದು ಮನಸ್ಸಿನಲ್ಲೆ ಯೋಚಿಸುತ್ತಿದ್ದನು. ॥ ೧೮ ॥ ಶ್ರೀಕೃಷ್ಣನು ಬಾಲಕರಲ್ಲಿ ಬಹು ದೊಡ್ಡ ಆಟಗಾರನೂ, ಆಟಗಳ ಆಚಾರ್ಯನೂ ಆಗಿದ್ದನು. ಅವನು ಎಲ್ಲ ಗೋಪಬಾಲಕರನ್ನು ಕರೆದು – 'ಮಿತ್ರರೇ! ಇಂದು ನಮ್ಮಲ್ಲಿ ಎರಡು ಗುಂಪುಗಳಾಗಿಸಿಕೊಂಡು ಯಥಾಯೋಗ್ಯವಾಗಿ ಆನಂದದಿಂದ ಆಟವಾಡೋಣ' ಎಂದು ಹೇಳಿದನು. ॥ ೧೯ ॥ ಎಲ್ಲ ಬಾಲಕರು ಇದಕ್ಕೆ ಒಪ್ಪಿ ಒಂದು ಪಂಗಡಕ್ಕೆ ಶ್ರೀಕೃಷ್ಣನನ್ನು, ಇನ್ನೊಂದು ಪಂಗಡಕ್ಕೆ ಬಲರಾಮನನ್ನು ನಾಯಕರನ್ನಾಗಿಸಿಕೊಂಡರು. ಕೆಲವರು ಕೃಷ್ಣನ ಪಂಗಡದಲ್ಲಿದ್ದರೆ ಮತ್ತೆ ಕೆಲವರು ಬಲರಾಮನ ಗುಂಪು ಸೇರಿದರು. ॥ ೨೦ ॥

ಆಚೇರುರ್ವಿವಿಧಾಃ ಕ್ರೀಡಾ ವಾಹ್ಯವಾಹಕಲಕ್ಷಣಾಃ ।
ಯತ್ರಾರೋಹಂತಿ ಜೇತಾರೋ ವಹಂತಿ ಚ ಪರಾಜಿತಾಃ ॥ ೨೦ ॥

ವಹಂತೋ ವಾಹ್ಯಮಾನಾಶ್ಚ ಚಾರಯಂತಶ್ಚ ಗೋಧನಮ್ ।
ಭಾಂಡೀರಕಂ ನಾಮ ವಟಂ ಜಗ್ಮುಃ ಕೃಷ್ಣಪುರೋಗಮಾಃ ॥ ೨೧ ॥

ರಾಮಸಂಘಟ್ಟಿನೋ ಯರ್ಹಿ ಶ್ರೀದಾಮವೃಷಭಾದಯಃ ।
ಕ್ರೀಡಾಯಾಂ ಜಯಿನಸ್ತಾಂಸ್ತಾನೂಹುಃ ಕೃಷ್ಣಾದಯೋ ನೃಪ ॥ ೨೨ ॥

ಉವಾಹ ಕೃಷ್ಣೋ ಭಗವಾನ್ ಶ್ರೀದಾಮಾನಂ ಪರಾಜಿತಃ ।
ವೃಷಭಂ ಭದ್ರಸೇನಸ್ತು ಪ್ರಲಂಬೋ ರೋಹಿಣೀಸುತಮ್ ॥ ೨೩ ॥

ಅವಿಷಹ್ಯಂ ಮನ್ಯಮಾನಃ ಕೃಷ್ಣಂ ದಾನವಪುಂಗವಃ ।
ವಹನ್ ದ್ರುತತರಂ ಪ್ರಾಗಾದವರೋಹಣತಃ ಪರಮ್ ॥ ೨೪ ॥

ತಮುದ್ವಹನ್ ಧರಣಿಧರೇಂದ್ರಗೌರವಂ
ಮಹಾಸುರೋ ವಿಗತರಯೋ ನಿಜಂ ವಪುಃ ।
ಸ ಆಸ್ಥಿತಃ ಪುರಟಪರಿಚ್ಛದೋ ಬಭೌ
ತಡಿದ್ದ್ಯುಮಾನುಡುಪತಿವಾಡಿವಾಂಬುದಃ ॥ ೨೫ ॥

ನಿರೀಕ್ಷ್ಯ ತದ್ವಪುರಲಮಂಬರೇ ಚರತ್
ಪ್ರದೀಪ್ತದೃಗ್ಭ್ರುಕುಟಿತಟೋಗ್ರದಂಷ್ಟ್ರಕಮ್ ।
ಜ್ವಲಚ್ಛಿಖಂ ಕಟಕಕಿರೀಟಕುಂಡಲ-
ತ್ವಿಷಾದ್ಭುತಂ ಹಲಧರ ಈಷದತ್ರಸತ್ ॥ ೨೬ ॥

ಅಥಾಗತಸ್ಮೃತಿರಭಯೋ ರಿಪುಂ ಬಲೋ
ವಿಹಾಯಸಾರ್ಥಮಿವ ಹರಂತಮಾತ್ಮನಃ ।
ರುಷಾಹನಚ್ಛಿರಸಿ ದೃಢೇನ ಮುಷ್ಟಿನಾ
ಸುರಾಧಿಪೋ ಗಿರಿಮಿವ ವಜ್ರರಂಹಸಾ ॥ ೨೭ ॥

ಸ ಆಹತಃ ಸಪದಿ ವಿಶೀರ್ಣಮಸ್ತಕೋ
ಮುಖಾದ್ವಮನ್ರುಧಿರಮಪಸ್ಮೃತೋಽಸುರಃ ।
ಮಹಾರವಂ ವ್ಯಸುರಪತತ್ಸಮೀರಯನ್
ಗಿರಿರ್ಯಥಾ ಮಘವತ ಆಯುಧಾಹತಃ ॥ ೨೮ ॥

ಒಂದು ಗುಂಪಿನವರು ಸೋತರೆ ಗೆದ್ದವರ ಗುಂಪಿನ ಬಾಲಕರನ್ನು ಹೊತ್ತುಕೊಂಡು ನಿರ್ದಿಷ್ಟ ಸ್ಥಾನಕ್ಕೆ ಕೊಂಡು ಹೋಗಬೇಕೆಂಬ ನಿಯಮದಿಂದ ನಾನಾ ವಿಧವಾಗಿ ಆಟವಾಡತೊಡಗಿದರು.॥೨೦॥ ಹೀಗೆ ಒಬ್ಬರು ಮತ್ತೊಬ್ಬರನ್ನು ಹೊತ್ತುಕೊಂಡು ಕೃಷ್ಣನೇ ಮೊದಲಾದ ಗೋಪಬಾಲಕರು ಹಸುಗಳನ್ನು ಮೇಯಿಸುತ್ತಾ ಭಾಂಡೀರವೆಂಬ ವಟವೃಕ್ಷದ ಬಳಿಗೆ ತಲುಪಿದರು. ॥ ೨೧ ॥

ಪರೀಕ್ಷಿತನೇ! ಒಮ್ಮೆ ಬಲರಾಮನ ಗುಂಪಿನಲ್ಲಿದ್ದ ಶ್ರೀದಾಮಾ, ವೃಷಭ ಮುಂತಾದ ಗೋಪಬಾಲಕರು ಆಟದಲ್ಲಿ ಗೆದ್ದರು. ಆಗ ಶ್ರೀಕೃಷ್ಣನ ಗುಂಪಿನವರು ಗೆದ್ದವರನ್ನು ತನ್ನ ಬೆನ್ನ ಮೇಲೆ ಕುಳ್ಳಿರಿಸಿಕೊಂಡು ಹೋಗುತ್ತಿದ್ದರು. ॥ ೨೨ ॥ ಸೋತ ಶ್ರೀಕೃಷ್ಣನು ಶ್ರೀದಾಮನನ್ನು ಹೊತ್ತುಕೊಂಡನು. ಭದ್ರಸೇನನು ವೃಷಭನನ್ನು ಮತ್ತು ಪ್ರಲಂಬನು ಬಲರಾಮನನ್ನು ಹೊತ್ತುಕೊಂಡರು. ॥ ೨೩ ॥ ದಾನವಪುಂಗವನಾದ ಪ್ರಲಂಬನು ಶ್ರೀಕೃಷ್ಣನಾದರೋ ಮಹಾ ಬಲಿಷ್ಠನಾಗಿ ಇರುವನು, ಅವನನ್ನು ಸೋಲಿಸಲಾರೆ ಎಂದು ತಿಳಿದು ಅವನು ಶ್ರೀಕೃಷ್ಣನ ಪಕ್ಷವನ್ನು ಸೇರಿದನು. ಬಲರಾಮನನ್ನು ಹೊತ್ತುಕೊಂಡು ಬಹಳ ವೇಗವಾಗಿ ಓಡುತ್ತಾ ಬೆನ್ನಿಂದ ಇಳಿಸಬೇಕಾದ ಸ್ಥಳವನ್ನು ಬಿಟ್ಟು ಮುಂದಕ್ಕೆ ಓಡಿ ಹೋದನು. ॥ ೨೪ ॥ ಆದರೆ ಬಲರಾಮನನ್ನು ಎತ್ತಿಕೊಂಡು ಬಹಳ ದೂರ ಹೋಗಲು ರಾಕ್ಷಸನಿಂದ ಸಾಧ್ಯವಾಗಲಿಲ್ಲ, ಬಲರಾಮನು ದೊಡ್ಡ ಪರ್ವತದಷ್ಟು ಭಾರವಾದನು. ಅದರಿಂದ ಮುಂದೆ ಹೋಗಲಾರದೆ ಅಲ್ಲೆ ನಿಂತುಬಿಟ್ಟನು. ಆಗ ಅವನು ತನ್ನ ಸ್ವಾಭಾವಿಕವಾದ ದೈತ್ಯರೂಪದಿಂದ ಪ್ರಕಟವಾದನು. ಅವನ ಕಪ್ಪಾದ ಶರೀರದಲ್ಲಿ ಸುವರ್ಣಾಭರಣಗಳು ಹೊಳೆಯುತ್ತಿದ್ದುವು. ಗೌರಾಂಗನಾದ ಬಲರಾಮನನ್ನು ಹೊತ್ತುಕೊಂಡಿದ್ದ ಅವನು ಮಿಂಚಿನಿಂದ ಕೂಡಿದ ಕಾರ್ಮುಗಿಲು ಚಂದ್ರನನ್ನು ಒಳಗೊಂಡಿರುವಂತೆ ಶೋಭಿಸಿದನು. ॥ ೨೫ ॥ ಅವನ ಕಣ್ಣುಗಳು ಬೆಂಕಿಯಂತೆ ಉರಿಯುತ್ತಿದ್ದುವು. ಕೋರೆದಾಡೆಗಳು ಹುಬ್ಬಿನವರೆಗೆ ಚಾಚಿಕೊಂಡು ಭಯಂಕರವಾಗಿದ್ದುವು. ಅವನ ಕೆಂಪಾದ ಕೆದರಿದ ಕೂದಲೂ ಬೆಂಕಿಯ ಜ್ವಾಲೆಯಂತೆ ಹರಡಿಕೊಂಡಿತ್ತು. ಕೈ-ಕಾಲುಗಳಲ್ಲಿ ಕಡಗಗಳೂ, ತಲೆಯಮೇಲೆ ಕಿರೀಟವಿದ್ದು, ಕಿವಿಯಲ್ಲಿ ಕರ್ಣಕುಂಡಲಗಳು ಹೊಳೆಯುತ್ತಿದ್ದವು. ಅವುಗಳ ಕಾಂತಿಯಿಂದ ಅವನು ಭಾರೀ ಅದ್ಭುತವಾಗಿ ಕಾಣುತ್ತಿದ್ದನು. ಆ ಭಯಾನಕ ದೈತ್ಯನು ಅತಿವೇಗದಿಂದ ಆಕಾಶದಲ್ಲಿ ಹೋಗುತ್ತಿರುವುದನ್ನು ಕಂಡು ಬಲರಾಮನು ಮೊದಲಿಗೆ ಹೆದರಿದವನಂತಾದನು.॥ ೨೬ ॥ ಆದರೆ ಮರುಕ್ಷಣವೇ ತನ್ನ ಸ್ವರೂಪದ ನೆನಪು ಆಗುತ್ತಲೇ ಅವನ ಭಯವು ಹೊರಟುಹೋಯಿತು. ಕಳ್ಳನು ಯಾರದೋ ಧನವನ್ನು ಕದ್ದುಕೊಂಡು ಹೋಗುವಂತೆ ಈ ಶತ್ರುವು ನನ್ನನ್ನು ಕದ್ದುಕೊಂಡು ಹೋಗುತ್ತಿರುವನೆಂದು ತಿಳಿದ ಬಲರಾಮನು, ಆ ಸಮಯದಲ್ಲಿ ಇಂದ್ರನು ಪರ್ವತಗಳನ್ನು ವಜ್ರದಿಂದ ಪ್ರಹರಿಸುವಂತೆ ಅತ್ಯಂತ ಕ್ರೋಧಗೊಂಡು ಅವನ ತಲೆಯ ಮೇಲೆ ಬಲವಾದ ಮುಷ್ಟಿಪ್ರಹಾರಮಾಡಿದನು. ॥ ೨೭ ॥ ಏಟು ಬೀಳುತ್ತಲೇ ಅವನ ತಲೆ ನುಚ್ಚುನೂರಾಯಿತು. ಬಾಯಿಂದ ರಕ್ತವನ್ನು ಉಗುಳುತ್ತಾ, ಚೈತನ್ಯವುಡುಗಿ ಭಯಂಕರ ಶಬ್ದವನ್ನು ಮಾಡುತ್ತಾ ಇಂದ್ರನ ವಜ್ರದಿಂದ

ದೃಷ್ಟ್ವಾ ಪ್ರಲಂಬಂ ನಿಹತಂ ಬಲೇನ ಬಲಶಾಲಿನಾ ।
ಗೋಪಾಃ ಸುವಿಸ್ಮಿತಾ ಆಸನ್ಸಾಧು ಸಾಧ್ವಿತಿ ವಾದಿನಃ ॥ ೩೦ ॥

ಆಶಿಷೋಽಭಿಗೃಣಂತಸ್ತಂ ಪ್ರಶಶಂಸುಸ್ತದರ್ಹಣಮ್ ।
ಪ್ರೇತ್ಯಾಗತಮಿವಾಲಿಂಗ್ಯ ಪ್ರೇಮವಿಹ್ವಲಚೇತಸಃ ॥ ೩೧ ॥

ಪಾಪೇ ಪ್ರಲಂಬೇ ನಿಹತೇ ದೇವಾಃ ಪರಮನಿರ್ವೃತಾಃ ।
ಅಭ್ಯವರ್ಷನ್ಬಲಂ ಮಾಲ್ಯೈಃ ಶಶಂಸುಃ ಸಾಧು ಸಾಧ್ವಿತಿ ॥ ೩೨ ॥

ಪ್ರಹರಿಸಲ್ಪಟ್ಟ ಪರ್ವತದಂತೆ ಆಗಲೇ ಗತಪ್ರಾಣನಾಗಿ ನೆಲಕ್ಕೆ ಉರುಳಿದನು. ॥ ೨೯ ॥

ಮಹಾಬಲಿಷ್ಠನಾದ ಬಲರಾಮನು ಪ್ರಲಂಬಾಸುರನನ್ನು ಸಂಹರಿಸಿದ್ದನ್ನು ನೋಡಿ ಗೋಪರೆಲ್ಲರಿಗೂ ಪರಮಾಶ್ಚರ್ಯವಾಯಿತು. ಅವರೆಲ್ಲರೂ ಭಲೇ! ಭಲೇ! ಎಂದು ಕೊಂಡಾಡಿದರು. ॥ ೩೦ ॥ ಗೊಲ್ಲಬಾಲಕರ ಚಿತ್ತವು ಪ್ರೇಮದಿಂದ ವಿಹ್ವಲವಾಗಿತ್ತು. ಅವರು ಅವನಿಗೆ ಶುಭವನ್ನು ಕೋರುತ್ತಾ ಸತ್ತು ಬದುಕಿ ಬಂದನೆಂದೇ ಭಾವಿಸಿ ಆನಂದಿತರಾದರು. ಪ್ರಶಂಸೆಗೆ ಅರ್ಹನಾದ ಬಲರಾಮನನ್ನು ಅವರೆಲ್ಲ ಆಲಿಂಗಿಸಿಕೊಂಡು, ಅವನ ಪರಾಕ್ರಮವನ್ನು ಪ್ರಶಂಸೆ ಮಾಡಿದರು. ॥ ೩೧ ॥ ಪಾಪಿಷ್ಠನಾದ ಪ್ರಲಂಬಾಸುರನು ಹತನಾದಾಗ ದೇವತೆಗಳೆಲ್ಲರೂ ಸುಖಿಗಳಾದರು. ಅವರು ಎಲ್ಲರೂ ಬಲರಾಮನ ಮೇಲೆ ಹೂಮಳೆಯನ್ನು ಸುರಿಸುತ್ತಾ ಬಲರಾಮ ಸಾಧು! ಎಂದು ಸಾಧುವಾದಗಳನ್ನು ಹೇಳುತ್ತಾ ಬಲಭದ್ರನನ್ನು ಬಹಳವಾಗಿ ಪ್ರಶಂಸಿಸಿದರು. ॥ ೩೨ ॥

*ಹದಿನೆಂಟನೆಯ ಅಧ್ಯಾಯವು ಮುಗಿಯಿತು. ॥ ೧೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ ಪ್ರಲಂಬವಧೋ ನಾಮಾಷ್ಟಾದಶೋಽಧ್ಯಾಯಃ ॥ ೧೮ ॥

# ಹತ್ತೊಂಭತ್ತನೆಯ ಅಧ್ಯಾಯ

## ಗೋವುಗಳನ್ನು-ಗೋಪಾಲಕರನ್ನು ಶ್ರೀಕೃಷ್ಣನು ಕಾಡುಗಿಚ್ಚಿನಿಂದ ಕಾಪಾಡಿದುದು

*ಶ್ರೀಶುಕ ಉವಾಚ*

ಕ್ರೀಡಾಸಕ್ತೇಷು ಗೋಪೇಷು ತದ್ಗಾವೋ ದೂರಚಾರಿಣೀಃ ।
ಸ್ವೈರಂ ಚರಂತ್ಯೋ ವಿವಿಶುಸ್ತೃಣಲೋಭೇನ ಗಹ್ವರಮ್ ॥ ೧ ॥

ಅಜಾ ಗಾವೋ ಮಹಿಷ್ಯಶ್ಚ ನಿರ್ವಿಶಂತ್ಯೋ ವನಾದ್ವನಮ್ ।
ಇಷೀಕಾಟವೀಂ ನಿರ್ವಿವಿಶುಃ ಕ್ರಂದಂತ್ಯೋ ದಾವತರ್ಷಿತಾಃ ॥ ೨ ॥

ತೇಽಪಶ್ಯಂತಃ ಪಶೂನ್ಗೋಪಾಃ ಕೃಷ್ಣರಾಮಾದಯಸ್ತದಾ ।
ಜಾತಾನುತಾಪಾ ನ ವಿದುರ್ವಿಚಿನ್ವಂತೋ ಗವಾಂ ಗತಿಮ್ ॥ ೩ ॥

ತೃಣೈಸ್ತತ್ಖುರದಚ್ಛಿನ್ನೈರ್ಗೋಷ್ಪದೈರಂಕಿತೈರ್ಗವಾಮ್ ।
ಮಾರ್ಗಮನ್ವಗಮನ್ಸರ್ವೇ ನಷ್ಟಾಜೀವ್ಯಾ ವಿಚೇತಸಃ ॥ ೪ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ಒಮ್ಮೆ ಗೋಪಬಾಲಕರೆಲ್ಲರೂ ಆಟದಲ್ಲಿ ಮಗ್ನರಾಗಿದ್ದಾಗ ಅವರ ಗೋವುಗಳು ತಡೆಯುವವರೇ ಇಲ್ಲದ ಕಾರಣ ಬಹಳ ದೂರಕ್ಕೆ ಹೋಗಿಬಿಟ್ಟವು. ಹಸಿರು ಹುಲ್ಲಿನ ಆಸೆಯಿಂದ ಒಂದು ಗಹನವಾದ ಕಾಡನ್ನು ಪ್ರವೇಶಿಸಿದುವು. ॥ ೧ ॥ ಅವರ ಕರುಹಾಕದಿರುವ ಹಸುಗಳು, ಹಾಲುಕೊಡುವ ಹಸುಗಳು, ಅನೇಕ ಕರುಗಳಿದ್ದ ಹಸುಗಳು ಒಂದು ಕಾಡಿನಿಂದ ಮತ್ತೊಂದು ಕಾಡಿಗೆ ಹೋಗುತ್ತಾ ಬಿಸಿಲಿನ ತಾಪದಿಂದ ಪರಿತಪಿಸತೊಡಗಿದವು. ಅವುಗಳು ದಿಕ್ಕುಗಾಣದೆ ಕೂಗಿಕೊಳ್ಳುತ್ತಾ ಕೊನೆಗೆ ಮುಂಜಾರಣ್ಯ (ನೊಜೆಹುಲ್ಲಿನ ಕಾಡು)ವನ್ನು ಹೊಕ್ಕವು. ॥ ೨ ॥ ಶ್ರೀಕೃಷ್ಣ-ಬಲರಾಮರೇ ಮುಂತಾದ ಗೊಲ್ಲಬಾಲಕರು ತಮ್ಮ ಪಶುಗಳ ಸುಳಿವೇ ಇಲ್ಲದುದನ್ನು ನೋಡಿ ಅವರು ಆಟವನ್ನು ಬಿಟ್ಟು ಅದಕ್ಕಾಗಿ ಮರುಗುತ್ತಾ ಎಲ್ಲೆಡೆ ಹುಡುಕತೊಡಗಿದರು. ಆದರೂ ಅವರಿಗೆ ತಮ್ಮ ಹಸುಗಳು ಕಂಡು ಬರಲಿಲ್ಲ. ॥ ೩ ॥ ಗೋವುಗಳೇ ವ್ರಜವಾಸಿಗಳ ಜೀವನಾಧಾರವಾಗಿದ್ದವು. ಅವುಗಳು ಸಿಗದಿರುವಾಗ ಅವರೆಲ್ಲರೂ ಬುದ್ಧಿಗೆಟ್ಟಂತಾದರು. ಬಳಿಕ ಅವರು ಹಸುಗಳ ಗೊರಸಿನ ಗುರುತನ್ನು, ಹುಲ್ಲು ಮೇದುಕೊಂಡು ಹೋದ ಜಾಗಗಳಿಂದ ಅವನ್ನು ಹುಡುಕುತ್ತಾ ಮುಂದೆ ಸಾಗಿದರು. ॥ ೪ ॥

ಮುಂಜಾಟವ್ಯಾಂ ಭ್ರಷ್ಟಮಾರ್ಗಂ ಕ್ರಂದಮಾನಂ ಸ್ವಗೋಧನಮ್ ।
ಸಂಪ್ರಾಪ್ಯ ತೃಷಿತಾಃ ಶ್ರಾಂತಾಸ್ತತಸ್ತೇ ಸಂನ್ಯವರ್ತಯನ್
॥ ೫ ॥

ತಾ ಆಹೂತಾ ಭಗವತಾ ಮೇಘಗಂಭೀರಯಾ ಗಿರಾ ।
ಸ್ವನಾಮ್ನಾಂ ನಿನದಂ ಶ್ರುತ್ವಾ ಪ್ರತಿನೇದುಃ ಪ್ರಹರ್ಷಿತಾಃ
॥ ೬ ॥

ತತಃ ಸಮಂತಾದ್ವನಧೂಮಕೇತು-
ರ್ಯದೃಚ್ಛಯಾಭೂತ್ಕ್ಷಯಕೃದ್ವನೌಕಸಾಮ್ ।
ಸಮೀರಿತಃ ಸಾರಥಿನೋಲ್ಬಣೋಲ್ಮುಕೈಃ
ವಿಲೇಲಿಹಾನಃ ಸ್ಥಿರಜಂಗಮಾನ್ಮಹಾನ್ ॥ ೭ ॥

ತಮಾಪತಂತಂ ಪರಿತೋ ದವಾಗ್ನಿಂ
ಗೋಪಾಶ್ಚ ಗಾವಃ ಪ್ರಸಮೀಕ್ಷ್ಯ ಭೀತಾಃ ।
ಊಚುಶ್ಚ ಕೃಷ್ಣಂ ಸಬಲಂ ಪ್ರಪನ್ನಾ
ಯಥಾ ಹರಿಂ ಮೃತ್ಯುಭಯಾರ್ದಿತಾ ಜನಾಃ ॥ ೮ ॥

ಕೃಷ್ಣ ಕೃಷ್ಣ ಮಹಾವೀರ ಹೇ ರಾಮಾಮಿತವಿಕ್ರಮ ।
ದಾವಾಗ್ನಿನಾ ದಹ್ಯಮಾನಾನ್ಪ್ರಪನ್ನಾಂಸ್ತ್ರಾತುಮರ್ಹಥಃ
॥ ೯ ॥

ನೂನಂ ತ್ವದ್ಬಾಂಧವಾಃ ಕೃಷ್ಣ ನ ಚಾರ್ಹಂತ್ಯವಸೀದಿತುಮ್ ।
ವಯಂ ಹಿ ಸರ್ವಧರ್ಮಜ್ಞ ತ್ವನ್ನಾಥಾಸ್ತ್ವತ್ಪರಾಯಣಾಃ
॥ ೧೦ ॥

*ಶ್ರೀಶುಕ ಉವಾಚ*

ವಚೋ ನಿಶಮ್ಯ ಕೃಪಣಂ ಬಂಧೂನಾಂ ಭಗವಾನ್ಹರಿಃ ।
ನಿಮೀಲಯತ ಮಾ ಭೈಷ್ಟ ಲೋಚನಾನೀತ್ಯಭಾಷತ
॥ ೧೧ ॥

ಕೊನೆಗೆ ಅವರು ತಮ್ಮ ಗೋವುಗಳು ಮುಂಜಾಟವಿಯಲ್ಲಿ ದಾರಿಗಾಣದೆ ಕೂಗಿಕೊಳ್ಳುತ್ತಿರುವುದನ್ನು ನೋಡಿ ಅವನ್ನು ಹಿಂದಿರುಗಿಸಲು ಪ್ರಯತ್ನಿಸತೊಡಗಿದನು. ಆಗ ಅವರೆಲ್ಲರೂ ಬಹಳವಾಗಿ ಆಯಾಸಗೊಂಡಿದ್ದು, ಬಾಯಾರಿಕೆಯಿಂದ ಬಳಲಿದ್ದು ಅವರಿಗೆ ಮುಂದುವರಿಯಲೂ ಸಾಧ್ಯವಾಗಲಿಲ್ಲ. ॥ ೫ ॥ ಗೋವುಗಳ ಆ ಸ್ಥಿತಿಯನ್ನು ನೋಡಿದ ಪ್ರಣತಾರ್ತಿಹರನಾದ ಶ್ರೀಕೃಷ್ಣನು ಮೇಘಸದೃಶವಾದ ಗಂಭೀರ ಧ್ವನಿಯಿಂದ ಹಸುಗಳ ಹೆಸರಿಡಿದು ಕರೆಯತೊಡಗಿದನು. ತಮ್ಮ ಹೆಸರನ್ನು ಕೇಳಿದ ಗೋವುಗಳು ಬಹಳ ಹರ್ಷಿತರಾಗಿ ಪ್ರತ್ಯುತ್ತರವಾಗಿ ತಾವೂ 'ಅಂಬಾ' ಎಂದು ಶ್ರೀಕೃಷ್ಣನ ಕರೆಗೆ ಓಗೊಟ್ಟವು. ॥ ೬ ॥

ಪರೀಕ್ಷಿತನೇ! ಹೀಗೆ ಭಗವಂತನು ಆ ಹಸುಗಳನ್ನು ಕರೆಯುತ್ತಿರುವಾಗಲೇ ಆ ವನದ ನಾಲ್ಕೂ ಕಡೆಗಳಲ್ಲಿ ಆಕಸ್ಮಾತ್ತಾಗಿ ವನವಾಸೀ ಜೀವಿಗಳ ಕಾಲಸ್ವರೂಪವಾದ ಕಾಡ್ಗಿಚ್ಚು ಹೊತ್ತಿಕೊಂಡಿತು. ಜೊತೆಗೆ ಜೋರಾಗಿ ಬಿರುಗಾಳಿಯು ಬೀಸುತ್ತಾ ಆ ಬೆಂಕಿಯ ಉರಿಯನ್ನು ಹೆಚ್ಚಿಸುವುದರಲ್ಲಿ ಸಹಾಯಕವಾಯಿತು. 'ಇದರಿಂದ ಎಲ್ಲಡೆ ಹರಡಿಕೊಂಡ ಆ ಪ್ರಚಂಡ ಅಗ್ನಿಯು ತನ್ನ ಭಯಂಕರ ಜ್ವಾಲೆಗಳಿಂದ ಸಮಸ್ತ ಚರಾಚರ ಜೀವಿಗಳನ್ನು ಭಸ್ಮಮಾಡತೊಡಗಿತು. ॥ ೭ ॥ ಕಾಡ್ಗಿಚ್ಚು ನಾಲ್ಕೂ ಕಡೆಗಳಿಂದ ತಮ್ಮ ಕಡೆಗೆ ಬರುತ್ತಿರುವುದನ್ನು ಕಂಡ ಗೋವುಗಳೂ, ಗೋಪಾಲರೂ ಅತ್ಯಂತ ಭಯಭೀತರಾದರು. ಮರಣಭಯದಿಂದ ಹೆದರಿದ ಜೀವಿಯು ಭಗವಂತನಿಗೆ ಶರಣು ಹೋಗುವಂತೆ ಅವರು ಶ್ರೀಕೃಷ್ಣ ಮತ್ತು ಬಲರಾಮರಿಗೆ ಶರಣಾಗತರಾಗಿ, ಅವರನ್ನು ಕೂಗಿ ಕರೆಯುತ್ತಾ ಇಂತೆಂದರು. ॥ ೮ ॥ ಓ ಮಹಾವೀರನಾದ ಪ್ರಿಯ ಕೃಷ್ಣನೇ! ಪರಮ ಬಲಶಾಲಿಯಾದ ಬಲರಾಮನೇ! ನಾವು ನಿಮಗೆ ಶರಣಾಗಿದ್ದೇವೆ. ಈ ಸಮಯದಲ್ಲಿ ನಾವು ದಾವಾಗ್ನಿಯಿಂದ ಬೆಂದು ಹೋಗುತ್ತಿದ್ದೇವೆ, ನೋಡು! ನೀವಿಬ್ಬರೂ ನಮ್ಮನ್ನು ಸಂರಕ್ಷಿಸಿರಿ. ॥ ೯ ॥ ನಾವೆಲ್ಲರೂ ನಿಶ್ಚಯವಾಗಿಯೂ ನಿಮ್ಮ ಬಂಧುಗಳೇ ಆಗಿದ್ದೇವೆ. ಆಪದ್ಬಾಂಧವನ ಬಂಧುಗಳಾದ ನಾವು ಹೀಗೆ ವಿನಾಶಹೊಂದಬಾರದು. ಸಮಸ್ತವಾದ ಧರ್ಮಗಳನ್ನು ತಿಳಿದಿರತಕ್ಕವನೇ! ನೀನೇ ನಮಗೆ ಏಕಮಾತ್ರ ರಕ್ಷಕನೂ ಪರಮಾಶ್ರಯನೂ ಆಗಿರುವೆ. ನಿನ್ನದೇ ಭರವಸೆಯಿದ್ದ ನಮ್ಮನ್ನು ರಕ್ಷಿಸು. ॥ ೧೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಮಹಾರಾಜ! ತನ್ನ ಬಂಧುಗಳಾದ ಗೊಲ್ಲಬಾಲಕರ ದೈನ್ಯದಿಂದ ಕೂಡಿದ ವಚನವನ್ನು ಕೇಳಿದ ಭಗವಾನ್ ಶ್ರೀಕೃಷ್ಣನು ಅಭಯವನ್ನೀಯುತ್ತಾ ಇಂತೆದನು – ಹೆದರಬೇಡಿರಿ. ನೀವು ನಿಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳಿ. ॥ ೧೧ ॥ ಭಗವಂತನ ಅಪ್ಪಣೆಯನ್ನು ಕೇಳಿದ ಗೋಪಬಾಲಕರು – ಸರಿ; ಹಾಗೆಯೇ ಆಗಲೆಂದು ಹೇಳಿ ತಮ್ಮ ಕಣ್ಣುಗಳನ್ನು ಮುಚ್ಚಿಕೊಂಡರು. ಆಗ ಯೋಗೇಶ್ವರನಾದ ಭಗವಾನ್ ಶ್ರೀಕೃಷ್ಣನು ಭಯಂಕರವಾದ ಆ ಕಾಡ್ಗಿಚ್ಚನ್ನು ತನ್ನ ಬಾಯಿಂದ

ತಥೇತಿ ಮೀಲಿತಾಕ್ಷೇಷು ಭಗವಾನಗ್ನಿಮುಲ್ಬಣಮ್ ।
ಪೀತ್ವಾಮುಖೇನ ತಾನ್ಕೃಚ್ಛ್ರಾದ್ಯೋಗಾಧೀಶೋ ವ್ಯಮೋಚಯತ್ ॥ ೧೨ ॥

ಪಾನಮಾಡಿಬಿಟ್ಟನು. ಹೀಗೆ ಅವನು ಗೋಪಬಾಲಕರನ್ನು ಘೋರವಾದ ಸಂಕಟದಿಂದ ಪಾರುಮಾಡಿದನು. ॥ ೧೨ ॥ ಇದಾದ ಬಳಿಕ ಗೋಪಬಾಲಕರು ಕಣ್ಣುಬಿಟ್ಟು ನೋಡಿದಾಗ ತಾವು ಭಾಂಡೀರ ವಟವೃಕ್ಷದ ಬಳಿಯಲ್ಲಿರುವುದನ್ನು ನೋಡಿದರು. ಹೀಗೆ ತಮ್ಮನ್ನು ಮತ್ತು ಗೋವುಗಳನ್ನು ದಾವಾನಲದಿಂದ ಪಾರಾಗಿಸಿರುವುದನ್ನು ನೋಡಿ ಅತ್ಯಂತ ವಿಸ್ಮಿತರಾದರು. ॥ ೧೩ ॥ ಶ್ರೀಕೃಷ್ಣನ ಈ ಯೋಗಸಿದ್ಧಿಯನ್ನು ಹಾಗೂ ಯೋಗಮಾಯೆಯ ಪ್ರಭಾವವನ್ನು ಮತ್ತು ದಾವಾನಲದಿಂದ ಆದ ತಮ್ಮ ರಕ್ಷಣೆಯನ್ನು ನೋಡಿ ಅವರೆಲ್ಲರೂ ಶ್ರೀಕೃಷ್ಣನು ಸಾಕ್ಷಾತ್ ದೇವತೆಯೆಂದೇ ಭಾವಿಸಿದರು. ॥ ೧೪ ॥

ತತಶ್ಚ ತೇಽಕ್ಷೀಣ್ಯುನ್ಮೀಲ್ಯ ಪುನರ್ಭಾಂಡೀರಮಾಪಿತಾಃ ।
ನಿಶಾಮ್ಯ ವಿಸ್ಮಿತಾ ಆಸನ್ನಾತ್ಮಾನಂ ಗಾಶ್ಚ ಮೋಚಿತಾಃ ॥ ೧೩ ॥

ಕೃಷ್ಣಸ್ಯ ಯೋಗವೀರ್ಯಂ ತದ್ಯೋಗಮಾಯಾನುಭಾವಿತಮ್ ।
ದಾವಾಗ್ನೇರಾತ್ಮನಃ ಕ್ಷೇಮಂ ವೀಕ್ಷ್ಯ ತೇ ಮೇನಿರೇಽಮರಮ್ ॥ ೧೪ ॥

ಪರೀಕ್ಷಿತನೇ! ಸಾಯಂಕಾಲವಾಗುತ್ತಲೇ ಬಲರಾಮನೊಂದಿಗೆ ಭಗವಾನ್ ಶ್ರೀಕೃಷ್ಣನು ಮುರಳಿಯನ್ನು ನುಡಿಸುತ್ತಾ ಹಸುಗಳನ್ನು ಅಟ್ಟಿಸಿಕೊಂಡು ವ್ರಜದ ಕಡೆಗೆ ಹೊರಟನು. ಗೊಲ್ಲಬಾಲಕರು ಅವನನ್ನು ಸ್ತುತಿಸುತ್ತಾ ಅವನ ಹಿಂದೆ-ಹಿಂದೆಯೇ ಬರುತ್ತಿದ್ದರು. ॥ ೧೫ ॥ ಇತ್ತ ವ್ರಜದಲ್ಲಿ ಗೋಪಿಕೆಯರಿಗೆ ಶ್ರೀಕೃಷ್ಣನಿಲ್ಲದ ಒಂದೊಂದು ಕ್ಷಣವೂ ನೂರು ಯುಗಗಳಂತೆ ಕಾಣುತ್ತಿತ್ತು. ಭಗವಾನ್ ಶ್ರೀಕೃಷ್ಣನು ಮರಳಿದಾಗ ಅವನ ದರ್ಶನವನ್ನು ಪಡೆದ ಅವರೆಲ್ಲರೂ ಆನಂದ ಸಾಗರದಲ್ಲಿ ಮುಳುಗಿದರು. ॥ ೧೬ ॥

ಗಾಃ ಸನ್ನಿವರ್ತ್ಯ ಸಾಯಾಹ್ನೇ ಸಹರಾಮೋ ಜನಾರ್ದನಃ ।
ವೇಣುಂ ವಿರಣಯನ್ಗೋಷ್ಠಮಗಾದ್ಗೋಪೈರಭಿಷ್ಟುತಃ ॥ ೧೫ ॥

ಗೋಪೀನಾಂ ಪರಮಾನಂದ ಆಸೀದ್ಗೋವಿಂದದರ್ಶನೇ ।
ಕ್ಷಣಂ ಯುಗಶತಮಿವ ಯಾಸಾಂ ಯೇನ ವಿನಾಭವತ್ ॥ ೧೬ ॥

ಹತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೧೯ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ದಾವಾಗ್ನಿಪಾನಂ ನಾಮೈಕೋನವಿಂಶೋಽಧ್ಯಾಯಃ ॥ ೧೯ ॥

# ಇಪ್ಪತ್ತನೆಯ ಅಧ್ಯಾಯ

## ವರ್ಷಾಋತು ಮತ್ತು ಶರದೃತುವಿನ ವರ್ಣನೆ

*ಶ್ರೀಶುಕ ಉವಾಚ*

ತಯೋಸ್ತದದ್ಭುತಂ ಕರ್ಮ ದಾವಾಗ್ನೇರ್ಮೋಕ್ಷಮಾತ್ಮನಃ ।
ಗೋಪಾಃ ಸ್ತ್ರೀಭ್ಯಃ ಸಮಾಚಖ್ಯುಃ ಪ್ರಲಂಬವಧಮೇವ ಚ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಗೊಲ್ಲಬಾಲಕರು ತಮ್ಮ ಮನೆಗೆ ಹೋಗಿ ಮನೆಯಲ್ಲಿದ್ದ ತಾಯಿ ತಂಗಿ-ಹೆಂಡತಿ ಸ್ತ್ರೀಯರ ಬಳಿಯಲ್ಲಿ ಶ್ರೀಕೃಷ್ಣ-ಬಲರಾಮರು ದಾವಾಗ್ನಿಯಿಂದ ನಮ್ಮನ್ನು ರಕ್ಷಿಸಿದುದು ಮತ್ತು ಪ್ರಲಂಬಾಸುರನನ್ನು ವಧಿಸಿದುದು ಮುಂತಾದ ಅವರ ಅದ್ಭುತ ಕರ್ಮವನ್ನು ವರ್ಣಿಸಿದರು. ॥ ೧ ॥ ವ್ರಜದಲ್ಲಿದ್ದ ವೃದ್ಧರಾದ ಗೋಪಾಲಕರೂ, ಗೋಪಿಯರೂ ರಾಮ-ಕೃಷ್ಣರ ಅಲೌಕಿಕ ಲೀಲೆಗಳನ್ನು ಕೇಳಿ ವಿಸ್ಮಿತರಾದರು. 'ಶ್ರೀಕೃಷ್ಣ ಮತ್ತು ಬಲರಾಮನ ವೇಷದಲ್ಲಿ ಯಾರೋ ದೇವಶ್ರೇಷ್ಠರು ವ್ರಜದಲ್ಲಿ ಆಗಮಿಸಿರುವರು' ಎಂದು ಅವರೆಲ್ಲರೂ ಭಾವಿಸಿದರು. ॥ ೨ ॥

ಗೋಪವೃದ್ಧಾಶ್ಚ ಗೋಪ್ಯಶ್ಚ ತದುಪಾಕರ್ಣ್ಯ ವಿಸ್ಮಿತಾಃ ।
ಮೇನಿರೇ ದೇವಪ್ರವರೌ ಕೃಷ್ಣರಾಮೌ ವ್ರಜಂ ಗತೌ ॥ ೨ ॥

ಇದಾದ ಬಳಿಕ ವರ್ಷಾಋತುವಿನ ಶುಭಾಗಮನವಾಯಿತು. ಸಕಲ ಪ್ರಾಣಿಗಳಿಗೂ ಜೀವನವನ್ನಿತ್ತು ಸಲಹುವ ಕಾಲವದು. ಸೂರ್ಯ-ಚಂದ್ರರ ಸುತ್ತಲೂ ಪದೇ-ಪದೇ ಪ್ರಕಾಶಮಯ ವೃತ್ತವು ಕಾಣತೊಡಗಿತು. ಗುಡುಗು-ಸಿಡಿಲು-ಮಿಂಚು-ಗಾಳಿಗಳಿಂದ ಆಕಾಶವು ಕ್ಷೋಭೆಗೊಂಡಿತು. ॥ ೩ ॥

ತತಃ ಪ್ರಾವರ್ತತ ಪ್ರಾವೃಟ್ ಸರ್ವಸತ್ತ್ವಸಮುದ್ಭವಾ ।
ವಿದ್ಯೋತಮಾನಪರಿಧಿರ್ವಿಸ್ಫೂರ್ಜಿತನಭಸ್ತಲಾ ॥ ೩ ॥

ಸಾಂದ್ರನೀಲಾಂಬುದೈರ್ವ್ಯೋಮ ಸವಿದ್ಯುತ್ಸ್ತನಯಿತ್ನುಭಿಃ ।
ಅಸ್ಪಷ್ಟಜ್ಯೋತಿರಾಚ್ಛನ್ನಂ ಬ್ರಹ್ಮೇವ ಸಗುಣಂ ಬಭೌ ॥ ೪ ॥

ಆಕಾಶದಲ್ಲಿ ದಟ್ಟವಾದ ಮತ್ತು ಕಪ್ಪಾದ ಮೇಘಗಳು ಆವರಿಸಿದುವು. ಗುಡುಗಿನ ಶಬ್ದದೊಡನೆ ಮಿಂಚು ಕಾಣಿಸಿಕೊಂಡಿತು. ಸೂರ್ಯ-ಚಂದ್ರ-ತಾರೆಗಳು ಮುಚ್ಚಿರುತ್ತಿದ್ದವು. ಬ್ರಹ್ಮಸ್ವರೂಪನಾಗಿದ್ದರೂ ಗುಣಗಳಿಂದ ಮುಚ್ಚಿಹೋದಾಗ ಜೀವನ ಸ್ಥಿತಿಯಂತೆ ಆಕಾಶವು ಶೋಭಿಸುತ್ತಿತ್ತು. ॥ ೪ ॥

ಅಷ್ಟೌ ಮಾಸಾನ್ ನಿಪೀತಂ ಯದ್ಭೂಮ್ಯಾಶ್ಚೋದಮಯಂ ವಸು ।
ಸ್ವಗೋಭಿರ್ಮೋಕ್ತುಮಾರೇಭೇ ಪರ್ಜನ್ಯಃ ಕಾಲ ಆಗತೇ ॥ ೫ ॥

ಸೂರ್ಯನು ರಾಜನಂತೆ ಪೃಥಿವಿರೂಪವಾದ ಪ್ರಜೆಯಿಂದ ಕಂದಾಯವಾಗಿ ಎಂಟು ತಿಂಗಳುಕಾಲ ಸಂಗ್ರಹಿಸಿದ ನೀರನ್ನು ಈಗ ಸಮಯಬಂದಾಗ ಅವನು ತನ್ನ ಕಿರಣಗಳೆಂಬ ಕೈಗಳಿಂದ ಪುನಃ ಅದಕ್ಕೆ ಹಂಚತೊಡಗಿದನು. ॥ ೫ ॥

ತಡಿತ್ವಂತೋ ಮಹಾಮೇಘಾಶ್ಚಂಡಶ್ವಸನವೇಪಿತಾಃ ।
ಪ್ರೀಣನಂ ಜೀವನಂ ಹ್ಯಸ್ಯ ಮುಮುಚುಃ ಕರುಣಾ ಇವ ॥ ೬ ॥

ದಯಾಳುಗಳಾದ ಮನುಷ್ಯರು ಪೀಡೆಗೊಳಗಾದವರನ್ನು ರಕ್ಷಿಸುವ ಸಲುವಾಗಿ ತಮ್ಮ ಪ್ರಾಣಗಳನ್ನಾದರೂ ಒತ್ತೆಯಿಡುವಂತೆಯೇ ಮೋಡಗಳು ಮಿಂಚೆಂಬ ಕಣ್ಣುಗಳ ಮೂಲಕವಾಗಿ ಪ್ರಪಂಚದ ಜನರ ಕಷ್ಟಗಳನ್ನು ನೋಡಿ ಗಾಳಿಯ ಪ್ರೇರಣೆಯಿಂದ ಜನರ ಶ್ರೇಯಸ್ಸಿಗಾಗಿ ಜೀವನರೂಪೀ ನೀರನ್ನು ಸುರಿಸತೊಡಗಿದವು. ॥ ೬ ॥

ತಪಃಕೃಶಾ ದೇವಮೀಢಾ ಆಸೀದ್ವರ್ಷೀಯಸೀ ಮಹೀ ।
ಯಥೈವ ಕಾಮ್ಯತಪಸಸ್ತನುಃ ಸಂಪ್ರಾಪ್ಯ ತತ್ಫಲಮ್ ॥ ೭ ॥

ಸಕಾಮಭಾವದಿಂದ ತಪಸ್ಸು ಮಾಡುವಾಗ ಶರೀರವು ದುರ್ಬಲವಾಗಿ, ಅದರ ಫಲವು ದೊರೆತಾಗ ಅದು ಹೃಷ್ಟ-ಪುಷ್ಟವಾಗುವಂತೆ ಗ್ರೀಷ್ಮಋತುವಿನಲ್ಲಿ ಒಣಗಿಹೋಗಿದ್ದ ಭೂಮಿಯು ಈಗ ವರ್ಷಾಋತುವು ಬಂದೊಡನೆ ವೃದ್ಧಿಹೊಂದಿ ಹಚ್ಚ-ಹಸಿರಾಯಿತು. ॥ ೭ ॥

ನಿಶಾಮುಖೇಷು ಖದ್ಯೋತಾಸ್ತಮಸಾ ಭಾಂತಿ ನ ಗ್ರಹಾಃ ।
ಯಥಾ ಪಾಪೇನ ಪಾಖಂಡಾ ನ ಹಿ ವೇದಾಃ ಕಲೌ ಯುಗೇ ॥ ೮ ॥

ಕಲಿಯುಗದಲ್ಲಿ ಪಾಪವು ಪ್ರಬಲವಾದಾಗ ವೈದಿಕ ಸಂಪ್ರದಾಯವು ಮರೆಯಾಗಿ ಪಾಖಂಡ ಮತಗಳು ಪ್ರಚಾರವಾಗುವಂತೆಯೇ, ವರ್ಷಾಕಾಲದ ಸಾಯಂಕಾಲಗಳಲ್ಲಿ ಕಾರ್ಮುಗಿಲಿನಿಂದಾಗಿ ಕತ್ತಲೆ ಆವರಿಸಿ ಗ್ರಹ, ತಾರೆಗಳು ಕಂಡುಬರದೇ ಮಿಣುಕು ಹುಳುಗಳ ಪ್ರಕಾಶವು ಕಾಣಿಸುತ್ತದೆ. ॥ ೮॥

ಶ್ರುತ್ವಾ ಪರ್ಜನ್ಯನಿನದಂ ಮಂಡೂಕಾ ವ್ಯಸೃಜನ್ಗಿರಃ ।
ತೂಷ್ಣೀಂ ಶಯಾನಾಃ ಪ್ರಾಗ್ಯದ್ವದ್ ಬ್ರಾಹ್ಮಣಾ ನಿಯಮಾತ್ಯಯೇ ॥ ೯ ॥

ನಿತ್ಯಕರ್ಮಗಳು ಮುಗಿದನಂತರ ಗುರುಗಳ ಆದೇಶದಂತೆ ಬ್ರಹ್ಮಚಾರಿಗಳು ವೇದಗಳನ್ನು ಪಠಿಸುವಂತೆ, ಇಷ್ಟರವರೆಗೆ ಸುಮ್ಮನಿದ್ದ ಕಪ್ಪೆಗಳು ಮೇಘಗರ್ಜನೆಯನ್ನು ಕೇಳಿ ವಟಗುಟ್ಟಲು ಪ್ರಾರಂಭಿಸಿದವು. ॥ ೯ ॥

ಆಸನ್ನುತ್ಪಥವಾಹಿನ್ಯಃ ಕ್ಷುದ್ರನದ್ಯೋಽನುಶುಷ್ಯತೀಃ ।
ಪುಂಸೋ ಯಥಾಸ್ವತಂತ್ರಸ್ಯ ದೇಹದ್ರವಿಣಸಂಪದಃ ॥ ೧೦ ॥

ಜಿತೇಂದ್ರಿಯನಲ್ಲದ ಪುರುಷನ ಶರೀರ ಮತ್ತು ಧನ-ಸಂಪತ್ತುಗಳು ಅಪವ್ಯಯವಾಗುವಂತೆ, ಗ್ರೀಷ್ಮ ಋತುವಿನಲ್ಲಿ ಒಣಗಿಹೋಗಿದ್ದ ಸಣ್ಣ-ಪುಟ್ಟ ನದಿಗಳು ವರ್ಷಾಕಾಲದಲ್ಲಿ ಮೇರೆ ಮೀರಿ ಹರಿಯತೊಡಗಿದವು. ॥ ೧೦ ॥

ಹರಿತಾ ಹರಿಭಿಃ ಶಷ್ಪೈರಿಂದ್ರಗೋಪೈಶ್ಚ ಲೋಹಿತಾ ।
ಉಚ್ಛಿಲೀಂಧ್ರಕೃತಚ್ಛಾಯಾ ನೃಣಾಂ ಶ್ರೀರಿವ ಭೂರಭೂತ್ ॥ ೧೧ ॥

ಕೆಲವು ಕಡೆಗಳಲ್ಲಿ ಭೂಮಿಯು ಹುಲ್ಲಿನಿಂದಾಗಿ ಹಚ್ಚ-ಹಸಿರಾಗಿಯೂ, ಕೆಲವೆಡೆಗಳಲ್ಲಿ ಚಂದ್ರಚೂಡಗಳೆಂಬ ಹುಳುಗಳಿಂದ ತುಂಬಿದ್ದು ಕೆಂಪಾಗಿಯೂ, ಮತ್ತೆ ಕೆಲವೆಡೆಗಳಲ್ಲಿ ನಾಯಿಕೊಡೆಗಳಿಂದ ತುಂಬಿದ್ದು ಬಿಳುಪಾಗಿಯೂ ಕಾಣಿಸುತ್ತಿದ್ದು ನಾನಾ ಬಣ್ಣದ ಉಡುಗೆ ತೊಡಿಗೆಗಳನ್ನು ಧರಿಸಿದ ರಾಜನ ಸೈನಿಕರಂತೆ ಕಾಣುತ್ತಿತ್ತು. ॥ ೧೧ ॥

ಕ್ಷೇತ್ರಾಣಿ ಸಸ್ಯಸಂಪದ್ಭಿಃ ಕರ್ಷಕಾಣಾಂ ಮುದಂ ದದುಃ ।
ಧನಿನಾಮುಪತಾಪಂ ಚ ದೈವಾಧೀನಮಜಾನತಾಮ್ ॥ ೧೨ ॥

ಎಲ್ಲ ಹೊಲ-ಗದ್ದೆಗಳು ಸಸ್ಯ ಸಮೃದ್ಧಿಯಿಂದ ಕೂಡಿದ್ದು ರೈತರಿಗೆ ಆನಂದವನ್ನುಂಟು ಮಾಡುತ್ತವೆ. ಸರ್ವಸ್ವವೂ ದೈವಾಧೀನವೆಂಬ ರಹಸ್ಯವನ್ನು ತಿಳಿಯದಿದ್ದ ಧನಿಕರಿಗೆ ರೈತರ ಸಂಪತ್ತು ನೋಡಿ ಇವರೂ ನಮ್ಮಂತೆ ಧನಿಕರಾಗುವರಲ್ಲ ಎಂದು ಅನುತಾಪವುಂಟಾಗುತ್ತದೆ. ॥ ೧೨ ॥

ಜಲಸ್ಥಲೌಕಸಃ ಸರ್ವೇ ನವವಾರಿನಿಷೇವಯಾ ।
ಅಬಿಭ್ರದ್ರುಚಿರಂ ರೂಪಂ ಯಥಾ ಹರಿನಿಷೇವಯಾ
॥ ೧೩ ॥

ಸರಿದ್ಭಿಃ ಸಂಗತಃ ಸಿಂಧುಶ್ಚುಕ್ಷುಭೇ ಶ್ವಸನೋರ್ಮಿಮಾನ್ ।
ಅಪಕ್ವಯೋಗಿನಶ್ಚಿತ್ತಂ ಕಾಮಾಕ್ತಂ ಗುಣಯುಗ್ಯಥಾ
॥ ೧೪ ॥

ಗಿರಯೋ ವರ್ಷಧಾರಾಭಿರ್ಹನ್ಯಮಾನಾ ನ ವಿವ್ಯಥುಃ ।
ಅಭಿಭೂಯಮಾನಾ ವ್ಯಸನೈರ್ಯಥಾಧೋಕ್ಷಜಚೇತಸಃ
॥ ೧೫ ॥

ಮಾರ್ಗಾ ಬಭೂವುಃ ಸಂದಿಗ್ಧಾಸ್ತೃಣೈಶ್ಛನ್ನಾ ಹ್ಯಸಂಸ್ಕೃತಾಃ ।
ನಾಭ್ಯಸ್ಯಮಾನಾಃ ಶ್ರುತಯೋ ದ್ವಿಜೈಃ ಕಾಲಹತಾ ಇವ
॥ ೧೬ ॥

ಲೋಕಬಂಧುಷು ಮೇಘೇಷು ವಿದ್ಯುತಶ್ಚಲಸೌಹೃದಾಃ ।
ಸ್ಥೈರ್ಯಂ ನ ಚಕ್ರುಃ ಕಾಮಿನ್ಯಃ ಪುರುಷೇಷು ಗುಣಿಷ್ವಿವ
॥ ೧೭ ॥

ಧನುರ್ವಿಯತಿ ಮಾಹೇಂದ್ರಂ ನಿರ್ಗುಣಂ ಚ ಗುಣಿನ್ಯಭಾತ್ ।
ವ್ಯಕ್ತೇ ಗುಣವ್ಯತಿಕರೇಽಗುಣವಾನ್ಪುರುಷೋ ಯಥಾ
॥ ೧೮ ॥

ನ ರರಾಜೋಡುಪಶ್ಛನ್ನಃ ಸ್ವಜ್ಯೋತ್ಸ್ನಾರಾಜಿತೈರ್ಘನೈಃ ।
ಅಹಂಮತ್ಯಾ ಭಾಸಿತಯಾ ಸ್ವಭಾಸಾ ಪುರುಷೋ ಯಥಾ
॥ ೧೯ ॥

ಮೇಘಾಗಮೋತ್ಸವಾ ಹೃಷ್ಟಾಃ ಪ್ರತ್ಯನಂದನ್‌ಶಿಖಂಡಿನಃ ।
ಗೃಹೇಷು ತಪ್ತಾ ನಿರ್ವಿಣ್ಣಾ ಯಥಾಚ್ಯುತಜನಾಗಮೇ
॥ ೨೦ ॥

ಪೀತ್ವಾಪಃ ಪಾದಪಾಃ ಪದ್ಭಿರಾಸನ್ನಾನಾತ್ಮಮೂರ್ತಯಃ ।
ಪ್ರಾಕ್ಕ್ಷಾಮಾಸ್ತಪಸಾ ಶ್ರಾಂತಾ ಯಥಾ ಕಾಮಾನುಸೇವಯಾ
॥ ೨೧ ॥

ಸರಸ್ಸ್ವಶಾಂತರೋಧಸ್ಸು ನ್ಯೂಷುರಂಗಾಪಿ ಸಾರಸಾಃ ।
ಗೃಹೇಷ್ವಶಾಂತಕೃತ್ಯೇಷು ಗ್ರಾಮ್ಯಾ ಇವ ದುರಾಶಯಾಃ
॥ ೨೨ ॥

ಹರಿಸೇವೆಯಿಂದ ಅಂತರ್ಬಾಹ್ಯ ಎರಡೂ ರೂಪಗಳೂ ಸುಂದರವಾಗುವಂತೆ ವರ್ಷಾಕಾಲದ ಹೊಸ ನೀರಿನ ಪಾನದಿಂದ ಜಲಚರ ಭೂಚರ ಪ್ರಾಣಿಗಳ ಸೌಂದರ್ಯಗಳು ಹೆಚ್ಚಿದವು. ॥ ೧೩ ॥ ವಾಸನಾಯುಕ್ತ ಯೋಗಿಯ ಚಿತ್ತವು ವಿಷಯಗಳ ಸಂಪರ್ಕದಿಂದ ಕಾಮನೆಗಳು ಉಕ್ಕುವಂತೆಯೇ, ವರ್ಷಾಋತುವಿನಲ್ಲಿ ಬಿರುಗಾಳಿಗೆ ಸಮುದ್ರವು ಮೊದಲೇ ಎತ್ತರವಾದ ತೆರೆಗಳಿಂದ ಕೂಡಿತ್ತು, ಈಗ ನದಿಗಳ ಸಂಯೋಗದಿಂದ ಅದು ಇನ್ನೂ ಕ್ಷುಬ್ಧವಾಯಿತು. ॥ ೧೪ ॥ ತಮ್ಮ ಚಿತ್ತವನ್ನು ಭಗವಂತನಲ್ಲಿ ಸಮರ್ಪಿಸಿದ ಪುರುಷರಿಗೆ ಎಷ್ಟೇ ದುಃಖಗಳ ಹೊರೆಗಳೂ ಕೂಡ ಯಾವುದೇ ವ್ಯಥೆಯನ್ನು ಉಂಟುಮಾಡದಂತೆ, ಮುಸಲಧಾರ ಮಳೆಯ ಆಘಾತ ಬೀಳುತ್ತಿದ್ದರೂ ಪರ್ವತಗಳಿಗೆ ಯಾವುದೇ ವ್ಯಥೆ ಉಂಟಾಗುವುದಿಲ್ಲ. ॥ ೧೫ ॥ ಸತತವಾಗಿ ಅಭ್ಯಾಸ ಮಾಡದಿರುವ ವೇದಗಳು ದ್ವಿಜರಿಗೆ ಕಾಲಾನುಕ್ರಮದಲ್ಲಿ ಮರೆತು ಹೋಗುವಂತೆ, ಶುದ್ಧಸಂಸ್ಕಾರ ಹೀನವಾದ ಮಾರ್ಗಗಳು ಹುಲ್ಲಿನಿಂದ ತುಂಬಿಕೊಂಡು ಅದನ್ನು ಗುರುತಿಸುವುದೇ ಕಷ್ಟವಾಯಿತು. ॥ ೧೬ ॥ ಚಂಚಲವಾದ ಅನುರಾಗವುಳ್ಳ ಕಾಮಿನಿಯು ಗುಣವಂತನಾದ ಪುರುಷನ ಬಳಿಯಲ್ಲೂ ಸ್ಥಿರಭಾವದಿಂದ ಇರುವುದಿಲ್ಲ. ಹಾಗೆಯೇ ಲೋಕೋಪಕಾರಿಗಳಾದ ಮೇಘಗಳಲ್ಲಿ ಮಿಂಚುಗಳು ಸ್ಥಿರವಾಗಿ ಇರುವುದಿಲ್ಲ. ॥ ೧೭ ॥ ತ್ರಿಗುಣಾತ್ಮಕವಾದ ಈ ಪ್ರಪಂಚದಲ್ಲಿ ನಿರ್ಗುಣನಾದ ಪರಬ್ರಹ್ಮನು ಬೆಳಗುವಂತೆ ಮೇಘಗಳ ಗುಡುಗು ಸಿಡಿಲುಗಳಿಂದ ತುಂಬಿರುವ ಆಕಾಶದಲ್ಲಿ ನಿರ್ಗುಣವಾದ ನಾಣಿಲ್ಲದ ಇಂದ್ರಧನುಸ್ಸು (ಕಾಮನಬಿಲ್ಲು) ಮೂಡಿ ಬರುತ್ತದೆ. ॥ ೧೮ ॥ ಪುರುಷನಲ್ಲಿರುವ ದೇಹಾತ್ಮಭ್ರಾಂತಿಯಿಂದ ಕೂಡಿದ ಅಹಂಕಾರವು ಆತ್ಮವನ್ನು ಮುಚ್ಚಿಬಿಡುವಂತೆ, ಚಂದ್ರನ ಬೆಳದಿಂಗಳಿಂದಲೇ ಪ್ರಕಾಶಗೊಂಡ ಮೋಡಗಳ ಆವರಣದಿಂದ ಚಂದ್ರನು ಮರೆಯಾಗಿದ್ದಾನೆ. ॥ ೧೯ ॥ ತಾಪತ್ರಯಗಳಿಂದ ಬೆಂದು ಪರಿತಪಿಸುವ ಗೃಹಸ್ಥರಮನೆಗೆ ಹರಿದಾಸರು ಬಂದಾಗ ಅವರಿಗೆ ಆಗುವ ಆನಂದೋತ್ಸವದಂತೆ, ಮೇಘಗಳ ಶುಭಾಗಮನದಿಂದ ನವಿಲುಗಳು ಕೇಕೆಹಾಕಿಕೊಂಡು ನೃತ್ಯವಾಡುತ್ತಾ ಆನಂದೋತ್ಸವವನ್ನು ಆಚರಿಸುತ್ತಿರುವುವು. ॥ ೨೦ ॥ ಸಕಾಮ ಭಾವದಿಂದ ತಪಸ್ಸು ಮಾಡುವವರ ಶರೀರವು ಮೊದಲಿಗೆ ಕೃಶವಾಗಿದ್ದರೂ, ಕಾಮನಾಪೂರ್ತಿ ಯಾದಾಗ ಹೃಷ್ಟ-ಪುಷ್ಟರಾಗುವಂತೆ, ಗ್ರೀಷ್ಮದಲ್ಲಿ ಒಣಗಿ ಹೋಗಿದ್ದ ವೃಕ್ಷಗಳೂ ಈಗ ವರ್ಷಾಋತುವಿನಲ್ಲಿ ಬೇರುಗಳಿಂದ ನೀರನ್ನುಂಡು ಸೊಂಪಾಗಿ ಚಿಗುರಿಕೊಳ್ಳುತ್ತವೆ. ॥ ೨೧ ॥ ಮನಸ್ಸಿಗೆ ಅಹಿತವಾದ ಕಾರ್ಯಗಳು ಮನೆಯಲ್ಲಿ ನಡೆಯುತ್ತಿದ್ದರೂ ವಿಷಯೀ ಪುರುಷರು ಆ ಮನೆಯನ್ನು ತೊರೆದು ಹೋಗುವುದಿಲ್ಲವೋ ಹಾಗೆಯೇ, ಮಳೆ ಸುರಿಯುವಿಕೆಯಿಂದ ಸರೋವರಗಳು ಕೊಚ್ಚೆಯಾಗಿದ್ದರೂ ಸಾರಸಪಕ್ಷಿಗಳು ಅವನ್ನು ವರ್ಷಾಕಾಲದಲ್ಲಿ ಬಿಟ್ಟು ಹೋಗುವುದಿಲ್ಲ. ॥ ೨೨ ॥

ಜಲೌಘೈರ್ನಿರಭಿದ್ಯಂತ ಸೇತವೋ ವರ್ಷತೀಶ್ವರೇ ।
ಪಾಖಂಡಿನಾಮಸದ್ವಾದೈರ್ವೇದಮಾರ್ಗಾಃ ಕಲೌ ಯಥಾ ॥ ೨೩ ॥

ವ್ಯಮುಂಚನ್ವಾಯುಭಿರ್ನುನ್ನಾ ಭೂತೇಭ್ಯೋಽಥಾಮೃತಂ ಘನಾಃ ।
ಯಥಾಽಽಶಿಷೋ ವಿಶ್ಪತಯಃ ಕಾಲೇ ಕಾಲೇ ದ್ವಿಜೇರಿತಾಃ ॥ ೨೪ ॥

ಏವಂ ವನಂ ತದ್ವರ್ಷಿಷ್ಠಂ ಪಕ್ವಖರ್ಜೂರಜಂಬುಮತ್ ।
ಗೋಗೋಪಾಲೈರ್ವೃತೋ ರಂತುಂ ಸಬಲಃ ಪ್ರಾವಿಶದ್ಧರಿಃ ॥ ೨೫ ॥

ಧೇನವೋ ಮಂದಗಾಮಿನ್ಯ ಊಧೋಭಾರೇಣ ಭೂಯಸಾ ।
ಯಯುರ್ಭಗವತಾಽಽಹೂತಾ ದ್ರುತಂ ಪ್ರೀತ್ಯಾ ಸ್ನುತಸ್ತನೀಃ ॥ ೨೬ ॥

ವನೌಕಸಃ ಪ್ರಮುದಿತಾ ವನರಾಜೀರ್ಮಧುಚ್ಯುತಃ ।
ಜಲಧಾರಾ ಗಿರೇರ್ನಾದಾನಾಸನ್ನಾ ದದೃಶೇ ಗುಹಾಃ ॥ ೨೭ ॥

ಕ್ವಚಿದ್ವನಸ್ಪತಿಕ್ರೋಡೇ ಗುಹಾಯಾಂ ಚಾಭಿವರ್ಷತಿ ।
ನಿರ್ವಿಶ್ಯ ಭಗವಾನ್ರೇಮೇ ಕಂದಮೂಲಫಲಾಶನಃ ॥ ೨೮ ॥

ದಧ್ಯೋದನಂ ಸಮಾನೀತಂ ಶಿಲಾಯಾಂ ಸಲಿಲಾಂತಿಕೇ ।
ಸಂಭೋಜನೀಯೈರ್ಬುಭುಜೇ ಗೋಪೈಃ ಸಂಕರ್ಷಣಾನ್ವಿತಃ ॥ ೨೯ ॥

ಶಾದ್ವಲೋಪರಿ ಸಂವಿಶ್ಯ ಚರ್ವತೋ ಮೀಲಿತೇಕ್ಷಣಾನ್ ।
ತೃಪ್ತಾನ್ವೃಷಾನ್ವತ್ಸತರಾನ್ ಗಾಶ್ಚ ಸ್ವೋಧೋಭರಶ್ರಮಾಃ ॥ ೩೦ ॥

ಪ್ರಾವೃಟ್‌ಶ್ರಿಯಂ ಚ ತಾಂ ವೀಕ್ಷ್ಯ ಸರ್ವಭೂತಮುದಾವಹಾಮ್ ।
ಭಗವಾನ್ಪೂಜಯಾಂಚಕ್ರೇ ಆತ್ಮಶಕ್ತ್ಯುಪಬೃಂಹಿತಾಮ್ ॥ ೩೧ ॥

ಏವಂ ನಿವಸತೋಸ್ತಸ್ಮಿನ್ರಾಮಕೇಶವಯೋರ್ವ್ರಜೇ ।
ಶರತ್ಸಮಭವದ್ವ್ಯಭ್ರಾ ಸ್ವಚ್ಛಾಮ್ಬ್ವಪರುಷಾನಿಲಾ ॥ ೩೨ ॥

ಕಲಿಯುಗದಲ್ಲಿ ನಾಸ್ತಿಕರ ಮಿಥ್ಯಾವಾದಗಳಿಂದ ವೈದಿಕಮತವು ಎಲ್ಲೆ ಮೀರುವಂತೆ, ವರ್ಷಾಕಾಲದಲ್ಲಿ ದೇವೇಂದ್ರನು ಸುರಿಸುತ್ತಿರುವ ಮುಸಲಧಾರೆಯಂತಹ ಮಳೆಯ ನೀರಿನ ಪ್ರವಾಹದಿಂದ ಹಲವಾರು ಅಣೆಕಟ್ಟು, ಸೇತುವೆಗಳೂ ಕೊಚ್ಚಿಕೊಂಡು ಹೋಗುತ್ತವೆ. ॥ ೨೩ ॥ ಬ್ರಾಹ್ಮಣರ ಪ್ರೇರಣೆಯಿಂದ ಧನಿಕರಾದವರು ಜನೋಪಯೋಗಿ ಕಲ್ಯಾಣ ಕಾರ್ಯಗಳನ್ನು ಮಾಡುವಂತೆ, ವರ್ಷಾಕಾಲದಲ್ಲಿ ವಾಯುವಿನ ಪ್ರೇರಣೆಯಿಂದ ದಟ್ಟವಾದ ಮೇಘಗಳು ಪ್ರಾಣಿಗಳ ಹಿತದ ಸಲುವಾಗಿ ಅಮೃತಮಯವಾದ ನೀರನ್ನು ಸುರಿಸುತ್ತವೆ. ॥ ೨೪ ॥

ವರ್ಷಾಋತುವಿನಲ್ಲಿ ವೃಂದಾವನವು ಹೀಗೆ ಶೋಭಾಯಮಾನವಾಗಿದ್ದು ಪಕ್ವವಾದ ಖರ್ಜೂರದಿಂದಲೂ, ನೇರಳೆಹಣ್ಣುಗಳಿಂದಲೂ ಸಮೃದ್ಧವಾಗಿತ್ತು. ಅಂತಹ ಸುಂದರವಾದ ವನದಲ್ಲಿ ವಿಹರಿಸಲು ರಾಮ-ಶ್ಯಾಮರು ಗೊಲ್ಲಬಾಲಕರೊಡನೆ ಮತ್ತು ಗೋವುಗಳ ಜೊತೆಗೆ ಪ್ರವೇಶಿಸಿದರು. ॥ ೨೫ ॥ ಕೆಚ್ಚಲುಗಳಲ್ಲಿ ಹಾಲು ತುಂಬಿ ಭಾರವಾದ್ದರಿಂದ ಹಸುಗಳು ನಿಧಾನವಾಗಿ ನಡೆದು ಹೋಗುತ್ತಿದ್ದವು. ಭಗವಾನ್ ಶ್ರೀಕೃಷ್ಣನು ಅವುಗಳ ಹೆಸರಿಡಿದು ಕೂಗಿದಾಗ ಅವು ಪ್ರೇಮಪರವಶರಾಗಿ ಬೇಗ-ಬೇಗನೇ ಓಡತೊಡಗಿದವು. ಹೀಗೆ ಓಡುವಾಗ ಅವುಗಳ ಕೆಚ್ಚಲುಗಳಿಂದ ಹಾಲು ಧಾರಾಕಾರವಾಗಿ ಸುರಿಯುತ್ತಿತ್ತು. ॥ ೨೬ ॥ ಆ ವೃಂದಾವನದಲ್ಲಿ ಶ್ರೀಕೃಷ್ಣನು ಆನಂದತುಂದಿಲರಾದ ವನವಾಸಿಗಳನ್ನು, ಜೇನನ್ನು ಸುರಿಸುತ್ತಿರುವ ವೃಕ್ಷಗಳನ್ನು, ಮೈತುಂಬಿ ಭೋರ್ಗರೆಯುತ್ತಾ ಹರಿಯುತ್ತಿದ್ದ ಗಿರಿನದಿಗಳನ್ನು, ಅವುಗಳ ಸಮೀಪದಲ್ಲೇ ಇದ್ದ ಗುಹೆಗಳನ್ನು ನೋಡಿದನು. ॥ ೨೭ ॥ ಮಳೆಯು ಬಂದಾಗ ಶ್ರೀಕೃಷ್ಣನು ಕೆಲವೊಮ್ಮೆ ಮರದ ಪೊಟರೆಗಳಲ್ಲಿಯೂ, ಕೆಲವು ವೇಳೆ ಗುಹೆಗಳಲ್ಲಿಯೂ ಅಡಗಿಕೊಳ್ಳುತ್ತಿದ್ದನು. ಕೆಲವುವೇಳೆ ಗಡ್ಡೆಗೆಣಸು-ಹಣ್ಣುಗಳನ್ನು ತಿನ್ನುತ್ತಾ ಗೋಪಬಾಲಕರೊಂದಿಗೆ ಆಟವಾಡುತ್ತಿದ್ದನು. ॥ ೨೮ ॥ ಕೆಲವು ವೇಳೆ ಶ್ರೀಕೃಷ್ಣನು ನದಿಯ ತೀರದ ಬಂಡೆಯ ಮೇಲೆ ಬಲರಾಮನೊಡನೆಯೂ, ಗೋಪಬಾಲಕರೊಂದಿಗೂ ಕುಳಿತು ಮನೆಯಿಂದ ತಂದ ಮೊಸರನ್ನವನ್ನು ಮೆಲ್ಲುತ್ತಿದ್ದನು. ॥ ೨೯ ॥ ಆ ವರ್ಷಾಕಾಲದಲ್ಲಿ ಎತ್ತುಗಳು, ಕರುಗಳು, ಕೆಚ್ಚಲಿನ ಭಾರದಿಂದ ದಣಿದಿದ್ದ ಹಸುಗಳು ಕೆಲಹೊತ್ತಿನವರೆಗೆ ಹುಲ್ಲು ಮೇಯುತ್ತಿದ್ದು ಹೊಟ್ಟೆ ತುಂಬಿದ ಮೇಲೆ ಹುಲ್ಲಿನ ಮೇಲೆಯೇ ಮಲಗಿ ಕಣ್ಣು ಮುಚ್ಚಿಕೊಂಡು ಮೆಲಕುಹಾಕುತ್ತಿದ್ದವು. ಸಮಸ್ತ ಪ್ರಾಣಿಗಳಿಗೂ ಸುಖದಾಯಕವಾದ, ಆನಂದಪ್ರದವಾದ ಇಂತಹ ವರ್ಷಾಕಾಲದ ಸೊಬಗನ್ನು ತನ್ನ ಲೀಲಾವಿಲಾಸದಿಂದಲೇ ಪ್ರಾದುರ್ಭವಿಸಿದ್ದರೂ ಆ ಸನ್ನಿವೇಶವನ್ನು ನೋಡಿ ಶ್ರೀಕೃಷ್ಣನು ಅತ್ಯಂತ ಪ್ರಸನ್ನನಾದನು ಹಾಗೂ ಅವುಗಳನ್ನು ಬಹಳವಾಗಿ ಪ್ರಶಂಸೆ ಮಾಡಿದನು. ॥ ೩೦-೩೧ ॥

ಹೀಗೆ ರಾಮ-ಕೇಶವರಿಬ್ಬರೂ ಮಹದಾನಂದದಿಂದ ವ್ರಜದಲ್ಲಿ ನಿವಾಸಮಾಡುತ್ತಿರಲಾಗಿ, ವರ್ಷಾಋತುವು ಕಳೆದು ಶರದೃತುವಿನ ಆಗಮನವಾಯಿತು. ಆಕಾಶವು ಮೋಡಗಳಿಲ್ಲದೆ ನಿರ್ಮಲವಾಯಿತು. ವಾಯುವು ಮಂದ-ಮಂದವಾಗಿ ಬೀಸತೊಡಗಿತು. ॥೩೨॥

ಶರದಾ ನೀರಜೋತ್ಪತ್ತ್ಯಾ ನೀರಾಣಿ ಪ್ರಕೃತಿಂ ಯಯುಃ ।
ಭ್ರಷ್ಟಾನಾಮಿವ ಚೇತಾಂಸಿ ಪುನರ್ಯೋಗನಿಷೇವಯಾ ॥ ೩೩ ॥

ವ್ಯೋಮ್ನೋಽಬ್ದಂ ಭೂತಶಾಬಲ್ಯಂ ಭುವಃ ಪಂಕಮಪಾಂ ಮಲಮ್ ।
ಶರಜ್ಜಹಾರಾಶ್ರಮಿಣಾಂ ಕೃಷ್ಣೇ ಭಕ್ತಿರ್ಯಥಾಶುಭಮ್ ॥ ೩೪ ॥

ಸರ್ವಸ್ವಂ ಜಲದಾ ಹಿತ್ವಾ ವಿರೇಜುಃ ಶುಭ್ರವರ್ಚಸಃ ।
ಯಥಾ ತ್ಯಕ್ತೈಷಣಾಃ ಶಾಂತಾ ಮುನಯೋ ಮುಕ್ತಕಿಲ್ಬಿಷಾಃ ॥ ೩೫ ॥

ಗಿರಯೋ ಮುಮುಚುಸ್ತೋಯಂ ಕ್ವಚಿನ್ನ ಮುಮುಚುಃ ಶಿವಮ್ ।
ಯಥಾ ಜ್ಞಾನಾಮೃತಂ ಕಾಲೇ ಜ್ಞಾನಿನೋ ದದತೇ ನ ವಾ ॥ ೩೬ ॥

ನೈವಾವಿದನ್ ಕ್ಷೀಯಮಾಣಂ ಜಲಂ ಗಾಧಜಲೇಚರಾಃ ।
ಯಥಾಽಽಯುರನ್ವಹಂ ಕ್ಷಯ್ಯಂ ನರಾ ಮೂಢಾಃ ಕುಟುಂಬಿನಃ ॥ ೩೭ ॥

ಗಾಧವಾರಿಚರಾಸ್ತಾಪಮವಿಂದನ್ ಶರದರ್ಕಜಮ್ ।
ಯಥಾ ದರಿದ್ರಃ ಕೃಪಣಃ ಕುಟುಂಬ್ಯವಿಜಿತೇಂದ್ರಿಯಃ ॥ ೩೮ ॥

ಶನೈಃ ಶನೈರ್ಜಹುಃ ಪಂಕಂ ಸ್ಥಲಾನ್ಯಾಮಂ ಚ ವೀರುಧಃ ।
ಯಥಾಹಂಮಮತಾಂ ಧೀರಾಃ ಶರೀರಾದಿಷ್ವನಾತ್ಮಸು ॥ ೩೯ ॥

ನಿಶ್ಚಲಾಂಬುರಭೂತ್ತೂಷ್ಣೀಂ ಸಮುದ್ರಃ ಶರದಾಗಮೇ ।
ಆತ್ಮನ್ಯುಪರತೇ ಸಮ್ಯಙ್ಮುನಿರ್ವ್ಯುಪರತಾಗಮಃ ॥ ೪೦ ॥

ಕೇದಾರೇಭ್ಯಸ್ತ್ವಪೋಽಗೃಹ್ಣನ್ ಕರ್ಷಕಾ ದೃಢಸೇತುಭಿಃ ।
ಯಥಾ ಪ್ರಾಣೈಃ ಸ್ರವಜ್ಜ್ಞಾನಂ ತನ್ನಿರೋಧೇನ ಯೋಗಿನಃ ॥ ೪೧ ॥

ಯೋಗಭ್ರಷ್ಟನಾದವನ ಚಿತ್ತವು ಪುನಃ ಯೋಗಾಭ್ಯಾಸಮಾಡುವುದರಿಂದ ನಿರ್ಮಲವಾಗುವಂತೆ, ಸರೋವರಗಳಲ್ಲಿ ಪುನಃ ಕಮಲಗಳು ಅರಳಿ, ಜಲಾಶಯಗಳ ನೀರು ತನ್ನ ಸಹಜವಾದ ಸ್ವಚ್ಛತೆಯನ್ನು ಪಡೆದುಕೊಂಡಿತು. ॥ ೩೩ ॥ ಭಗವಂತನ ಅನನ್ಯ ಭಕ್ತಿಯು ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ ಮತ್ತು ಸಂನ್ಯಾಸಿ ಇವರ ಎಲ್ಲರ ರೀತಿಯ ಕಷ್ಟ ಮತ್ತು ಅಶುಭಗಳನ್ನು ನಾಶಮಾಡಿಬಿಡುವಂತೆಯೇ, ಶರದೃತುವು ಆಕಾಶವನ್ನು ಮೋಡಗಳಿಂದಲೂ, ವರ್ಷಾಕಾಲದಲ್ಲಿ ಬೆಳೆದ ಜೀವ-ಜಂತುಗಳನ್ನು, ಭೂಮಿಯಲ್ಲಿ ಇರುವ ಕೆಸರನ್ನು, ನೀರಿನ ಕೊಳೆಯನ್ನು ನಾಶಮಾಡಿಬಿಟ್ಟಿತು. ॥ ೩೪ ॥ ಪುತ್ರೇಷಣ, ವಿತ್ತೇಷಣ ಮತ್ತು ದಾರೇಷಣಗಳೆಂಬ ಈಷಣತ್ರಯಗಳನ್ನು ಪರಿತ್ಯಾಗ ಮಾಡಿ, ಕಾಮಕ್ರೋಧಾದಿಗಳನ್ನು ದೂರಿಕರಿಸಿ, ಪಾಪರಹಿತರಾಗಿ ಶುದ್ಧಾತ್ಮರಾದ ಬ್ರಹ್ಮಜ್ಞಾನಿಗಳಂತೆ, ಮೋಡಗಳು ತಮ್ಮಲ್ಲಿದ್ದ ನೀರೆಲ್ಲವನ್ನೂ ದಾನಮಾಡಿ ಪರಿಶುದ್ಧವಾದ ತೇಜಸ್ಸಿನಿಂದ ಕಂಗೊಳಿಸಿದವು. ॥ ೩೫ ॥ ಜ್ಞಾನಿಗಳಾದವರು ಜ್ಞಾನಾಮೃತವನ್ನು ಕೆಲವು ವೇಳೆ ಕೆಲವರಿಗೆ ಅನುಗ್ರಹಿಸುವಂತೆ ಮತ್ತೆ ಕೆಲವರಿಗೆ ಅನುಗ್ರಹಿಸದೆಯೂ ಇರುವಂತೆ, ವರ್ಷಾಕಾಲದಲ್ಲಿ ತುಂಬಿ ಹರಿಯುತ್ತಿದ್ದ ಗಿರಿನದಿಗಳು ಶರತ್ಕಾಲದಲ್ಲಿ ಅಮೃತಪ್ರಾಯವಾದ ನೀರಿನಿಂದ ಕೂಡಿ ಹರಿಯುತ್ತಿದ್ದರೆ, ಕೆಲವು ವೇಳೆ ಬತ್ತಿಹೋಗುತ್ತಿದ್ದವು. ॥ ೩೬ ॥ ಕುಟುಂಬ ಪೋಷಣೆಯಲ್ಲೇ ಮೈಮರೆತ ಮೂಢಜನರು ತಮ್ಮ ಆಯುಸ್ಸು ಕ್ಷಣ-ಕ್ಷಣೇ ಕ್ಷೀಣವಾಗುತ್ತಿರುವುದನ್ನು ತಿಳಿಯಲಾರರು. ಅಂತೆಯೇ ಆಳವಿಲ್ಲದ ಜಲಾಶಯದಲ್ಲಿ ವಾಸಮಾಡುವ ಜಲಚರಗಳು ಜಲಾಶಯದ ನೀರು ದಿನೇ-ದಿನೇ ಬತ್ತಿಹೋಗುತ್ತಿರುವುದನ್ನು ತಿಳಿಯುವುದಿಲ್ಲ. ॥ ೩೭ ॥ ಇಂದ್ರಿಯಗಳಿಗೆ ವಶನಾದ ಕೃಪಣ, ದರಿದ್ರನು ಕುಟುಂಬದ ನಾನಾ ರೀತಿಯ ತಾಪಗಳಿಂದ ಪರಿತಪಿಸುವಂತೆ, ಆಳವಿಲ್ಲದ ನೀರಿನಲ್ಲಿ ವಾಸಿಸುವ ಜಲಚರಗಳು ಶರತ್ಕಾಲದ ಪ್ರಖರ ಸೂರ್ಯನ ತಾಪದಿಂದ ಪರಿತಪಿಸತೊಡಗಿದವು. ॥ ೩೮ ॥ ವಿವೇಕ ಸಂಪನ್ನನಾದ ಸಾಧಕನು ನಿಧಾನವಾಗಿ ಶರೀರವೇ ಮುಂತಾದ ಅನಾತ್ಮ ವಸ್ತುಗಳಲ್ಲಿದ್ದ 'ನಾನು', 'ನನ್ನದು' ಎಂಬ ಅಹಂತೆ, ಮಮತೆಗಳನ್ನು ತೊರೆಯುವಂತೆ, ಶರತ್ಕಾಲದಲ್ಲಿ ಭೂಮಿಯು ಕೆಸರನ್ನೂ ತೊರೆದು, ಔಷಧಿ ಲತೆಗಳು ಪರಿಪಕ್ವವಾಗುತ್ತವೆ. ॥ ೩೯ ॥ ಮನಸ್ಸು ನಿಃಸಂಕಲ್ಪವಾದಾಗ ಆತ್ಮಾರಾಮನಾದ ಪುರುಷನು ಕರ್ಮಕಾಂಡದ ಜಂಜಾಟದಿಂದ ದೂರವಾಗಿ ಶಾಂತನಾಗುವಂತೆ, ಶರತ್ಕಾಲದಲ್ಲಿ ಸಮುದ್ರವು ಯಾವುದೇ ಕ್ಷುಬ್ಧತೆಯೂ ಇಲ್ಲದೆ ಗಂಭೀರವಾಗಿಯೂ, ಶಾಂತವಾಗಿಯೂ, ಸ್ಥಿರವಾಯಿತು. ॥ ೪೦ ॥ ಯೋಗಿಗಳಾದವರು ಪ್ರತ್ಯಾಹಾರದ ಮೂಲಕ ಮನಸ್ಸು ಮತ್ತು ಇಂದ್ರಿಯಗಳನ್ನು ವಿಷಯಗಳಿಂದ ತಡೆದು ನಿಲ್ಲಿಸಿ, ಜ್ಞಾನವನ್ನು ರಕ್ಷಿಸಿಕೊಳ್ಳುವರೋ, ಹಾಗೆಯೇ ರೈತರು ಶರತ್ಕಾಲದಲ್ಲಿ ಗದ್ದೆಗಳಿಗೆ ಬಲವಾದ ಬದುಗಳನ್ನು ಕಟ್ಟಿ ಸೋರಿಹೋಗುವ ನೀರನ್ನು ತಡೆಯುತ್ತಿದ್ದರು. ॥ ೪೧ ॥

ಶರದರ್ಕಾಂಶುಜಾಂಸ್ತಾಪಾನ್ಭೂತಾ ನಾಮುಡುಪೋಽಹರತ್ ।
ದೇಹಾಭಿಮಾನಜಂ ಬೋಧೋ ಮುಕುಂದೋ ವ್ರಜಯೋಷಿತಾಮ್
॥ ೪೨ ॥

ಖಮಶೋಭತ ನಿರ್ಮೇಘಂ ಶರದ್ವಿಮಲತಾರಕಮ್ ।
ಸತ್ತ್ವಯುಕ್ತಂ ಯಥಾ ಚಿತ್ತಂ ಶಬ್ದಬ್ರಹ್ಮಾರ್ಥದರ್ಶನಮ್
॥ ೪೩ ॥

ಅಖಂಡಮಂಡಲೋ ವ್ಯೋಮ್ನಿ ರರಾಜೋಡುಗಣೈಃ ಶಶೀ ।
ಯಥಾ ಯದುಪತಿಃ ಕೃಷ್ಣೋ ವೃಷ್ಣಿಚಕ್ರಾವೃತೋ ಭುವಿ
॥ ೪೪ ॥

ಆಶ್ಲಿಷ್ಯ ಸಮಶೀತೋಷ್ಣಂ ಪ್ರಸೂನವನಮಾರುತಮ್ ।
ಜನಾಸ್ತಾಪಂ ಜಹುರ್ಗೋಪ್ಯೋ ನ ಕೃಷ್ಣಹೃತಚೇತಸಃ
॥ ೪೫ ॥

ಗಾವೋ ಮೃಗಾಃ ಖಗಾ ನಾರ್ಯಃ ಪುಷ್ಪಿಣ್ಯಃ ಶರದಾಭವನ್ ।
ಅನ್ವೀಯಮಾನಾಃ ಸ್ವವೃಷೈಃ ಫಲೈರೀಶಕ್ರಿಯಾ ಇವ
॥ ೪೬ ॥

ಉದಹೃಷ್ಯನ್ವಾರಿಜಾನಿ ಸೂರ್ಯೋತ್ಥಾನೇ ಕುಮುದ್ವಿನಾ ।
ರಾಜ್ಞಾ ತು ನಿರ್ಭಯಾ ಲೋಕಾ ಯಥಾ ದಸ್ಯೂನ್ವಿನಾ ನೃಪ
॥ ೪೭ ॥

ಪುರಗ್ರಾಮೇಷ್ವಾಗ್ರಯಣೈರೈಂದ್ರಿಯೈಶ್ಚ ಮಹೋತ್ಸವೈಃ ।
ಬಭೌ ಭೂಃ ಪಕ್ವಸಸ್ಯಾಢ್ಯಾ ಕಲಾಭ್ಯಾಂ ನಿತರಾಂ ಹರೇಃ
॥ ೪೮ ॥

ವಣಿಙ್ಮುನಿನೃಪಸ್ನಾತಾ ನಿರ್ಗಮ್ಯಾರ್ಥಾನ್ಪ್ರಪೇದಿರೇ ।
ವರ್ಷರುದ್ಧಾ ಯಥಾ ಸಿದ್ಧಾಃ ಸ್ವಪಿಂಡಾನ್ಕಾಲ ಆಗತೇ
॥ ೪೯ ॥

ದೇಹಾಭಿಮಾನದಿಂದ ಉಂಟಾದ ಅಜ್ಞಾನವನ್ನು ಜ್ಞಾನವು ಹೋಗಲಾಡಿಸುವಂತೆಯೂ, ಗೋಪಿಯರ ವಿರಹತಾಪವನ್ನು ಶ್ರೀಕೃಷ್ಣನು ಹೋಗಲಾಡಿಸುವಂತೆಯೇ, ಶರತ್ಕಾಲದ ಸೂರ್ಯನ ಪ್ರಖರ ಕಿರಣಗಳಿಂದ ಪ್ರಾಣಿಗಳಿಗೆ ಉಂಟಾದ ತಾಪವನ್ನು ಶರಚ್ಚಂದ್ರನು ರಾತ್ರಿಯಲ್ಲಿ ಪರಿಹರಿಸುತ್ತಾನೆ. ॥ ೪೨ ॥ ವೇದಗಳ ಅರ್ಥವನ್ನು ಸ್ಪಷ್ಟವಾಗಿ ತಿಳಿದಿರುವ ಸತ್ತ್ವಗುಣಿಯ ಚಿತ್ತವು ಅತ್ಯಂತ ಶೋಭಾಯಮಾನವಾಗಿರುವಂತೆ, ಶರದೃತುವಿನ ರಾತ್ರೆಯಲ್ಲಿ ಮೇಘರಹಿತವಾದ ನಿರ್ಮಲ ಆಕಾಶವು ತಾರೆಗಳ ಜ್ಯೋತಿಗಳಿಂದ ಬೆಳಗುತ್ತಿರುತ್ತದೆ. ॥ ೪೩ ॥ ಪರೀಕ್ಷಿತನೇ! ಭೂಮಂಡಲದಲ್ಲಿ ಯದುವಂಶೀಯರಲ್ಲಿ ಯದುಪತಿ ಭಗವಾನ್ ಶ್ರೀಕೃಷ್ಣನು ಶೋಭಿಸುತ್ತಿರುವಂತೆಯೇ, ಆಕಾಶದಲ್ಲಿ ತಾರೆಗಳಿಂದ ಕೂಡಿದ ಚಂದ್ರನು ಶೋಭಿಸತೊಡಗಿದನು. ॥ ೪೪ ॥ ವಿಕಸಿತವಾದ ವನ ಕುಸುಮಗಳನ್ನು ಆಲಂಗಿಸಿಕೊಂಡು ಮೆಲ್ಲ-ಮೆಲ್ಲನೇ ಮತ್ತು ಸಮಶೀತೋಷ್ಣವಾಗಿ ಬೀಸುತ್ತಿದ್ದ ಮಾರುತವು ಸಮಸ್ತ ಜನರ ತಾಪವನ್ನು ಪರಿಹರಿಸುತ್ತಿತ್ತು. ಗೋಪಿಯರ ವಿರಹತಾಪವನ್ನು ಮಾತ್ರ ಪರಿಹರಿಸಲು ಸಮರ್ಥವಾಗಲಿಲ್ಲ, ಅವರ ಮನಸ್ಸುಗಳನ್ನು ಶ್ರೀಕೃಷ್ಣನೇ ಅಪಹರಿಸಿ ಬಿಟ್ಟಿದ್ದನು. ॥ ೪೫ ॥ ಸಮರ್ಥರಾದವರಿಂದ ಮಾಡಲ್ಪಡುವ ಕ್ರಿಯೆಗಳನ್ನು ಫಲಗಳು ಅನುಸರಿಸುವವಂತೆ, ಶರತ್ಕಾಲದಲ್ಲಿ ಹಸುಗಳೂ, ಜಿಂಕೆಗಳೂ, ಪಕ್ಷಿಗಳೂ, ಹೆಂಗಸರೂ, ಋತುಮತಿಯರೂ-ಸಂತಾನೋತ್ಪತ್ತಿಯ ಕಾಮನೆಯಿಂದ ಕೂಡಿ ಹೋರಿಗಳನ್ನು, ಗಂಡುಪಕ್ಷಿಗಳನ್ನು, ಗಂಡಸರನ್ನೂ ಅನುಸರಿಸಿದವು. ॥ ೪೬ ॥ ಪರೀಕ್ಷಿತನೇ! ರಾಜನ ಶುಭಾಗಮನದಿಂದ ಕಳ್ಳರನ್ನು ಬಿಟ್ಟು ಉಳಿದವರೆಲ್ಲರೂ ನಿರ್ಭಯರಾಗುವಂತೆಯೇ, ಸೂರ್ಯೋದಯದಿಂದ ಕನ್ನೈದಿಲೆಗಳನ್ನು ಬಿಟ್ಟು ಉಳಿದ ಕಮಲವೇ ಮುಂತಾದ ಪುಷ್ಪಗಳು ವಿಕಸಿತವಾಗುತ್ತವೆ. ॥ ೪೭ ॥ ಶರತ್ಕಾಲದಲ್ಲಿ ದೊಡ್ಡ-ದೊಡ್ಡ ಪಟ್ಟಣಗಳಲ್ಲಿಯೂ, ಹಳ್ಳಿಗಳಲ್ಲಿಯೂ ಆಗ್ರಾಯಣವೂ (ನವಾನ್ನಪ್ರಾಶನ), ಇಂದ್ರನ ಸಂಬಂಧವಾದ ಉತ್ಸವಗಳು ನಡೆಯ ತೊಡಗಿದವು. ಮಾಗಿನಿಂತ ಬೆಳೆಗಳಿಂದ ಭೂಮಿಯು ಸಂಪನ್ನವಾಗಿತ್ತು ಮತ್ತು ಭಗವಾನ್ ಶ್ರೀಕೃಷ್ಣನ ಹಾಗೂ ಬಲರಾಮನ ಉಪಸ್ಥಿತಿಯಲ್ಲಿ ಭೂಮಂಡಲವು ಅತ್ಯಂತ ಶೋಭಿಸ ತೊಡಗಿತು. ॥ ೪೮ ॥ ಸಾಧಕರು ತಮ್ಮ ಯೋಗ ಸಾಧನೆಗಳಿಂದ ಕಾಲಾನುಕ್ರಮವಾಗಿ ದಿವ್ಯಶರೀರಗಳನ್ನು ಪಡೆದುಕೊಳ್ಳುವಂತೆ, ವರ್ಷಾಕಾಲದಲ್ಲಿ ಒಂದೇ ಸ್ಥಳದಲ್ಲಿ ನೆಲೆಸಿದ್ದ ವೈಶ್ಯರು, ರಾಜರು, ಸಂನ್ಯಾಸಿಗಳು ಮತ್ತು ಸ್ನಾತಕರು ಶರತ್ಕಾಲವು ಪ್ರಾರಂಭ ವಾಗುತ್ತಲೇ ಸ್ವೇಚ್ಛೆಯಿಂದ ತಮ್ಮ-ತಮ್ಮ ಕಾರ್ಯಗಳಲ್ಲಿ ತೊಡಗಿದರು. ॥ ೪೯ ॥

ಇಪ್ಪತ್ತನೆಯ ಅಧ್ಯಾಯವು ಮುಗಿಯಿತು. ॥ ೨೦ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಪ್ರಾವೃಟ್ಶರದ್ವರ್ಣನಂ ನಾಮ ವಿಂಶೋಽಧ್ಯಾಯಃ ॥ ೨೦ ॥

# ಇಪ್ಪತ್ತೊಂದನೆಯ ಅಧ್ಯಾಯ

## ವೇಣುಗೀತೆ

*ಶ್ರೀಶುಕ ಉವಾಚ*

**ಇತ್ಥಂ ಶರತ್ಸ್ವಚ್ಛಜಲಂ ಪದ್ಮಾಕರಸುಗಂಧಿನಾ ।**
**ನ್ಯವಿಶದ್ವಾಯುನಾ ವಾತಂ ಸಗೋಗೋಪಾಲಕೋಽಚ್ಯುತಃ ॥ ೧ ॥**

**ಕುಸುಮಿತವನರಾಜಿಶುಷ್ಮಿಭೃಂಗ-**
**ದ್ವಿಜಕುಲಘುಷ್ಟಸರಃಸರಿನ್ಮಹೀಧ್ರಮ್ ।**
**ಮಧುಪತಿರವಗಾಹ್ಯ ಚಾರಯನ್ಗಾಃ**
**ಸಹಪಶುಪಾಲಬಲಶ್ಚುಕೂಜ ವೇಣುಮ್ ॥ ೨ ॥**

**ತದ್ವ್ರಜಸ್ತ್ರಿಯ ಆಶ್ರುತ್ಯ ವೇಣುಗೀತಂ ಸ್ಮರೋದಯಮ್ ।**
**ಕಾಶ್ಚಿತ್ಪರೋಕ್ಷಂ ಕೃಷ್ಣಸ್ಯ ಸ್ವಸಖೀಭ್ಯೋಽನ್ವವರ್ಣಯನ್ ॥ ೩ ॥**

**ತದ್ವರ್ಣಯಿತುಮಾರಬ್ಧಾಃ ಸ್ಮರಂತ್ಯಃ ಕೃಷ್ಣಚೇಷ್ಟಿತಮ್ ।**
**ನಾಶಕನ್ಸ್ಮರವೇಗೇನ ವಿಕ್ಷಿಪ್ತಮನಸೋ ನೃಪ ॥ ೪ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಶರತ್ಕಾಲದಲ್ಲಿ ಆ ವೃಂದಾವನವು ಬಹಳ ಸುಂದರವಾಗಿ ಕಾಣುತ್ತಿತ್ತು. ನೀರು ನಿರ್ಮಲವಾಗಿತ್ತು ಹಾಗೂ ಜಲಾಶಯಗಳಲ್ಲಿ ಅರಳಿದ ಕಮಲಗಳ ಸುಗಂಧವನ್ನು ಹೊತ್ತು ಮಂದಾನಿಲವು ಬೀಸುತ್ತಿತ್ತು. ಭಗವಾನ್ ಶ್ರೀಕೃಷ್ಣನು ಗೋವುಗಳ ಮತ್ತು ಗೋಪಾಲ ಬಾಲಕರೊಂದಿಗೆ ಆ ವನವನ್ನು ಪ್ರವೇಶಿಸಿದನು. ॥ ೧ ॥ ಸುಂದರ ವಾದ ಮತ್ತು ಸುಗಂಧಯುಕ್ತವಾದ ಪುಷ್ಪಗಳಿಂದ ಸಮಲಂಕೃತ ವಾಗಿದ್ದ ವೃಕ್ಷಗಳ ಸಾಲುಗಳಲ್ಲಿ ದುಂಬಿಗಳು ಝೇಂಕರಿಸುತ್ತಾ ಮಧುಪಾನಮಾಡುತ್ತಿದ್ದುವು. ಸರೋವರಗಳಲ್ಲಿಯೂ, ನದಿಯ ತೀರಗಳಲ್ಲಿಯೂ, ಪರ್ವತದ ತಪ್ಪಲುಗಳಲ್ಲಿಯೂ ನಾನಾ ವಿಧ ವಾದ ಪಕ್ಷಿಗಳು ಕುಳಿತು ಕಲಕಲ ನಿನಾದ ಮಾಡುತ್ತಿದ್ದವು. ಮಧುಪತಿಯಾದ ಶ್ರೀಕೃಷ್ಣನು ಬಲರಾಮನೊಡನೆ ಮತ್ತು ಗೊಲ್ಲ ಬಾಲಕರೊಂದಿಗೆ ವೃಂದಾವನವನ್ನು ಪ್ರವೇಶಿಸಿ ಹಸುಗಳನ್ನು ಮೇಯಿಸುತ್ತಾ ತನ್ನ ಕೊಳಲನ್ನು ಕರ್ಣಾನಂದಕರವಾಗಿ ನುಡಿಸ ತೊಡಗಿದನು. ॥ ೨ ॥ ಶ್ರೀಕೃಷ್ಣನ ಆ ವೇಣುಗಾನವು ಭಗವಂತನ ವಿಷಯದಲ್ಲಿ ಭಕ್ತಿಭಾವವನ್ನು, ಅವನನ್ನು ಸೇರಬೇಕೆಂಬ ಆಕಾಂಕ್ಷೆಯನ್ನು ಹುಟ್ಟಿಸುವುದಾಗಿತ್ತು. (ಅದನ್ನು ಕೇಳಿ ಗೋಪಿ ಯರ ಹೃದಯಗಳು ಪ್ರೇಮದಿಂದ ತುಂಬಿ ಹೋದುವು). ಅವರು ಏಕಾಂತದಲ್ಲಿ ಕಲೆತು ಸಖಿಯರೊಂದಿಗೆ ಶ್ರೀಕೃಷ್ಣನ ರೂಪ, ಗುಣ ಮತ್ತು ವೇಣುಗೀತದ ಮಾಧುರ್ಯ, ಪ್ರಭಾವವನ್ನು ವರ್ಣಿಸ ತೊಡಗಿದರು. ॥ ೩ ॥ ವ್ರಜದ ಗೋಪಿಯರು ವೇಣುಗಾನದ ಮಾಧುರ್ಯವನ್ನು ವರ್ಣಿಸಲು ಪ್ರಾರಂಭಿಸುತ್ತಿರುವಂತೆಯೇ ಅವರಿಗೆ ಕೊಳಲನ್ನು ನುಡಿಸುತ್ತಿದ್ದ ಶ್ರೀಕೃಷ್ಣನ ಸ್ಮರಣೆಯುಂಟಾಗಿ, ಅವನ ಕೆಂದುಟಿ, ಕುಡಿನೋಟ, ಸುಂದರವಾದ ಹುಬ್ಬುಗಳು, ಅವನ ತಲೆಯ ಮೇಲೆ ಬೆಳಗುತ್ತಿದ್ದ ನವಿಲುಗರಿ-ಗುಂಗುರು ಕೂದಲು, ಮುಗುಳ್ನಗೆ - ಇವೆಲ್ಲವೂ ಅವರ ಸ್ಮೃತಿಪಥದಲ್ಲಿ ಸುಳಿದು ಜಗದಾನಂದಕಂದನನ್ನು ಸೇರಬೇಕೆಂಬ ಕಾತರವು ಹೆಚ್ಚಾಯಿತು. ಅವರ ಮನಸ್ಸೆಲ್ಲವೂ ಶ್ರೀಕೃಷ್ಣನಲ್ಲಿಯೇ ಸೇರಿ ಹೋಗಿದ್ದಿತು. ವೇಣುಗಾನ ಮಾಧುರ್ಯದ ವರ್ಣನೆಯಲ್ಲಿ ಅವರೆಲ್ಲರೂ ಅಸಮರ್ಥರಾದರು. ಕೃಷ್ಣ ಪ್ರೇಮಿಗಳಾದ ಗೋಪಿ ಯರು ವ್ರಜದಲ್ಲೇ ಇದ್ದುಕೊಂಡು ಶ್ರೀಕೃಷ್ಣನ ಚಿತ್ರವನ್ನು ತಮ್ಮ ಹೃದಯದಲ್ಲಿ ನೋಡತೊಡಗಿದರು. ॥ ೪ ॥ ಶ್ರೀಕೃಷ್ಣನು ಗೊಲ್ಲಬಾಲಕರೊಂದಿಗೆ ವೃಂದಾವನವನ್ನು ಪ್ರವೇಶಿಸುತ್ತಿದ್ದಾನೆ. ಅವನ ತಲೆಯು ಮೇಲೆ ಮಯೂರ ಪಿಚ್ಛಗಳಿವೆ. ಕಿವಿಗಳು ಕರ್ಣಿಕಾರ ಪುಷ್ಪಗಳಿಂದ ಅಲಂಕೃತವಾಗಿದ್ದವು, ಹೊಂಬಣ್ಣದ ಪೀತಾಂಬರವನ್ನು ಉಟ್ಟಿರುವನು. ಅವನ ಕುತ್ತಿಗೆಯಲ್ಲಿ ಐದು ಪ್ರಕಾರದ ಸುಗಂಧಿತ ಪುಷ್ಪಗಳಿಂದ ಪೋಣಿಸಿದ ವೈಜಯಂತೀ ಮಾಲೆಯಿದೆ. ಸುಂದರವಾದ ವಸ್ತ್ರಗಳನ್ನು ಧರಿಸಿ ನಾಟಕವಾಡಲು

ಬರ್ಹಾಪೀಡಂ ನಟವರವಪುಃ ಕರ್ಣಯೋಃ ಕರ್ಣಿಕಾರಂ
ಬಿಭ್ರದ್ವಾಸಃ ಕನಕಕಪಿಶಂ ವೈಜಯಂತೀಂ ಚ ಮಾಲಾಮ್ ।
ರಂಧ್ರಾನ್ವೇಣೋರಧರಸುಧಯಾ ಪೂರಯನ್ಗೋಪವೃಂದೈ-
ರ್ವೃಂದಾರಣ್ಯಂ ಸ್ವಪದರಮಣಂ ಪ್ರಾವಿಶದ್ಗೀತಕೀರ್ತಿಃ ॥ ೫ ॥

ಇತಿ ವೇಣುರವಂ ರಾಜನ್ಸರ್ವಭೂತಮನೋಹರಮ್ ।
ಶ್ರುತ್ವಾ ವ್ರಜಸ್ತ್ರಿಯಃ ಸರ್ವಾ ವರ್ಣಯಂತ್ಯೋಽಭಿರೇಭಿರೇ ॥ ೬ ॥

*ಗೋಪ್ಯ ಊಚುಃ*

ಅಕ್ಷಣ್ವತಾಂ ಫಲಮಿದಂ ನ ಪರಂ ವಿದಾಮಃ
ಸಖ್ಯಃ ಪಶೂನನು ವಿವೇಶಯತೋರ್ವಯಸ್ಯೈಃ ।
ವಕ್ತ್ರಂ ವ್ರಜೇಶಸುತಯೋರನುವೇಣು ಜುಷ್ಟಂ
ಯೈರ್ವಾ ನಿಪೀತಮನುರಕ್ತಕಟಾಕ್ಷಮೋಕ್ಷಮ್ ॥ ೭ ॥

ಚೂತಪ್ರವಾಲಬರ್ಹಸ್ತಬಕೋತ್ಪಲಾಬ್ಜ-
ಮಾಲಾನುಪೃಕ್ತಪರಿಧಾನವಿಚಿತ್ರವೇಷೌ ।
ಮಧ್ಯೇ ವಿರೇಜತುರಲಂ ಪಶುಪಾಲಗೋಷ್ಠ್ಯಾಂ
ರಂಗೇ ಯಥಾ ನಟವರೌ ಕ್ವಚ ಗಾಯಮಾನೌ ॥ ೮ ॥

ಗೋಪ್ಯಃ ಕಿಮಾಚರದಯಂ ಕುಶಲಂ ಸ್ಮ ವೇಣು-
ರ್ದಾಮೋದರಾಧರಸುಧಾಮಪಿ ಗೋಪಿಕಾನಾಮ್ ।
ಭುಂಕ್ತೇ ಸ್ವಯಂ ಯದವಶಿಷ್ಟರಸಂ ಹ್ರದಿನ್ಯೋ
ಹೃಷ್ಯತ್ತ್ವಚೋಽಶ್ರು ಮುಮುಚುಸ್ತರವೋ ಯಥಾಽಽರ್ಯಾಃ ॥ ೯ ॥

ಸಿದ್ಧನಾದ ನಟನಂತೆ ಕಾಣುತ್ತಿದ್ದಾನೆ. ಕೊಳಲಿನ ರಂಧ್ರಗಳಲ್ಲಿ ತನ್ನ ಅಧರಾಮೃತವನ್ನು ತುಂಬುತ್ತಿರುವನು. ಅವನ ಕೀರ್ತಿಯನ್ನು ಹಾಡುತ್ತಾ ಗೋಪಬಾಲಕರು ಹಿಂದೆ-ಹಿಂದೆ ನಡೆಯುತ್ತಿದ್ದಾರೆ. ಹೀಗೆ ವೈಕುಂಠಕ್ಕಿಂತಲೂ ಶ್ರೇಷ್ಠವಾದ ವೃಂದಾವನವನ್ನು ತನ್ನ ಚರಣಕಮಲಗಳ ಚಿಹ್ನೆಯಿಂದ ಮತ್ತಷ್ಟು ರಮಣೀಯವನ್ನಾಗಿಸುತ್ತಾ ಮುನ್ನಡೆಯುತ್ತಿದ್ದಾನೆ. ॥ ೫ ॥ ಪರೀಕ್ಷಿತನೆ ! ಈ ಮುರಲಿಯ ದನಿಯು ಜಡ-ಚೇತನ ಸಮಸ್ತ ಪ್ರಾಣಿಗಳ ಚಿತ್ತವನ್ನು ಅಪಹರಿಸುತ್ತಿತ್ತು. ಗೋಪಿಯರು ಅದನ್ನು ಕೇಳಿದರು ಹಾಗೂ ಕೇಳಿ ಅದನ್ನು ವರ್ಣಿಸತೊಡಗಿದರು. ವರ್ಣನೆ ಮಾಡುತ್ತಾ-ಮಾಡುತ್ತಾ ಅವರು ತನ್ಮಯ ಮನಸ್ಸಿನಲ್ಲೇ ಶ್ರೀಕೃಷ್ಣನ ಸಾನ್ನಿಧ್ಯದ ಅನುಭವವನ್ನು ಪಡೆದುಕೊಂಡು ಆಲಿಂಗಿಸಿಕೊಂಡರು. ॥ ೬ ॥

**ಗೋಪಿಯರು ಪರಸ್ಪರ ಆಡಿಕೊಳ್ಳುವರು** – ಓರ್ವ ಗೋಪಿಯು ಹೇಳುತ್ತಾಳೆ – ಸಖಿಯರೇ ! ಶ್ಯಾಮಸುಂದರ ಶ್ರೀಕೃಷ್ಣ ಮತ್ತು ಗೌರಸುಂದರ ಬಲರಾಮನು ಗೊಲ್ಲಬಾಲಕರೊಂದಿಗೆ ಹಸುಗಳನ್ನು ಅಟ್ಟಿಕೊಂಡು ವ್ರಜದಿಂದ ವೃಂದಾವನಕ್ಕೆ ಹೋಗುವಾಗ, ವ್ರಜಕ್ಕೆ ಬರುವಾಗ ಕೊಳಲಿನಿಂದ ಸಮಲಂಕೃತವಾದ ಅವರ ಮುದ್ದು ಮುಖದಿಂದ ಮತ್ತು ಪ್ರೇಮಪೂರ್ಣವಾದ ಓರೆನೋಟದಿಂದ ನಮ್ಮನ್ನು ನೋಡುತ್ತಿರುವಾಗ, ನಾವು ಅವರ ಆ ಮಧುರ ಮುಖಾರವಿಂದದ ಸವಿಯನ್ನು ಕಣ್ಣುಗಳಿಂದಲೇ ಪಾನಮಾಡುತ್ತೇವಲ್ಲ! ಕಣ್ಣುಗಳನ್ನು ಪಡೆದ ಜೀವರ, ಕಣ್ಣುಗಳ ಸಫಲತೆ ಇದೇಯಲ್ಲವೇ ? ಇದರಿಂದ ಬೇರೆಯಾದ ಪ್ರಯೋಜನ ಯಾವುದಿದೆ ? ॥ ೭ ॥ ಮತ್ತೊಬ್ಬಳು ಹೇಳಿದಳು – ಎಲೈ ಸಖಿಯೇ ! ಶ್ಯಾಮಸುಂದರನಾದ ಶ್ರೀಕೃಷ್ಣನು ಪೀತಾಂಬರವನ್ನು, ಗೌರಾಂಗನಾದ ಬಲರಾಮನು ನೀಲಾಂಬರವನ್ನು ಧರಿಸಿಕೊಂಡು, ವೃಂದಾವನದಲ್ಲಿ ಇವರು ಮಾವಿನ ಎಳೆಚಿಗುರು, ನವಿಲುಗರಿ, ಹೂವುಗಳ ಗೊಂಚಲು, ನೈದಿಲೆ-ತಾವರೆಗಳ ಹಾರಗಳು ಇವುಗಳಿಂದ ಸಿಂಗರಿಸಿಕೊಂಡು ವಿಚಿತ್ರವಾದ ವೇಷಗಳನ್ನು ಧರಿಸಿ ಗೋಪಾಲರ ನಡುವೆ ಹಾಡುಗಳನ್ನು ಹಾಡುತ್ತಾ ರಂಗಮಂಟಪದಲ್ಲಿ ನಟಿಸುವ ಶ್ರೇಷ್ಠರಾದ ನಟರಂತೆಯೇ ವಿರಾಜಿಸುತ್ತಾರೆ. ॥ ೮ ॥ ಇನ್ನೊಬ್ಬಳು ಹೇಳಿದಳು – ಎಲೈ ಗೋಪಿಯರೇ ! ಈ ಕೊಳಲಿನ ಭಾಗ್ಯವನ್ನಾದರೂ ನೋಡಿರಿ. ವೇಣುವು ಪುರುಷ ಜಾತಿಯದು. ಆದರೂ ಅದು ಹಿಂದಿನ ಜನ್ಮದಲ್ಲಿ ಎಂತಹ ಪುಣ್ಯ ಕಾರ್ಯಗಳನ್ನು, ತಪಸ್ಸನ್ನು ಆಚರಿಸಿದೆಯೋ ! ನಮಗೆ ಮಾತ್ರವೇ ಮೀಸಲೆಂದು ಭಾವಿಸಲಾಗಿದ್ದ ಮಾಧವನ ಅಧರಾಮೃತವನ್ನು ನಮಗೆ ಸ್ವಲ್ಪವೂ ಉಳಿಯದಂತೆ ಪಾನಮಾಡಿಬಿಡುತ್ತದಲ್ಲ! ಈ ವೇಣುವನ್ನು ಬೆಳೆಸಿ ಪೋಷಿಸಿದ ಸರೋವರಗಳು, ವಿಕಸಿತವಾದ ಕಮಲಗಳ ಮೂಲಕ ತಮಗಾದ ರೋಮಾಂಚನವನ್ನು ವ್ಯಕ್ತಪಡಿಸುತ್ತಿವೆ. ತಮ್ಮ ವಂಶದಲ್ಲಿ ಭಗವದ್ಭಕ್ತರು ಹುಟ್ಟಿದರೆ ಆನಂದಿಸುವಂತೆ ಬಿದಿರುಮೆಳೆಗಳು ತಮ್ಮ ವಂಶಕ್ಕೆ ಸೇರಿದ ವೇಣುವು ಶ್ರೀಕೃಷ್ಣನ ಅಧರಾಮೃತವನ್ನು ಪಾನಮಾಡುತ್ತಿರುವುದನ್ನು ನೋಡಿ ಹಿರಿ-ಹಿರಿ ಹಿಗ್ಗಿ ಆನಂದಾಶ್ರುಗಳನ್ನು ಸುರಿಸುತ್ತಿರುವವು. ॥ ೯ ॥

ವೃಂದಾವನಂ ಸಖಿ ಭುವೋ ವಿತನೋತಿ ಕೀರ್ತಿಂ
ಯದ್ದೇವಕೀಸುತಪದಾಂಬುಜಲಬ್ಧಲಕ್ಷ್ಮಿ ।

ಗೋವಿಂದ ವೇಣುಮನು ಮತ್ತಮಯೂರನೃತ್ಯಂ
ಪ್ರೇಕ್ಷ್ಯಾದ್ರಿಸಾನ್ವಪರತಾನ್ಯಸಮಸ್ತಸತ್ತ್ವಮ್ ॥ ೧೦ ॥

ಧನ್ಯಾಃ ಸ್ಮ ಮೂಢಮತಯೋಽಪಿ ಹರಿಣ್ಯ ಏತಾ
ಯಾ ನಂದನಂದನಮುಪಾತ್ತವಿಚಿತ್ರವೇಷಮ್ ।

ಆಕರ್ಣ್ಯ ವೇಣುರಣಿತಂ ಸಹಕೃಷ್ಣಸಾರಾಃ
ಪೂಜಾಂ ದಧುರ್ವಿರಚಿತಾಂ ಪ್ರಣಯಾವಲೋಕೈಃ ॥ ೧೧ ॥

ಕೃಷ್ಣಂ ನಿರೀಕ್ಷ್ಯ ವನಿತೋತ್ಸವರೂಪಶೀಲಂ
ಶ್ರುತ್ವಾ ಚ ತತ್ಕ್ವಣಿತವೇಣುವಿಚಿತ್ರಗೀತಮ್ ।

ದೇವ್ಯೋ ವಿಮಾನಗತಯಃ ಸ್ಮರನುನ್ನಸಾರಾ
ಭ್ರಶ್ಯತ್ಪ್ರಸೂನಕಬರಾ ಮುಮುಹುರ್ವಿನೀವ್ಯಃ ॥ ೧೨ ॥

ಗಾವಶ್ಚ ಕೃಷ್ಣಮುಖನಿರ್ಗತವೇಣುಗೀತ-
ಪೀಯೂಷಮುತ್ತಭಿತಕರ್ಣಪುಟೈಃ ಪಿಬಂತ್ಯಃ ।

ಶಾವಾಃ ಸ್ನುತಸ್ತನಪಯಃಕವಲಾಃ ಸ್ಮ ತಸ್ಥು-
ರ್ಗೋವಿಂದಮಾತ್ಮನಿ ದೃಶಾಶ್ರುಕಲಾಃ ಸ್ಪೃಶಂತ್ಯಃ ॥ ೧೩ ॥

ಮತ್ತೊಬ್ಬಳು ಹೇಳುವಳು – ಓ ಸಖಿಯರೇ ! ಈ ವೃಂದಾವನವು ಯಶೋದಾನಂದನ ಶ್ರೀಕೃಷ್ಣನ ಚರಣಕಮಲಗಳ ಚಿಹ್ನೆಯನ್ನು ಹೊಂದಿ ಈ ಭೂಲೋಕದ ಕೀರ್ತಿಯು ವೈಕುಂಠದವರೆಗೂ ಹರಡಿದೆ. ಸಖೀ ! ಶ್ರೀಕೃಷ್ಣನು ಮುನಿಜನರನ್ನು ವಿಮೋಹಗೊಳಿಸುವ ಮುರಲಿಯನ್ನು ನುಡಿಸುವಾಗ ನವಿಲುಗಳು ಮದವೇರಿ ನರ್ತಿಸತೊಡಗುವವು. ಇದನ್ನು ನೋಡಿದೊಡನೆ ಪರ್ವತದ ತಪ್ಪಲುಗಳಲ್ಲಿ ಸಂಚರಿಸುವ ಪಶು-ಪಕ್ಷಿಗಳೆಲ್ಲವೂ ಮೇಯುವುದನ್ನು ಬಿಟ್ಟು ಶಾಂತವಾಗಿ ನಿಂತು ಬಿಡುವುವು. ಗೆಳತಿಯರೇ ! ಪ್ರಾಣವಲ್ಲಭನಾದ ಶ್ರೀಕೃಷ್ಣನು ವಿಚಿತ್ರವಾದ ವೇಷವನ್ನು ಧರಿಸಿಕೊಂಡು ಕೊಳಲನ್ನು ನುಡಿಸಲು ಪ್ರಾರಂಭಿಸುತ್ತಲೇ ಮಂದಮತಿಗಳಾಗಿದ್ದರೂ ಹೆಣ್ಣು ಜಿಂಕೆಗಳು ಮುರಳಿಯ ನಾದವನ್ನು ಕೇಳಿ ಪತಿಗಳಾದ ಕೃಷ್ಣಸಾರ ಮೃಗಗಳೊಂದಿಗೆ ನಂದನಂದನನ ಬಳಿಗೆ ಹೋಗಿ ಕಮಲದಂತೆ ವಿಶಾಲವಾದ ಮತ್ತು ಚಂಚಲವಾದ ಕಣ್ಣುಗಳ ಅವಲೋಕನದಿಂದಲೇ ಶ್ರೀಕೃಷ್ಣನನ್ನು ಪೂಜಿಸುತ್ತವೆ. ನಿಶ್ಚಯವಾಗಿಯೂ ಈ ಜಿಂಕೆಗಳ ಜೀವನವೇ ಧನ್ಯವಲ್ಲವೇ ! ॥ ೧೦-೧೧ ॥ ಇನ್ನೊಬ್ಬಳು ಹೇಳಿದಳು ಸಖಿಯರೇ ! ಜಿಂಕೆಗಳ ಮಾತಾದರೂ ಹಾಗಿರಲಿ. ಅತ್ತನೋಡಿ ! ವಿಮಾನದಲ್ಲಿ ಸಂಚರಿಸುವ ಅಪ್ಸರೆಯರು – ಕಾಮಿನಿಯರ ಕಣ್ಮನಗಳನ್ನು ಸೂರೆಗೊಳ್ಳುವ ಸೌಂದರ್ಯದಿಂದಲೂ, ಸೌಶೀಲ್ಯದಿಂದಲೂ ಕೂಡಿದ ಶ್ರೀಕೃಷ್ಣನನ್ನು ನೋಡಿ, ವೇಣುವಿನಿಂದ ಅವನು ನುಡಿಸುವ ಸುಮಧುರ ಸಂಗೀತವನ್ನು ಕೇಳಿ, ಕಾಮಾವೇಶದಿಂದ ಧೈರ್ಯಗುಂದಿ ತುರುಬುಗಳಿಂದ ಹೂವಿನ ಮಾಲೆಗಳು ಜಾರುತ್ತಿರುವುದನ್ನು, ಉಟ್ಟಸೀರೆಗಳು ಸಡಿಲವಾಗುತ್ತಿರುವುದನ್ನು ಅರಿಯದೆ ವಿಮೋಹಿತರಾಗಿದ್ದಾರೆ. ॥ ೧೨ ॥ ಮಗದೊಬ್ಬಳು ಹೇಳಿದಳು – ಗೆಳತಿಯರೇ ! ಅಪ್ಸರೆಯರ ವಿಷಯವನ್ನು ಏನು ಹೇಳುವಿರಿ ? ಮಾತಿಲ್ಲದ ಗೋವುಗಳ ವರ್ತನೆಯನ್ನಾದರೂ ನೋಡಿರಲ್ಲ ! ಶ್ರೀಕೃಷ್ಣನ ಮುಖಾರವಿಂದದಿಂದ ಹೊರಟ ವೇಣುಗಾನ ಸುಧೆಯನ್ನು ಕೇಳಿದೊಡನೆಯೇ ನಮ್ಮ ಗೋವುಗಳು ತಮ್ಮೆರಡು ಕಿವಿಗಳನ್ನು ನಿಮಿರಿಸಿಕೊಂಡು, ಕಿವಿಗಳನ್ನೇ ಬೊಗಸೆಗಳನ್ನಾಗಿಸಿಕೊಂಡು ಗಾನಾಮೃತ ಸುಧೆಯನ್ನು ಹೀರಿಕೊಳ್ಳುತ್ತವೆ. ತಮ್ಮ ಕಣ್ಣುಗಳ ಮೂಲಕವಾಗಿ ಶ್ಯಾಮಸುಂದರನನ್ನು ಹೃದಯದಲ್ಲಿರಿಸಿಕೊಂಡು ಆಲಿಂಗಿಸುತ್ತಾ ಆನಂದಬಾಷ್ಪಗಳನ್ನು ಸುರಿಸುತ್ತವೆ. ಹಸುಗಳ ಮೊಲೆಯುಣ್ಣುತ್ತಿರುವ ಎಳೆಗರುಗಳೂ ಕೂಡ ಶ್ರೀಕೃಷ್ಣನ ವೇಣುಗಾನವನ್ನು ಕೇಳಿ ಬಾಯಲ್ಲಿರುವ ನೊರೆಹಾಲನ್ನು ಗುಟುಕಿಸದೆ ಸ್ತಬ್ಧವಾಗಿ ನಿಂತುಬಿಡುತ್ತವೆ. ಅವುಗಳ ಸೌಭಾಗ್ಯವು ಎಂತಹದು ! ॥ ೧೩ ॥ ಮತ್ತೊಬ್ಬಳು ಹೇಳಿದಳು – ಸಖಿಯರೇ ! ಹಸುಗಳು-ಕರುಗಳಾದರೋ ನಮ್ಮ ಮನೆಯವೇ ಆಗಿವೆ, ಅವರ ಮಾತನ್ನು ಬಿಟ್ಟು ಬಿಡಿ, ಆದರೆ ವೃಂದಾವನದಲ್ಲಿರುವ ಪಕ್ಷಿಗಳನ್ನು ನೋಡಿರಿ. ನಿಜಹೇಳಬೇಕಾದರೆ ಅವು ಪಕ್ಷಿಗಳಲ್ಲ, ಪಕ್ಷಿಗಳ ರೂಪದಲ್ಲಿ ಋಷಿ-ಮುನಿಗಳೇ ಅಲ್ಲಿದ್ದಾರೆ. ಸುಂದರವಾದ ಚಿಗುರೆಲೆಗಳಿಂದ ಕೂಡಿದ ವೃಕ್ಷಗಳ ರೆಂಬೆಗಳ ಮೇಲೆ ಕುಳಿತು – ವೃಂದಾವನದಲ್ಲಿ ಕೊಳಲನ್ನುನುಡಿಸಿಕೊಂಡು ಆಟವಾಡುವ ಸೌಂದರ್ಯದ ಖನಿಯಾದ ಶ್ರೀಕೃಷ್ಣನನ್ನೇ ಎವೆಯಿಕ್ಕದೆ

ಪ್ರಾಯೋ ಬತಾಂಬ ವಿಹಗಾ ಮುನಯೋ ವನೇಽಸ್ಮಿನ್
ಕೃಷ್ಣೇಕ್ಷಿತಂ ತದುದಿತಂ ಕಲವೇಣುಗೀತಮ್ ।

ಆರುಹ್ಯ ಯೇ ದ್ರುಮಭುಜಾನ್ರುಚಿರಪ್ರವಾಲಾನ್
ಶೃಣ್ವಂತ್ಯ ಮೀಲಿತದೃಶೋ ವಿಗತಾನ್ಯವಾಚಃ ॥ ೧೪ ॥

ನದ್ಯಸ್ತದಾ ತದುಪಧಾರ್ಯ ಮುಕುಂದಗೀತ-
ಮಾವರ್ತಲಕ್ಷಿತಮನೋಭವಭಗ್ನವೇಗಾಃ ।

ಆಲಿಂಗನಸ್ಥಗಿತಮೂರ್ಮಿಭುಜೈರ್ಮುರಾರೇ-
ರ್ಗೃಹ್ಣಂತಿ ಪಾದಯುಗಲಂ ಕಮಲೋಪಹಾರಾಃ ॥ ೧೫ ॥

ದೃಷ್ಟ್ವಾಽಽತಪೇ ವ್ರಜಪಶೂನ್ಸಹ ರಾಮಗೋಪೈಃ
ಸಂಚಾರಯಂತಮನು ವೇಣುಮುದೀರಯಂತಮ್ ।

ಪ್ರೇಮಪ್ರವೃದ್ಧ ಉದಿತಃ ಕುಸುಮಾವಲೀಭಿಃ
ಸಖ್ಯುರ್ವ್ಯಧಾತ್ ಸ್ವವಪುಷಾಂಬುದ ಆತಪತ್ರಮ್ ॥ ೧೬ ॥

ನೋಡುತ್ತಿರುತ್ತವೆ. ಅವು ಮುನಿಗಳೇ ಆಗಿರುವುದರಿಂದ ಬೇರೆ ಯಾವುದೇ ವಿಧವಾದ ಶಬ್ದವನ್ನು ಕೇಳದೆ ಶ್ರೀಕೃಷ್ಣನ ಸುಮಧುರವಾದ ವಾಣಿಯನ್ನು ತ್ರಿಭುವನ ಮೋಹಕವಾದ ವೇಣುಗಾನವನ್ನು ಮಾತ್ರವೇ ಕೇಳುತ್ತಿರುತ್ತವೆ. ಇಂತಹ ಪಕ್ಷಿಗಳಿಗಿಂತ ಧನ್ಯರಾದವರು ಬೇರೆ ಯಾರಿದ್ದಾರೆ ? ॥ ೧೪ ॥

ಮತ್ತೊಬ್ಬಳು ಹೇಳುತ್ತಾರೆ – ಎಲೈ ಸಖಿಯರೇ ! ಇಷ್ಟರವರೆಗೆ ನೀವೆಲ್ಲ ಗೋವುಗಳು, ಪಕ್ಷಿಗಳು, ಇವರ ಕುರಿತು ಮಾತನಾಡುತ್ತಿರುವಿರಿ. ಅವುಗಳಾದರೋ ಚೇತನವಾಗಿವೆ. ಈ ಜಡವಾದ ನದಿಗಳನ್ನಾದರೋ ನೋಡಿರಿ. ಇವುಗಳಲ್ಲಿ ಕಂಡುಬರುವ ಸುಳಿಗಳ ನೆಪದಿಂದ ಶ್ರೀಕೃಷ್ಣನನ್ನು ಸೇರಬೇಕೆಂಬ ತೀವ್ರವಾದ ಆಕಾಂಕ್ಷೆಯನ್ನು ವ್ಯಕ್ತಪಡಿಸುತ್ತಿವೆ. ಆದರಿಂದಲೇ ಪ್ರವಾಹದ ವೇಗವೂ ಕಡಿಮೆಯಾಗಿದೆ. ಇವುಗಳೂ ಕೂಡ ಪ್ರೇಮಸ್ವರೂಪನಾದ ಶ್ರೀಕೃಷ್ಣನ ವೇಣುಗಾನವನ್ನು ಕೇಳುತ್ತಿರುವುವು. ನೋಡಿ ! ನೋಡಿ ! ಇವುಗಳು ತಮ್ಮ ತರಂಗಗಳೆಂಬ ಕೈಗಳಿಂದ ಶ್ರೀಕೃಷ್ಣನ ಪಾದಾರವಿಂದಗಳಿಗೆ ಕಮಲದ ಪುಷ್ಪಗಳನ್ನು ಸಮರ್ಪಿಸುತ್ತಾ ಆತನ ಚರಣಕಮಲಗಳನ್ನೇ ಆಲಿಂಗನಮಾಡಿಕೊಳ್ಳುತ್ತಿವೆ. ॥ ೧೫ ॥ ಮತ್ತೊಬ್ಬ ಗೋಪಿಕೆಯು ಹೇಳುತ್ತಾರೆ – ಸಖಿಯರೇ ! ಈ ನದಿಗಳು ನಮ್ಮದೇ ಭೂಮಿಯ, ನಮ್ಮ ವೃಂದಾವನದೇ ವಸ್ತುಗಳಾಗಿವೆ. ಅವರಿಗೆ ಶ್ರೀಕೃಷ್ಣನ ಮೇಲೆ ಪ್ರೇಮವಿರುವುದು ಸಹಜವೇ ; ಆದರೆ ಈ ಮೋಡಗಳನ್ನು ಸ್ವಲ್ಪ ನೋಡಿರಲ್ಲ! ಕೃಷ್ಣ-ಬಲರಾಮರುಗೋಪಾಲಕರೊಡನೆ ಬಿಸಿಲಿನಲ್ಲಿ ಹಸುಗಳನ್ನು ಮೇಯಿಸುತ್ತಿರುವುದನ್ನು ಕಂಡು, ಹೃದಯಾನಂದಕರವಾಗಿ ಕೊಳಲು ನುಡಿಸುತ್ತಿರುವುದನ್ನು ಕೇಳಿ, ಮೋಡಗಳ ಹೃದಯವು ಪ್ರೇಮರಸದಿಂದ ತುಂಬಿಹೋಗುತ್ತದೆ. ಶ್ರೀಕೃಷ್ಣನು ಮೇಘಶ್ಯಾಮನಾದುದರಿಂದ ತಮ್ಮ ಆಪ್ತಮಿತ್ರನೆಂದೇ ಭಾವಿಸಿರುವ ಮೇಘಗಳು ಶ್ರೀಕೃಷ್ಣನ ಮತ್ತು ಅವನ ಪರಿವಾರದ ಮೇಲೆ ಹರಡಿಕೊಂಡು ಅವರ ತಾಪವನ್ನು ನಿವಾರಿಸುತ್ತವೆ. ಹಾಗೆಯೇ ಶ್ರೀಕೃಷ್ಣನ ಮೇಲೆ ತುಂತುರುಗಳ ರೂಪವಾದ ಬಿಳಿಯ ಹೂವುಗಳನ್ನು ಸುರಿಸುತ್ತಾ ಶ್ರೀಕೃಷ್ಣನನ್ನು ಪೂಜಿಸುತ್ತಿವೆಯೋ ಎಂಬಂತಿದೆ. ॥ ೧೬ ॥

ಮತ್ತೊಬ್ಬಳು ಹೇಳಿದಳು – ಗೆಳತಿಯರೇ ! ಈ ವೃಂದಾವನದಲ್ಲಿ ಸಂಚರಿಸುವ ಬೇಡತಿಯರೂ ಕೃತಕೃತ್ಯರಾಗಿರುವರೆಂದು ನಾನು ಭಾವಿಸುತ್ತೇನೆ. ನಮ್ಮ ಪ್ರಿಯತಮನಾದ ಶ್ರೀಕೃಷ್ಣನನ್ನು ನೋಡಿದಾಗ ಈ ಬೇಡತಿಯರಿಗೂ ಅವನೊಡನೆ ಸೇರಬೇಕೆಂಬ ಆಕಾಂಕ್ಷೆಯುಂಟಾಗುತ್ತದೆ. ಅವರು ಕಾಮಜ್ವರದಿಂದ ಪೀಡಿತರಾಗುತ್ತಾರೆ. ಆದರಿಂದ ಪಾರಾಗಲು ಅವರು ಕಂಡುಕೊಂಡ ಉಪಾಯವನ್ನು ಹೇಳುವೆನು, ಕೇಳಿರಿ. ನಮ್ಮ ಇನಿಯನ ಪ್ರೇಯಸಿಯರು ತಮ್ಮ ವೃಕ್ಷಸ್ಥಳಗಳನ್ನು ಶ್ರೀಕುಂಕುಮದಿಂದ ಅಲಂಕರಿಸಿಕೊಂಡಿರುತ್ತಾರೆ. ಕ್ರೀಡೆಗಳನ್ನಾಡುವಾಗ ವೃಕ್ಷಸ್ಥಳದ ಶ್ರೀಕುಂಕುಮವು ನಮ್ಮ ಇನಿಯನ ಚರಣಾರವಿಂದಗಳಿಗೆ ಅಂಟಿಕೊಳ್ಳುತ್ತದೆ. ಹಾಗೆ ಅಂಟಿಕೊಂಡ ಶ್ರೀಕುಂಕುಮವು ನಮ್ಮ ಕೃಷ್ಣನು ವೃಂದಾವನದಲ್ಲಿ ಸಂಚರಿಸುವಾಗ ಗರಿಕೆಹುಲ್ಲಿನ ಮೇಲೆ

ಪೂರ್ಣಾಃ ಪುಲಿಂದ್ಯ ಉರುಗಾಯಪದಾಬ್ಜರಾಗ-
ಶ್ರೀಕುಂಕುಮೇನ ದಯಿತಾಸ್ತನಮಂಡಿತೇನ ।
ತದ್ದರ್ಶನಸ್ಮರರುಜಸ್ತೃಣರೂಷಿತೇನ
ಲಿಂಪಂತ್ಯ ಆನನಕುಚೇಷು ಜಹುಸ್ತದಾಧಿಮ್ ॥ ೧೭ ॥

ಅಂಟಿಕೊಂಡಿರುತ್ತದೆ. ಅದನ್ನು ಅಲ್ಲಲ್ಲಿ ಹುಡುಕಿ ಈ ಬೇಡತಿಯರು ಪವಿತ್ರವಾದ ಆ ಶ್ರೀಕುಂಕುಮವನ್ನು ತಮ್ಮ ಹಣೆಗೂ ಮತ್ತು ಕುಚಗಳಿಗೂ ಹಚ್ಚಿಕೊಂಡು ಕಾಮಜ್ವರವನ್ನು ನಿವಾರಣೆ ಮಾಡಿಕೊಳ್ಳುತ್ತಾರೆ. ॥ ೧೭ ॥ ಇನ್ನೊಬ್ಬಳು ಹೇಳುವಳು - ಓ ಸಖಿಯರೇ! ಈ ಗೋವರ್ಧನ ಪರ್ವತವು ಎಲ್ಲರಿಗಿಂತಲೂ ಮಿಗಿಲಾಗಿ ಶ್ರೀಕೃಷ್ಣನ ಸೇವೆ ಮಾಡುತ್ತಿದೆ. ಈ ಪರ್ವತವು ಭಗವಂತನ ಭಕ್ತರಲ್ಲಿ ಶ್ರೇಷ್ಠನಾದ ಭಕ್ತನೆಂದೇ ನಾನು ಭಾವಿಸುತ್ತೇನೆ. ನಮ್ಮ ಪ್ರಾಣವಲ್ಲಭನಾದ ಶ್ರೀಕೃಷ್ಣನ ಮತ್ತು ನಯನಾಭಿರಾಮ ಬಲರಾಮನ ಪಾದಸ್ಪರ್ಶದಿಂದ ಇದು ಮಹದಾನಂದವನ್ನು ಅನುಭವಿಸುತ್ತಿದೆ. ಆನಂದದಿಂದ ಪುಳಕಿತವಾದ ಈ ಗಿರಿಯು ರಾಮ-ಕೃಷ್ಣರಿಗೂ, ಗೋ-ಗೋಪಾಲಕರಿಗೂ ಸದಾಕಾಲ ಸತ್ಕಾರ ಮಾಡುತ್ತದೆ. ಸ್ನಾನ-ಪಾನಾದಿಗಳಿಗೆ ಗಿರಿನದಿಗಳಿಂದ ನಿರ್ಮಲವಾದ ನೀರನ್ನು ಒದಗಿಸುತ್ತದೆ. ಹಸುಗಳಿಗೆ ಮೇಯಲು ಹಚ್ಚ-ಹಸಿರು ಹುಲ್ಲನ್ನು ನೀಡುತ್ತದೆ. ರಾಮ-ಕೃಷ್ಣರು ಮತ್ತು ಗೋಪಾಲಕರು ವಿಶ್ರಮಿಸಿಕೊಳ್ಳಲು ಸುಂದರವಾದ ಗುಹೆಗಳನ್ನು ಒದಗಿಸುತ್ತದೆ. ಆಹಾರಕ್ಕಾಗಿ ಕಂದ-ಮೂಲ-ಫಲಗಳನ್ನು ಯಥೇಚ್ಛವಾಗಿ ಅರ್ಪಿಸುತ್ತಿದೆ. ಈ ಗೋವರ್ಧನ ಪರ್ವತದಂತೆ ಶ್ರೀಹರಿಗೆ ನಿರಂತರ ಸತ್ಕಾರಮಾಡುವವರು ಬೇರೆಯಾರಿದ್ದಾರೆ? ನಿಶ್ಚಯವಾಗಿಯೂ ಈ ಗೋವರ್ಧನಗಿರಿಯೇ ಪರಮ ಧನ್ಯವಾದುದು. ॥ ೧೮ ॥

ಹಂತಾಯಮದ್ರಿರಬಲಾ ಹರಿದಾಸವರ್ಯೋ
ಯದ್ರಾಮಕೃಷ್ಣಚರಣಸ್ಪರ್ಶಪ್ರಮೋದಃ ।
ಮಾನಂ ತನೋತಿ ಸಹಗೋಗಣಯೋಸ್ತಯೋರ್ಯತ್
ಪಾನೀಯಸೂಯವಸಕಂದರಕಂದಮೂಲೈಃ ॥ ೧೮ ॥

ಮತ್ತೊಬ್ಬಳು ಹೇಳಿದಳು - ಸಖಿಯರೇ! ನಾನು ಮತ್ತೊಂದು ವಿಚಿತ್ರವಾದ ಸಂಗತಿಯನ್ನು ಹೇಳುವೆನು, ಲಾಲಿಸಿರಿ. ರಾಮ-ಕೃಷ್ಣರು ತುಂಟ ಹಸುಗಳನ್ನು, ಎತ್ತುಗಳನ್ನು ಕಟ್ಟಿಹಾಕುವುದಕ್ಕಾಗಿ ಹುರಿಹಗ್ಗಗಳ ಸಿಂಬೆಯನ್ನು ತಲೆಯ ಮೇಲೂ, ಹೆಗಲಮೇಲೂ ಹೊತ್ತುಕೊಂಡು ಗೊಲ್ಲರೊಡನೆ ಹಸುಗಳನ್ನು ಮೇಯಿಸುತ್ತಾ ಕೊಳಲು ನುಡಿಸುತ್ತಾ ಹೋಗುತ್ತಿರುತ್ತಾರೆ. ಇವರ ಕರ್ಣಾನಂದಕರವಾದ ವೇಣುಗಾನವನ್ನು ಕೇಳಿದೊಡನೆಯೇ ಜಂಗಮಗಳು (ಹಸುಗಳು) ಸ್ಥಾವರಗಳಾಗುತ್ತವೆ; ಸ್ತಬ್ಧವಾಗಿ ನಿಂತುಬಿಡುತ್ತವೆ. ಸ್ಥಾವರ ಜಂಗಮಗಳಾಗುತ್ತವೆ. ಸ್ಥಾವರಗಳಾದ ಗಿಡ-ಮರ-ಬಳ್ಳಿಗಳು ಪುಷ್ಪೋದ್ಗಮಾದಿಗಳ ರೂಪದಲ್ಲಿ ವೇಣುಗಾನದ ಆಸ್ವಾದನೆಯಿಂದ ಪುಳಕಿತವಾಗುವುದನ್ನು ವ್ಯಕ್ತಪಡಿಸುತ್ತವೆ. ॥ ೧೯ ॥

ಗಾ ಗೋಪಕೈರನುವನಂ ನಯತೋರುದಾರ-
ವೇಣುಸ್ವನೈಃ ಕಲಪದೈಸ್ತನುಭೃತ್ಸು ಸಖ್ಯಃ ।
ಅಸ್ಪಂದನಂ ಗತಿಮತಾಂ ಪುಲಕಸ್ತರೂಣಾಂ
ನಿರ್ಯೋಗಪಾಶಕೃತಲಕ್ಷಣಯೋರ್ವಿಚಿತ್ರಮ್ ॥ ೧೯ ॥

ಪರೀಕ್ಷಿತನೇ! ವೃಂದಾವನ ವಿಹಾರಿ ಶ್ರೀಕೃಷ್ಣನ ಇಂತಹ ಒಂದಲ್ಲ ಅನೇಕ ಲೀಲೆಗಳಿವೆ. ಗೋಪಿಯರು ಪ್ರತಿದಿನವೂ ಪರಸ್ಪರ ಅವನ್ನು ವರ್ಣಿಸುತ್ತಾ ತನ್ಮಯರಾಗುತ್ತಾರೆ. ಭಗವಂತನ ಲೀಲೆಗಳು ಅವರ ಹೃದಯದಲ್ಲಿ ಸ್ಫುರಣೆಗೊಳ್ಳತೊಡಗುತ್ತವೆ. ॥ ೨೦ ॥

ಏವಂವಿಧಾ ಭಗವತೋ ಯಾ
ವೃಂದಾವನಚಾರಿಣಃ ।
ವರ್ಣಯಂತ್ಯೋ ಮಿಥೋ ಗೋಪ್ಯಃ
ಕ್ರೀಡಾಸ್ತನ್ಮಯತಾಂ ಯಯುಃ ॥ ೨೦ ॥

ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೨೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ವೇಣುಗೀತಂ ನಾಮೈಕವಿಂಶೋಽಧ್ಯಾಯಃ ॥ ೨೧ ॥

# ಇಪ್ಪತ್ತೆರಡನೆಯ ಅಧ್ಯಾಯ

## ಚೀರಹರಣ

ಶ್ರೀಶುಕ ಉವಾಚ

ಹೇಮಂತೇ ಪ್ರಥಮೇ ಮಾಸಿ ನಂದವ್ರಜಕುಮಾರಿಕಾಃ ।
ಚೇರುರ್ಹವಿಷ್ಯಂ ಭುಂಜಾನಾಃ ಕಾತ್ಯಾಯನ್ಯರ್ಚನವ್ರತಮ್ ॥ ೧ ॥

ಆಪ್ಲುತ್ಯಾಂಭಸಿ ಕಾಲಿಂದ್ಯಾ ಜಲಾಂತೇ ಚೋದಿತೇಽರುಣೇ ।
ಕೃತ್ವಾ ಪ್ರತಿಕೃತಿಂ ದೇವೀಮಾನರ್ಚುರ್ನೃಪ ಸೈಕತೀಮ್ ॥ ೨ ॥

ಗಂಧೈರ್ಮಾಲ್ಯೈಃ ಸುರಭಿಭಿರ್ಬಲಿಭಿರ್ಧೂಪದೀಪಕೈಃ ।
ಉಚ್ಚಾವಚೈಶ್ಚೋಪಹಾರೈಃ ಪ್ರವಾಲಫಲತಂಡುಲೈಃ ॥ ೩ ॥

ಕಾತ್ಯಾಯನಿ ಮಹಾಮಾಯೇ ಮಹಾಯೋಗಿನ್ಯಧೀಶ್ವರಿ ।
ನಂದಗೋಪಸುತಂ ದೇವಿ ಪತಿಂ ಮೇ ಕುರು ತೇ ನಮಃ ।
ಇತಿ ಮಂತ್ರಂ ಜಪಂತ್ಯಸ್ತಾಃ ಪೂಜಾಂ ಚಕ್ರುಃ ಕುಮಾರಿಕಾಃ ॥ ೪ ॥

ಏವಂ ಮಾಸಂ ವ್ರತಂ ಚೇರುಃ ಕುಮಾರ್ಯಃ ಕೃಷ್ಣಚೇತಸಃ ।
ಭದ್ರಕಾಲೀಂ ಸಮಾನರ್ಚುರ್ಭೂಯಾನ್ನಂದಸುತಃ ಪತಿಃ ॥ ೫ ॥

ಉಷಸ್ಯುತ್ಥಾಯ ಗೋತ್ರೈಃ ಸ್ವೈರನ್ಯೋನ್ಯಾಬದ್ಧಬಾಹವಃ ।
ಕೃಷ್ಣಮುಚ್ಚೈರ್ಜಗುರ್ಯಾಂತ್ಯಃ ಕಾಲಿಂದ್ಯಾಂ ಸ್ನಾತುಮನ್ವಹಮ್ ॥ ೬ ॥

ನದ್ಯಾಂ ಕದಾಚಿದಾಗತ್ಯ ತೀರೇ ನಿಕ್ಷಿಪ್ಯ ಪೂರ್ವವತ್ ।
ವಾಸಾಂಸಿ ಕೃಷ್ಣಂ ಗಾಯಂತ್ಯೋ ವಿಜಹ್ರುಃ ಸಲಿಲೇ ಮುದಾ ॥ ೭ ॥

ಭಗವಾಂಸ್ತದಭಿಪ್ರೇತ್ಯ ಕೃಷ್ಣೋ ಯೋಗೇಶ್ವರೇಶ್ವರಃ ।
ವಯಸ್ಯೈರಾವೃತಸ್ತತ್ರ ಗತಸ್ತತ್ಕರ್ಮಸಿದ್ಧಯೇ ॥ ೮ ॥

ತಾಸಾಂ ವಾಸಾಂಸ್ಯುಪಾದಾಯ ನೀಪಮಾರುಹ್ಯ ಸತ್ವರಃ ।
ಹಸದ್ಭಿಃ ಪ್ರಹಸನ್ಬಾಲೈಃ ಪರಿಹಾಸಮುವಾಚ ಹ ॥ ೯ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಎಲೈ ಪರೀಕ್ಷಿತನೇ! ಈಗ ಹೇಮಂತ ಋತುವು ಪ್ರಾರಂಭವಾಯಿತು. ಇದರ ಮೊದಲ ತಿಂಗಳಲ್ಲಿ ಅಂದರೆ - ಮಾರ್ಗಶಿರ ಮಾಸದಲ್ಲಿ ನಂದಗೋಪನ ಹಳ್ಳಿಯಲ್ಲಿದ್ದ ಕುಮಾರಿಯರು ಕಾತ್ಯಾಯಿನೀದೇವಿಯ ಪೂಜೆಯನ್ನು ಮತ್ತು ವ್ರತವನ್ನು ಮಾಡತೊಡಗಿದರು. ವ್ರತದ ನಿಯಮದಂತೆ ಅವರು ಹವಿಷ್ಯಾನ್ನವನ್ನೇ ಊಟ ಮಾಡುತ್ತಿದ್ದರು. ॥ ೧ ॥ ಮಹಾರಾಜ! ಆ ಕನ್ಯೆಯರು ಅರುಣೋದಯವಾಗುತ್ತಲೇ ಯಮುನಾ ನದಿಯ ತೀರ್ಥದಲ್ಲಿ ಸ್ನಾನಮಾಡಿ, ತೀರದಲ್ಲಿರುವ ಮರಳಿನಿಂದಲೇ ಕಾತ್ಯಾಯಿನಿಯ ಮೂರ್ತಿಯನ್ನು ಕಲ್ಪಿಸಿಕೊಂಡು, ಸುಗಂಧಿತವಾದ ಗಂಧ, ಪುಷ್ಪಗಳಿಂದಲೂ, ಹಾರಗಳಿಂದಲೂ, ಬಗೆ ಬಗೆಯ ನೈವೇದ್ಯಗಳಿಂದಲೂ ಧೂಪ-ದೀಪ ಮುಂತಾದ ಸಣ್ಣ-ದೊಡ್ಡ ಪೂಜಾಸಾಮಗ್ರಿಗಳಿಂದಲೂ, ಚಿಗುರೆಲೆಗಳಿಂದಲೂ, ಅಕ್ಷತೆಗಳಿಂದಲೂ ದೇವಿಯ ಪೂಜೆಯನ್ನು ಮಾಡುತ್ತಿದ್ದರು. ॥ ೨-೩ ॥ ''ಹೇ ಕಾತ್ಯಾಯಿನಿ ಮಹಾಮಾಯಾ ದೇವಿಯೇ! ಮಹಾಯೋಗಿನಿಯೇ! ಸಮಸ್ತರಿಗೂ ಏಕಮಾತ್ರ ಸ್ವಾಮಿನಿಯೇ! ನಂದಗೋಪನ ಮಗನಾದ ಶ್ರೀಕೃಷ್ಣನು ನಮಗೆ ಪತಿಯಾಗುವಂತೆ ಅನುಗ್ರಹಿಸು. ನಿನ್ನ ಪಾದಾರವಿಂದಗಳಲ್ಲಿ ನಮಸ್ಕರಿಸುತ್ತೇವೆ''- ಎಂಬ ಈ ಮಹಾಮಂತ್ರವನ್ನು ಎಲ್ಲ ಕುಮಾರಿಯರೂ ಜಪಿಸುತ್ತಾ ದೇವಿಯ ಆರಾಧನೆ ಮಾಡುತ್ತಿದ್ದರು. ॥ ೪ ॥ ಹೀಗೆ ಶ್ರೀಕೃಷ್ಣನಲ್ಲಿಯೇ ನೆಟ್ಟು ಹೋಗಿದ್ದ ಮನಸ್ಸುಳ್ಳ ಆ ಕುಮಾರಿಯರು ಒಂದು ತಿಂಗಳಕಾಲ ವ್ರತಾನುಷ್ಠಾನ ಮಾಡುತ್ತಾ ನಂದಗೋಪನ ಮಗನೇ ತಮಗೆ ಪತಿಯಾಗಬೇಕೆಂದು ಭದ್ರಕಾಳಿಯನ್ನು ಶ್ರದ್ಧೆಯಿಂದ ಪೂಜಿಸಿದರು. ॥ ೫ ॥ ಆ ಕನ್ನಿಕೆಯರು ಪ್ರತಿದಿನವೂ ಉಷಃಕಾಲದಲ್ಲೇ ಎದ್ದು ಒಬ್ಬರು ಮತ್ತೊಬ್ಬರ ಹೆಸರಿಡಿದು ಕೂಗಿಕೊಳ್ಳುತ್ತಾ ಪರಸ್ಪರ ಕೈ-ಕೈಹಿಡಿದುಕೊಂಡು ಗಟ್ಟಿಯಾಗಿ ಭಗವಾನ್ ಶ್ರೀಕೃಷ್ಣನ ಲೀಲೆಗಳನ್ನು, ಅವನ ನಾಮಗಳನ್ನು ಹಾಡುತ್ತಾ ಯಮುನಾ ಜಲದಲ್ಲಿ ಸ್ನಾನಮಾಡಲು ಹೋಗುತ್ತಿದ್ದರು. ॥ ೬ ॥

ಒಂದು ದಿನ ಕುಮಾರಿಯರೆಲ್ಲರೂ ಪ್ರತಿದಿನದಂತೆ ಯಮುನಾ ತೀರಕ್ಕೆ ಹೋಗಿ ತಮ್ಮ-ತಮ್ಮ ಬಟ್ಟೆಗಳನ್ನು ಬಿಚ್ಚಿಟ್ಟು ಭಗವಾನ್ ಶ್ರೀಕೃಷ್ಣನ ಗುಣಗಳನ್ನು ಹಾಡುತ್ತಾ ಆನಂದವಾಗಿ ಜಲಕ್ರೀಡೆಯಾಡತೊಡಗಿದರು. ॥ ೭ ॥ ಪರೀಕ್ಷಿತನೇ! ಯೋಗೇಶ್ವರರಿಗೂ ಈಶ್ವರನಾದ ಶ್ರೀಕೃಷ್ಣನಿಗೆ ಗೋಪಕನ್ಯೆಯರ ಆಶಯವು ತಿಳಿದು ಹೋಯಿತು. ಅವನು ಅವರ ಆಶಯವನ್ನು ಪೂರೈಸಿಕೊಡುವ ಸಲುವಾಗಿ ತನ್ನ ಗೆಳೆಯರಾದ ಗೋಪಬಾಲಕರೊಡನೆ ಸಮಾವೃತನಾಗಿ ಆ ಕುಮಾರಿಯರ ಸಾಧನೆಯನ್ನು ಸಫಲಗೊಳಿಸಲಿಕ್ಕಾಗಿ ಯಮುನಾನದಿಯ ತೀರಕ್ಕೆ ಆಗಮಿಸಿದನು. ॥ ೮ ॥ ಅವನು ಆ ಗೋಪಿಯರ ಎಲ್ಲ ವಸ್ತ್ರಗಳನ್ನು ಎತ್ತಿಕೊಂಡು ಲಗುಬಗೆಯಿಂದ ಒಂದು ಕದಂಬ ವೃಕ್ಷವನ್ನು ಹತ್ತಿ ಕುಳಿತನು. ಜೊತೆಗಿನ ಗೋಪಬಾಲಕರೆಲ್ಲರೂ ಕಿಲ-ಕಿಲನೆ ನಗತೊಡಗಿದರು. ಶ್ರೀಕೃಷ್ಣನು ಅವರೊಂದಿಗೆ ನಗುತ್ತಾ ಗೋಪಕುಮಾರಿಯರಿಗೆ ಹೇಳುತ್ತಾನೆ. ॥ ೯ ॥

ಅತ್ರಾಗತ್ಯಾಬಲಾಃ ಕಾಮಂ ಸ್ವಂ ಸ್ವಂ ವಾಸಃ ಪ್ರಗೃಹ್ಯತಾಮ್ ।
ಸತ್ಯಂ ಬ್ರವಾಣಿ ನೋ ನರ್ಮ ಯದ್ಯೂಯಂ ವ್ರತಕರ್ಶಿತಾಃ
॥ ೧೦ ॥

ನ ಮಯೋದಿತಪೂರ್ವಂ ವಾ ಅನೃತಂ ತದಿಮೇ ವಿದುಃ ।
ಏಕೈಕಶಃ ಪ್ರತೀಚ್ಛಧ್ವಂ ಸಹೈವೋತ ಸುಮಧ್ಯಮಾಃ
॥ ೧೧ ॥

ತಸ್ಯ ತತ್ ಕ್ಷ್ವೇಲಿತಂ ದೃಷ್ಟ್ವಾ ಗೋಪ್ಯಃ ಪ್ರೇಮಪರಿಪ್ಲುತಾಃ ।
ವ್ರೀಡಿತಾಃ ಪ್ರೇಕ್ಷ್ಯ ಚಾನ್ಯೋನ್ಯಂ ಜಾತಹಾಸಾ ನ ನಿರ್ಯಯುಃ
॥ ೧೨ ॥

ಏವಂ ಬ್ರುವತಿ ಗೋವಿಂದೇ ನರ್ಮಣಾಽಽಕ್ಷಿಪ್ತಚೇತಸಃ ।
ಆಕಂಠಮಗ್ನಾಃ ಶೀತೋದೇ ವೇಪಮಾನಾಸ್ತಮಬ್ರುವನ್
॥ ೧೩ ॥

ಮಾನಯಂ ಭೋಃ ಕೃಥಾಸ್ತ್ವಾಂ ತು
ನಂದಗೋಪಸುತಂ ಪ್ರಿಯಮ್ ।
ಜಾನೀಮೋಽಂಗ ವ್ರಜಶ್ಲಾಘ್ಯಂ
ದೇಹಿ ವಾಸಾಂಸಿ ವೇಪಿತಾಃ ॥ ೧೪ ॥

ಶ್ಯಾಮಸುಂದರ ತೇ ದಾಸ್ಯಃ ಕರವಾಮ ತವೋದಿತಮ್ ।
ದೇಹಿ ವಾಸಾಂಸಿ ಧರ್ಮಜ್ಞ ನೋ ಚೇದ್ರಾಜ್ಞೇ ಬ್ರುವಾಮಹೇ
॥ ೧೫ ॥

ಶ್ರೀಭಗವಾನುವಾಚ

ಭವತ್ಯೋ ಯದಿ ಮೇ ದಾಸ್ಯೋ ಮಯೋಕ್ತಂ ವಾ ಕರಿಷ್ಯಥ ।
ಅತ್ರಾಗತ್ಯ ಸ್ವವಾಸಾಂಸಿ ಪ್ರತೀಚ್ಛಂತು ಶುಚಿಸ್ಮಿತಾಃ
॥ ೧೬ ॥

ತತೋ ಜಲಾಶಯಾತ್ಸರ್ವಾ ದಾರಿಕಾಃ ಶೀತವೇಪಿತಾಃ ।
ಪಾಣಿಭ್ಯಾಂ ಯೋನಿಮಾಚ್ಛಾದ್ಯ ಪ್ರೋತ್ತೇರುಃ ಶೀತಕರ್ಶಿತಾಃ
॥ ೧೭ ॥

ಭಗವಾನಾಹ ತಾ ವೀಕ್ಷ್ಯ ಶುದ್ಧಭಾವಪ್ರಸಾದಿತಃ ।
ಸ್ಕಂಧೇ ನಿಧಾಯ ವಾಸಾಂಸಿ ಪ್ರೀತಃ ಪ್ರೋವಾಚ ಸಸ್ಮಿತಮ್
॥ ೧೮ ॥

ಎಲೈ ಕುಮಾರಿಯರೇ! ನಿಮಗೆ ನಿಮ್ಮ ವಸ್ತ್ರಗಳು ಬೇಕಿದ್ದರೆ ಇಲ್ಲಿಗೆ ಬಂದು ತೆಗೆದುಕೊಂಡು ಹೋಗಿರಿ. ನಾನು ನಿಮ್ಮಲ್ಲಿ ನಿಜವನ್ನೇ ಹೇಳುತ್ತಿದ್ದೇನೆ. ಖಂಡಿತವಾಗಿ ಪರಿಹಾಸ್ಯಕ್ಕಾಗಿ ಅಲ್ಲ. ನೀವೆಲ್ಲರೂ ವ್ರತಾನುಷ್ಠಾನದಿಂದ ದುರ್ಬಲೆಯರಾಗಿರುವಿರಿ. ॥ ೧೦ ॥ ನಾನು ಎಂದೂ ಸುಳ್ಳು ಹೇಳಲಿಲ್ಲ - ಇದನ್ನು ನನ್ನ ಮಿತ್ರರಾದ ಈ ಗೋಪಬಾಲಕರು ಬಲ್ಲರು. ಸುಂದರಿಯರೇ! ನೀವು ಬಯಸುವಿರಾದರೆ ಬೇರೆ-ಬೇರೆಯಾಗಿ ಬಂದು ನಿಮ್ಮ-ನಿಮ್ಮ ವಸ್ತ್ರಗಳನ್ನು ಕೊಂಡುಹೋಗಿರಿ. ಇಲ್ಲವೇ ಒಟ್ಟಿಗೆ ಬಂದು ಕೊಂಡೊಯ್ಯಿರಿ. ನನಗೆ ಇದರಲ್ಲಿ ಯಾವ ಅಭ್ಯಂತರವೂ ಇಲ್ಲ. ॥ ೧೧ ॥ ಭಗವಂತನ ಈ ಪರಿಹಾಸ್ಯದ ಮಾತನ್ನು ಕೇಳಿ ಗೋಪಿಕೆಯರ ಹೃದಯ ಪ್ರೇಮದಿಂದ ತುಂಬಿಹೋಯಿತು. ಅವರು ಸ್ವಲ್ಪ ನಾಚಿಕೊಂಡು ಪರಸ್ಪರ ನೋಡಿಕೊಂಡು ಮುಗುಳ್ನಗುತ್ತಿದ್ದರು. ನೀರಿನಿಂದ ಹೊರಗೆ ಬರಲಿಲ್ಲ. ॥ ೧೨ ॥ ಭಗವಂತನು ಪರಿಹಾಸ್ಯದ ಮಾತುಗಳನ್ನಾಡಿದಾಗ ಅವನ ವಿನೋದದಿಂದ ಕುಮಾರಿಯರ ಚಿತ್ತವೂ ಇನ್ನೂ ಹೆಚ್ಚಾಗಿ ಅವನೆಡೆಗೆ ಸೆಳೆಯಲ್ಪಟ್ಟಿತು. ಅವರು ಕತ್ತಿನವರೆಗೆ ನೀರಿನಲ್ಲಿ ಮುಳುಗಿ ನಿಂತಿದ್ದರು. ಅವರ ಶರೀರಗಳು ಚಳಿಯಿಂದ ಗಡ-ಗಡನೆ ನಡುಗುತ್ತಿದ್ದವು. ಅವರು ಕೃಷ್ಣನಲ್ಲಿ ಹೇಳತೊಡಗಿದರು. ॥ ೧೩ ॥ ಸಮಸ್ತರಿಗೂ ಪ್ರಿಯನಾದ ಓ ಕೃಷ್ಣನೇ! ಇಂತಹ ಅನ್ಯಾಯವನ್ನು ನೀನು ಮಾಡಬಾರದು. ನೀನು ನಂದರಾಜನ ಮುದ್ದು ಮಗನೆಂಬುದನ್ನು ನಾವು ಬಲ್ಲೆವು. ಸಮಸ್ತ ವ್ರಜವಾಸಿಗಳಿಂದ ಶ್ಲಾಘಿಸಲ್ಪಡುವವನೆಂಬುದನ್ನೂ ನಾವು ಬಲ್ಲೆವು. ಆದುದರಿಂದ ನಮಗೂ ಪ್ರಿಯತಮನಾಗಿರುವೆ. ನೋಡು ನಾವು ಚಳಿಯಿಂದ ನಡುಗುತ್ತಿದ್ದೇವೆ. ನೀನು ನಮ್ಮ ವಸ್ತ್ರಗಳನ್ನು ಕೊಟ್ಟುಬಿಡು. ॥ ೧೪ ॥ ಪ್ರಿಯ ಶ್ಯಾಮಸುಂದರನೇ! ನಾವು ನಿನ್ನ ದಾಸಿಯರಾಗಿದ್ದೇವೆ. ನೀನು ಹೇಳಿದಂತೆ ಮಾಡಲು ಸಿದ್ಧರಾಗಿದ್ದೇವೆ. ನೀನಾದರೋ ಧರ್ಮದ ಮರ್ಮವನ್ನು ಚೆನ್ನಾಗಿ ತಿಳಿಯುತ್ತಿರುವೆ. ನಮಗೆ ಕಷ್ಟಕೊಡಬೇಡ. ನಮ್ಮ ಬಟ್ಟೆ ನಮಗೆ ಕೊಟ್ಟುಬಿಡು. ಇಲ್ಲದಿದ್ದರೆ ನಾವು ಹೋಗಿ ನಂದರಾಜನಿಗೆ ಹೇಳಿಬಿಡುತ್ತೇವೆ. ॥ ೧೫ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** - ಶುಭ್ರವಾದ ಮಂದಹಾಸವುಳ್ಳ ಕುಮಾರಿಯರೇ! ನನಗೆ ದಾಸಿಯರಾಗಲು ನೀವು ಸಿದ್ಧರಿದ್ದರೆ ನಾನು ಹೇಳಿದಂತೆ ಮಾಡಿರಿ. ಇಲ್ಲಿಗೆ ಬಂದು ನಿಮ್ಮ-ನಿಮ್ಮ ವಸ್ತ್ರಗಳನ್ನು ತೆಗೆದುಕೊಂಡು ಹೋಗಿರಿ. ॥ ೧೬ ॥ ಪರೀಕ್ಷಿತನೇ! ಆ ಕುಮಾರಿಯರು ಚಳಿಯಿಂದ ನಡುಗುತ್ತಿದ್ದರು. ಭಗವಂತನ ಇಂತಹ ಮಾತನ್ನು ಕೇಳಿ ಅವರ ತಮ್ಮ ಎರಡೂ ಕೈಗಳಿಂದ ಗುಪ್ತಾಂಗಗಳನ್ನು ಮುಚ್ಚಿಕೊಂಡು ಯಮುನೆಯಿಂದ ಮೇಲಕ್ಕೆ ಬಂದರು. ಆಗ ಚಳಿಯು ಅವರೆಲ್ಲರನ್ನು ತುಂಬಾ ಬಾಧಿಸುತ್ತಿತ್ತು. ॥ ೧೭ ॥ ಅವರ ಈ ಶುದ್ಧಭಾವದಿಂದ ಭಗವಂತನು ಅತ್ಯಂತ ಪ್ರಸನ್ನನಾದನು. ತನ್ನ ಬಳಿಗೆ ಬಂದ ಅವರನ್ನು ನೋಡಿ ಅವನು ಗೋಪಿಯರ ಬಟ್ಟೆಗಳನ್ನು ತನ್ನ ಹೆಗಲಮೇಲಿಟ್ಟುಕೊಂಡು, ಮುಗುಳ್ನಗುತ್ತಾ ಹೇಳಿದನು. ॥ ೧೮ ॥

ಯೂಯಂ ವಿವಸ್ತ್ರಾ ಯದಪೋ ಧೃತವ್ರತಾ
ವ್ಯಗಾಹತೈತತ್ತದು ದೇವಹೇಲನಮ್ ।
ಬದ್ಧ್ವಾಂಜಲಿಂ ಮೂರ್ಧ್ನ್ಯಪನುತ್ತಯೇಂಽಹಸಃ
ಕೃತ್ವಾ ನಮೋಽಧೋ ವಸನಂ ಪ್ರಗೃಹ್ಯತಾಮ್ ॥ ೧೯ ॥

ಇತ್ಯಚ್ಯುತೇನಾಭಿಹಿತಾ ವ್ರಜಾಬಲಾ
ಮತ್ವಾ ವಿವಸ್ತ್ರಾಪ್ಲವನಂ ವ್ರತಚ್ಯುತಿಮ್ ।
ತತ್ಪೂರ್ತಿಕಾಮಾಸ್ತದಶೇಷಕರ್ಮಣಾಂ
ಸಾಕ್ಷಾತ್ಕೃತಂ ನೇಮುರವದ್ಯಮೃಗ್ಯತಃ ॥ ೨೦ ॥

ತಾಸ್ತಥಾವನತಾ ದೃಷ್ಟ್ವಾ ಭಗವಾನ್ ದೇವಕೀಸುತಃ ।
ವಾಸಾಂಸಿ ತಾಭ್ಯಃ ಪ್ರಾಯಚ್ಛತ್ಕರುಣಸ್ತೇನ ತೋಷಿತಃ ॥ ೨೧ ॥

ದೃಢಂ ಪ್ರಲಬ್ಧಾಸ್ತ್ರಪಯಾ ಚ ಹಾಪಿತಾಃ
ಪ್ರಸ್ತೋಭಿತಾಃ ಕ್ರೀಡನವಚ್ಚ ಕಾರಿತಾಃ ।
ವಸ್ತ್ರಾಣಿ ಚೈವಾಪಹೃತಾನ್ಯಥಾಪ್ಯಮುಂ
ತಾ ನಾಭ್ಯಸೂಯನ್ ಪ್ರಿಯಸಂಗನಿರ್ವೃತಾಃ ॥ ೨೨ ॥

ಪರಿಧಾಯ ಸ್ವವಾಸಾಂಸಿ ಪ್ರೇಷ್ಠಸಂಗಮಸಜ್ಜಿತಾಃ ।
ಗೃಹೀತಚಿತ್ತಾ ನೋ ಚೇಲುಸ್ತಸ್ಮಿಂಲ್ಲಜ್ಜಾಯಿತೇಕ್ಷಣಾಃ ॥ ೨೩ ॥

ತಾಸಾಂ ವಿಜ್ಞಾಯ ಭಗವಾನ್ ಸ್ವಪಾದಸ್ಪರ್ಶಕಾಮ್ಯಯಾ ।
ಧೃತವ್ರತಾನಾಂ ಸಂಕಲ್ಪಮಾಹ ದಾಮೋದರೋಽಬಲಾಃ ॥ ೨೪ ॥

ಸಂಕಲ್ಪೋ ವಿದಿತಃ ಸಾಧ್ವ್ಯೋ ಭವತೀನಾಂ ಮದರ್ಚನಮ್ ।
ಮಯಾನುಮೋದಿತಃ ಸೋಽಸೌ ಸತ್ಯೋ ಭವಿತುಮರ್ಹತಿ ॥ ೨೫ ॥

ಎಲೈ ಗೋಪಿಯರೇ! ನೀವು ಕೈಗೊಂಡ ವ್ರತವನ್ನು ಚೆನ್ನಾಗಿ ನೆರವೇರಿಸಿರುವಿರಿ, ಇದರಲ್ಲಿ ಸಂದೇಹವೇ ಇಲ್ಲ. ಆದರೆ ನೀವು ವಸ್ತ್ರಹೀನರಾಗಿ ನದಿಯಲ್ಲಿ ಸ್ನಾನಮಾಡಿದುದು ಜಲಾಧಿಷ್ಠಾತೃ ದೇವನಾದ ವರುಣನಿಗೂ ಮತ್ತು ಯಮುನಾದೇವಿಗೂ ಅಪರಾಧ ಮಾಡಿದಂತಾಗಿದೆ. ಈ ದೋಷದ ಶಾಂತಿಗಾಗಿ ನೀವು ನಿಮ್ಮೆರಡೂ ಕೈಗಳನ್ನು ಜೋಡಿಸಿ (ಬದ್ಧಾಂಜಲಿಯಾಗಿ) ತಲೆಯ ಮೇಲಿಟ್ಟು ಕೊಂಡು ಬಗ್ಗಿ ನಮಸ್ಕಾರ ಮಾಡಿರಿ. ಅನಂತರ ನಿಮ್ಮ-ನಿಮ್ಮ ವಸ್ತ್ರಗಳನ್ನು ಕೊಂಡುಹೋಗಿರಿ. ॥ ೧೯ ॥ ಭಗವಾನ್ ಶ್ರೀಕೃಷ್ಣನ ಮಾತನ್ನು ಕೇಳಿದ ಆ ವ್ರಜದ ಕುಮಾರಿಯರು - ನಿಜವಾಗಿ ನಾವು ವಸ್ತ್ರಹೀನರಾಗಿ ಸ್ನಾನಮಾಡಿದ್ದರಿಂದ ನಮ್ಮ ವ್ರತದಲ್ಲಿ ಕೊರತೆ ಉಂಟಾಯಿತೆಂದೇ ತಿಳಿದರು. ಆದ್ದರಿಂದ ಅದು ನಿರ್ವಿಘ್ನವಾಗಿ ನೆರವೇರಲು ಅವರು ಸಮಸ್ತ ಕರ್ಮಗಳ ಸಾಕ್ಷಿಯಾದ ಶ್ರೀಕೃಷ್ಣನಿಗೆ ನಮಸ್ಕರಿಸಿದರು. ಏಕೆಂದರೆ, ಅವನಿಗೆ ನಮಸ್ಕಾರ ಮಾಡುವುದರಿಂದ ಎಲ್ಲ ನ್ಯೂನಾತಿರಿಕ್ತಗಳು ಮತ್ತು ಅಪರಾಧಗಳು ತೊಳೆದು ಹೋಗುವುವು. ॥ ೨೦ ॥ ಯಶೋದಾನಂದನ ಭಗವಾನ್ ಶ್ರೀಕೃಷ್ಣನು - ಎಲ್ಲ ಕುಮಾರಿಯರು ನನ್ನ ಆಜ್ಞೆಗನುಸಾರವಾಗಿ ನಮಸ್ಕರಿಸುತ್ತಿದ್ದಾರೆ ಎಂದು ನೋಡಿ ಅತ್ಯಂತ ಪ್ರಸನ್ನನಾದನು. ಅವನ ಹೃದಯದಲ್ಲಿ ಕರುಣೆ ಉಕ್ಕಿಬಂತು ಹಾಗೂ ಅವನು ಅವರ ವಸ್ತ್ರಗಳನ್ನು ಕೊಟ್ಟುಬಿಟ್ಟನು. ॥ ೨೧ ॥

ಪರೀಕ್ಷಿತನೇ! ಶ್ರೀಕೃಷ್ಣನಿಂದ ಗೋಪಕುಮಾರಿಯರು ಲಜ್ಜೆ ಸಂಕೋಚಬಿಡಬೇಕಾಗಿ ಬಂದು, ಅಪಹಾಸ್ಯಕ್ಕೀಡಾದರು. ಆಟದ ಬೊಂಬೆಯಂತೆ ಶ್ರೀಕೃಷ್ಣನು ಗೋಪಕುಮಾರಿಯರನ್ನು ಮನ ಬಂದಂತೆ ಆಟವಾಡಿಸಿದನು. ಅವರ ವಸ್ತ್ರಗಳನ್ನು ಅಪಹರಿಸಿದನು. ಆದರೂ ಅವರು ಅವನ ಮೇಲೆ ಕೋಪಗೊಳ್ಳಲಿಲ್ಲ, ಅವನ ಕಾರ್ಯಗಳಲ್ಲಿ ದೋಷವೆಣಿಸಲಿಲ್ಲ, ಬದಲಿಗೆ ತಮ್ಮ ಪ್ರಿಯತಮನ ಪ್ರೀತಿಯಿಂದ ಅವರು ಇನ್ನೂ ಆನಂದಿಸಿದರು. ॥ ೨೨ ॥ ಪರೀಕ್ಷಿತನೇ! ಬಳಿಕ ಗೋಪಿಯರೆಲ್ಲರೂ ಶ್ರೀಕೃಷ್ಣನು ಇತ್ತ ಪವಿತ್ರವಾದ ತಮ್ಮ-ತಮ್ಮ ವಸ್ತ್ರಗಳನ್ನು ಧರಿಸಿಕೊಂಡರು. ಆದರೆ ಅವರು ಒಂದು ಹೆಜ್ಜೆಯನ್ನೂ ಮುಂದಿಡಲಾರದಷ್ಟು ಅವರ ಮನಸ್ಸನ್ನು ಶ್ರೀಕೃಷ್ಣನು ಆಕರ್ಷಿಸಿಬಿಟ್ಟಿದ್ದನು. ತಮ್ಮ ಪ್ರಿಯತಮನ ಸಮಾಗಮನಕ್ಕಾಗಿ ಅವರು ಸಿಂಗರಿಸಿಕೊಂಡು, ನಾಚಿಕೆಯಿಂದ ಕುಡಿನೋಟದಿಂದ ಶ್ರೀಕೃಷ್ಣನನ್ನು ನೋಡುತ್ತಾ ಅಲ್ಲೇ ನಿಂತುಬಿಟ್ಟರು. ॥ ೨೩ ॥

ಆ ಕುಮಾರಿಯರು ತನ್ನ ಚರಣಕಮಲಗಳನ್ನು ಸ್ಪರ್ಶಿಸುವ ಇಚ್ಛೆಯಿಂದ ಕಾತುರರಾಗಿಯೇ ವ್ರತವನ್ನು ಕೈಗೊಂಡಿದ್ದರು ಹಾಗೂ ಅವರ ಜೀವನದ ಇದೊಂದೇ ಸಂಕಲ್ಪವಿದ್ದುದನ್ನು ನೋಡಿದ ಭಗವಾನ್ ದಾಮೋದರನು ಅವರ ಪ್ರೇಮಕ್ಕೆ ಮನಸೋತು ಇಂತೆಂದನು. ॥ ೨೪ ॥ ಪ್ರೇಯಸಿಯರಾದ ಕುಮಾರಿಯರೇ! ಸಾಧ್ವಿಯರೇ! ನನ್ನ ಸೇವೆ ಮಾಡಬೇಕೆನ್ನುವ ನಿಮ್ಮ ಸಂಕಲ್ಪವನ್ನು ನಾನು ತಿಳಿದಿರುತ್ತೇನೆ. ನಿಮ್ಮ ಈ ಅಭಿಲಾಷೆಯನ್ನು ಅನುಮೋದಿಸುತ್ತೇನೆ. ನಿಮ್ಮ ಸಂಕಲ್ಪವು ಸತ್ಯವಾಗಿ ಪರಿಣಮಿಸುವುದು. ನೀವು ನನ್ನನ್ನು ಮನತುಂಬಿ ಪೂಜಿಸಿರುವಿರಿ. ॥ ೨೫ ॥

ನ ಮಯ್ಯಾವೇಶಿತಧಿಯಾಂ ಕಾಮಃ ಕಾಮಾಯ ಕಲ್ಪತೇ ।
ಭರ್ಜಿತಾ ಕ್ವಥಿತಾ ಧಾನಾ ಪ್ರಾಯೋ ಬೀಜಾಯ ನೇಷ್ಯತೇ ॥ ೨೬ ॥

ಯಾತಾಬಲಾ ವ್ರಜಂ ಸಿದ್ಧಾ ಮಯೇಮಾ ರಂಸ್ಯಥ ಕ್ಷಪಾಃ ।
ಯದುದ್ದಿಶ್ಯ ವ್ರತಮಿದಂ ಚೇರುರಾರ್ಯಾರ್ಚನಂ ಸತೀಃ ॥ ೨೭ ॥

*ಶ್ರೀಶುಕ ಉವಾಚ*

ಇತ್ಯಾದಿಷ್ಟಾ ಭಗವತಾ ಲಬ್ಧಕಾಮಾಃ ಕುಮಾರಿಕಾಃ ।
ಧ್ಯಾಯಂತ್ಯಸ್ತತ್ಪದಾಂಭೋಜಂ ಕೃಚ್ಛ್ರಾನ್ನಿರ್ವಿವಿಶುರ್ವ್ರಜಮ್ ॥ ೨೮ ॥

ಅಥ ಗೋಪೈಃ ಪರಿವೃತೋ ಭಗವಾನ್ ದೇವಕೀಸುತಃ ।
ವೃಂದಾವನಾದ್ಗತೋ ದೂರಂ ಚಾರಯನ್ಗಾಃ ಸಹಾಗ್ರಜಃ ॥ ೨೯ ॥

ನಿದಾಘಾರ್ಕಾತಪೇ ತಿಗ್ಮೇ ಛಾಯಾಭಿಃ ಸ್ವಾಭಿರಾತ್ಮನಃ ।
ಆತಪತ್ರಾಯಿತಾನ್ವೀಕ್ಷ್ಯ ದ್ರುಮಾನಾಹ ವ್ರಜೌಕಸಃ ॥ ೩೦ ॥

ಹೇ ಸ್ತೋಕಕೃಷ್ಣ ಹೇ ಅಂಶೋ ಶ್ರೀದಾಮನ್ಸುಬಲಾರ್ಜುನ ।
ವಿಶಾಲರ್ಷಭ ತೇಜಸ್ವಿನ್ ದೇವಪ್ರಸ್ಥ ವರೂಥಪ ॥ ೩೧ ॥

ಪಶ್ಯತೈತಾನ್ಮಹಾಭಾಗಾನ್ ಪರಾರ್ಥೈಕಾಂತಜೀವಿತಾನ್ ।
ವಾತವರ್ಷಾತಪಹಿಮಾನ್ ಸಹಂತೋ ವಾರಯಂತಿ ನಃ ॥ ೩೨ ॥

ಅಹೋ ಏಷಾಂ ವರಂ ಜನ್ಮ ಸರ್ವಪ್ರಾಣ್ಯುಪಜೀವನಮ್ ।
ಸುಜನಸ್ಯೇವ ಯೇಷಾಂ ವೈ ವಿಮುಖಾ ಯಾಂತಿ ನಾರ್ಥಿನಃ ॥ ೩೩ ॥

ಪತ್ರಪುಷ್ಪಫಲಚ್ಛಾಯಾಮೂಲವಲ್ಕಲದಾರುಭಿಃ ।
ಗಂಧನಿರ್ಯಾಸಭಸ್ಮಾಸ್ಥಿತೋಕ್ಮೈಃ ಕಾಮಾನ್ ವಿತನ್ವತೇ ॥ ೩೪ ॥

ಏತಾವಜ್ಜನ್ಮಸಾಫಲ್ಯಂ ದೇಹಿನಾಮಿಹ ದೇಹಿಷು ।
ಪ್ರಾಣೈರರ್ಥೈರ್ಧಿಯಾ ವಾಚಾ ಶ್ರೇಯ ಏವಾಚರೇತ್ ಸದಾ ॥ ೩೫ ॥

ಹುರಿದು ಬೆತ್ತಿದ ಬೀಜವು ಹೇಗೆ ಮೊಳೆಯುವುದಿಲ್ಲವೋ ಹಾಗೆಯೇ ತಮ್ಮ ಮನಸ್ಸು ಪ್ರಾಣಗಳನ್ನು ನನ್ನಲ್ಲಿ ಅರ್ಪಿಸುವವರ ಕಾಮನೆಗಳು ಸಾಂಸಾರಿಕ ಭೋಗಗಳ ಕಡೆಗೆ ಕೊಂಡುಹೋಗಲು ಸಮರ್ಥರಾಗುವುದಿಲ್ಲ. ಆ ಕಾಮನೆಗಳು ಕಾಮನೆಗಳೇ ಅಲ್ಲ. ॥ ೨೬॥ ಕುಮಾರಿಯರೇ! ಈಗ ನೀವು ನಿಮ್ಮ-ನಿಮ್ಮ ಮನೆಗಳಿಗೆ ಹೊರಟುಹೋಗಿರಿ. ನಿಮ್ಮ ಸಾಧನೆಯು ಸಿದ್ಧಿಸಿದೆ. ಮುಂದೆ ಬರಲಿರುವ ಶರದೃತುವಿನ ರಾತ್ರಿಯಲ್ಲಿ ನನ್ನೊಡನೆ ನೀವು ವಿಹರಿಸುವಿರಂತೆ. ಈ ಕಾರಣಕ್ಕಾಗಿಯೇ ಅಲ್ಲವೇ ನೀವು ವ್ರತನಿಷ್ಠರಾಗಿ ಕಾತ್ಯಾಯಿನೀ ದೇವಿಯನ್ನು ಪೂಜಿಸಿದ್ದು? ॥ ೨೭॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಭಗವಂತನ ಈ ಅಪ್ಪಣೆಯನ್ನು ಪಡೆದು ಆ ಗೋಪಿಕೆಯರು ಭಗವಾನ್ ಶ್ರೀಕೃಷ್ಣನ ಚರಣಕಮಲಗಳನ್ನು ಧ್ಯಾನಿಸುತ್ತಾ, ಅವನನ್ನು ಬಿಟ್ಟುಹೋಗಲು ಮನಸ್ಸಿಲ್ಲದ ಮನಸ್ಸಿನಿಂದ ಬಹಳ ಕಷ್ಟದಿಂದ ವ್ರಜಕ್ಕೆ ಮರಳಿದರು. ಈಗ ಅವರ ಸಮಸ್ತ ಕಾಮನೆಗಳು ಪೂರ್ಣವಾಗಿ ಹೋಗಿದ್ದವು. ॥ ೨೮ ॥

ಪ್ರಿಯ ಪರೀಕ್ಷಿತನೇ! ಒಂದು ದಿನ ಭಗವಾನ್ ಶ್ರೀಕೃಷ್ಣನು ಬಲರಾಮ ಮತ್ತು ಗೋಪಬಾಲಕರೊಂದಿಗೆ ಗೋವುಗಳನ್ನು ಮೇಯಿಸುತ್ತಾ ವೃಂದಾವನದಿಂದ ಬಹಳದೂರ ಹೋಗಿ ಬಿಟ್ಟಿದ್ದನು. ॥ ೨೯ ॥ ಅದು ಗ್ರೀಷ್ಮಋತುವಾಗಿದ್ದು ಸೂರ್ಯನ ಕಿರಣಗಳು ತೀಕ್ಷ್ಣವಾಗಿದ್ದುವು. ಆದರೆ ದಟ್ಟವಾದ ವೃಕ್ಷಗಳು ಶ್ರೀಕೃಷ್ಣನಿಗೆ ಛತ್ರಿಯಂತೆ ನೆರಳನ್ನು ಕೊಡುತ್ತಿದ್ದವು. ಕೊಡೆಗಳಂತೆ ನೆರಳನ್ನು ನೀಡುತ್ತದ್ದ ವೃಕ್ಷಗಳನ್ನು ನೋಡಿ ಭಗವಂತನು ಸ್ತೋಕಕೃಷ್ಣ ಅಂಶು, ಶ್ರೀದಾಮ, ಸುಬಲ, ಅರ್ಜುನ, ವಿಶಾಲ, ಋಷಭ, ತೇಜಸ್ವೀ, ದೇವಪ್ರಸ್ಥ, ವರೂಥಪ ಮೊದಲಾದ ಗೋಪಬಾಲಕರನ್ನು ಸಂಬೋಧಿಸಿ ಇಂತೆಂದನು. ॥ ೩೦-೩೧ ॥ ನನ್ನ ಪ್ರಿಯ ಮಿತ್ರರೇ! ಇದೋ ನೋಡಿರಿ. ಈ ವೃಕ್ಷಗಳು ಎಷ್ಟು ಭಾಗ್ಯಶಾಲಿಗಳಾಗಿವೆ! ಇವುಗಳ ಜೀವನವು ಕೇವಲ ಬೇರೆಯವರ ಒಳಿತಿಗಾಗಿಯೇ ಇದೆ. ಇವುಗಳು ತಮ್ಮ ಮೇಲೆ ಬೀಳುವ ಬಿಸಿಲನ್ನೂ, ಮಳೆಯನ್ನೂ, ಹಿಮವನ್ನೂ, ಗಾಳಿಯನ್ನೂ ಸಹಿಸಿಕೊಂಡು ನಮ್ಮನ್ನು ಅವುಗಳಿಂದ ರಕ್ಷಿಸುತ್ತವೆ. ॥ ೩೨ ॥ ಇವುಗಳ ಜೀವನವೇ ಸರ್ವಶ್ರೇಷ್ಠವಾಗಿದೆ ಎಂದು ನಾನು ಹೇಳುತ್ತೇನೆ. ಏಕೆಂದರೆ, ಇವುಗಳ ಮೂಲಕ ಎಲ್ಲರಿಗೂ ಆಸರೆ ಸಿಗುತ್ತದೆ, ಅವರ ಜೀವನ ನಿರ್ವಾಹವೂ ಆಗುತ್ತದೆ. ಸಜ್ಜನರ ಮನೆಯಿಂದ ಯಾರೇ ಯಾಚಕನು ಬರಿಗೈಯಿಂದ ಮರಳುವುದಿಲ್ಲವೋ ಹಾಗೆಯೇ ಈ ವೃಕ್ಷಗಳಿಂದಲೂ ಕೂಡ ಎಲ್ಲರಿಗೆ ಏನಾದರೂ ಸಿಕ್ಕಿಯೇ ಸಿಗುತ್ತದೆ. ॥ ೩೩॥ ಇವುಗಳು ತನ್ನ ಎಲೆ, ಹೂವು, ಹಣ್ಣು, ನೆರಳು, ಬೇರು, ನಾರು, ಸಿಪ್ಪೆ, ಸೌದೆ, ಗಂಧ, ಹಾಲು, ಬೂದಿ, ಇದ್ದಲು, ಚಿಗುರು, ರೆಂಬೆಗಳು ಇವುಗಳಿಂದ ಜನರ ಕಾಮನೆಗಳನ್ನು ಪೂರ್ಣಗೊಳಿಸುತ್ತವೆ. ॥ ೩೪ ॥ ನನ್ನ ಪ್ರಿಯ ಗೆಳೆಯರೇ! ಜಗತ್ತಿನಲ್ಲಿ ಬಹಳಷ್ಟು ಪ್ರಾಣಿಗಳಿದ್ದಾರೆ. ಆದರೆ ಸಾಧ್ಯವಿದ್ದಷ್ಟು ತಮ್ಮ ಧನದಿಂದ, ವಿವೇಕದಿಂದ, ವಿಚಾರದಿಂದ, ಮಾತಿನಿಂದ ಮತ್ತು ಪ್ರಾಣಗಳಿಂದ ಬೇರೆಯವರ ಒಳಿತನ್ನು ಮಾಡಿದಾಗಲೇ ಅವರ ಜೀವನ ಸಫಲವಾಗುತ್ತದೆ. ॥ ೩೫ ॥

ಇತಿ ಪ್ರವಾಲಸ್ತಬಕಫಲಪುಷ್ಪದಲೋತ್ಕರೈಃ ।
ತರೂಣಾಂ ನಮ್ರಶಾಖಾನಾಂ ಮಧ್ಯೇನ ಯಮುನಾಂ ಗತಃ
॥ ೩೬ ॥

ತತ್ರ ಗಾಃ ಪಾಯಯಿತ್ವಾಪಃ ಸುಮೃಷ್ಟಾಃ ಶೀತಲಾಃ ಶಿವಾಃ ।
ತತೋ ನೃಪ ಸ್ವಯಂ ಗೋಪಾಃ ಕಾಮಂ ಸ್ವಾದು ಪಪುರ್ಜಲಮ್
॥ ೩೭ ॥

ತಸ್ಯಾ ಉಪವನೇ ಕಾಮಂ ಚಾರಯಂತಃ ಪಶೂನ್ನೃಪ ।
ಕೃಷ್ಣರಾಮಾವುಪಾಗಮ್ಯ ಕ್ಷುಧಾರ್ತಾ ಇದಮಬ್ರುವನ್
॥ ೩೮ ॥

ಪರೀಕ್ಷಿತನೇ! ಇಕ್ಕೆಲಗಳಲ್ಲಿಯೂ ವೃಕ್ಷಗಳು ನವಪಲ್ಲವಗಳಿಂದಲೂ, ಹೂ-ಹಣ್ಣುಗಳಿಂದ, ನಿಬಿಡವಾದ ಎಲೆಗಳಿಂದಲೂ, ರೆಂಬೆ-ಕೊಂಬೆಗಳಿಂದ ನಳನಳಿಸುತ್ತಿದ್ದವು. ಅವುಗಳ ಕೊಂಬೆಗಳು ಭೂಮಿಯವರೆಗೆ ಬಾಗಿದ್ದವು. ಭಗವಾನ್ ಶ್ರೀಕೃಷ್ಣನು ಹೀಗೆ ಮಾತನಾಡುತ್ತಾ ಅವುಗಳ ನಡುವಿನಿಂದ ಯಮುನಾ ತೀರಕ್ಕೆ ಬಂದನು. ॥ ೩೬ ॥ ರಾಜನೇ! ಯಮುನೆಯ ನೀರು ಅತ್ಯಂತ ಮಧುರವೂ, ಶೀತಲವೂ, ಸ್ವಚ್ಛವೂ ಆಗಿತ್ತು. ಅವರೆಲ್ಲರೂ ಮೊದಲು ಗೋವುಗಳಿಗೆ ನೀರನ್ನು ಕುಡಿಸಿ, ಅನಂತರ ತಾವು ಯಥೇಚ್ಛವಾಗಿ ನೀರನ್ನು ಕುಡಿದರು. ॥ ೩೭ ॥ ಪರೀಕ್ಷಿತನೇ! ಅವರೆಲ್ಲರೂ ಯಮುನಾನದಿಯ ತೀರದ ಹಚ್ಚ-ಹಸಿರಾದ ಉಪವನದಲ್ಲಿ ಸ್ವಚ್ಛಂದವಾಗಿ ತಮ್ಮ ಹಸುಗಳನ್ನು ಮೇಯಿಸುತ್ತಿರುವ ಸಮಯ ಕೆಲವು ಹಸಿದಿರುವ ಗೊಲ್ಲಬಾಲಕರು ಕೃಷ್ಣ-ಬಲರಾಮರ ಬಳಿಗೆ ಹೋಗಿ ಹೀಗೆಂದರು – ॥ ೩೮ ॥

ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೨೨ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಗೋಪೀವಸ್ತ್ರಾಪಹಾರೋ ನಾಮ ದ್ವಾವಿಂಶೋಽಧ್ಯಾಯಃ ॥ ೨೨ ॥

# ಇಪ್ಪತ್ತಮೂರನೆಯ ಅಧ್ಯಾಯ

## ಯಜ್ಞಪತ್ನಿಯರ ಮೇಲೆ ಕೃಪೆ

*ಗೋಪಾ ಊಚುಃ*

ರಾಮ ರಾಮ ಮಹಾವೀರ್ಯ ಕೃಷ್ಣ ದುಷ್ಟನಿಬರ್ಹಣ ।
ಏಷಾ ವೈ ಬಾಧತೇ ಕ್ಷುನ್ನಸ್ತಚ್ಛಾಂತಿಂ ಕರ್ತುಮರ್ಹಥಃ
॥ ೧ ॥

*ಶ್ರೀಶುಕ ಉವಾಚ*

ಇತಿ ವಿಜ್ಞಾಪಿತೋ ಗೋಪೈರ್ಭಗವಾನ್ ದೇವಕೀಸುತಃ ।
ಭಕ್ತಾಯಾ ವಿಪ್ರಭಾರ್ಯಾಯಾಃ ಪ್ರಸೀದನ್ನಿದಮಬ್ರವೀತ್
॥ ೨ ॥

ಪ್ರಯಾತ ದೇವಯಜನಂ ಬ್ರಾಹ್ಮಣಾ ಬ್ರಹ್ಮವಾದಿನಃ ।
ಸತ್ರಮಾಂಗಿರಸಂ ನಾಮ ಹ್ಯಾಸತೇ ಸ್ವರ್ಗಕಾಮ್ಯಯಾ
॥ ೩ ॥

ತತ್ರ ಗತ್ವೌದನಂ ಗೋಪಾ ಯಾಚತಾಸ್ಮದ್ವಿಸರ್ಜಿತಾಃ ।
ಕೀರ್ತಯಂತೋ ಭಗವತ ಆರ್ಯಸ್ಯ ಮಮ ಚಾಭಿಧಾಮ್
॥ ೪ ॥

ಇತ್ಯಾದಿಷ್ಟಾ ಭಗವತಾ ಗತ್ವಾಯಾಚಂತ ತೇ ತಥಾ ।
ಕೃತಾಂಜಲಿಪುಟಾ ವಿಪ್ರಾನ್ ದಂಡವತ್ಪತಿತಾ ಭುವಿ
॥ ೫ ॥

**ಗೋಪಾಲಕರು ಹೇಳುತ್ತಾರೆ** – ನಯನಾಭಿರಾಮ ಬಲರಾಮನೇ! ನೀನು ಮಹಾಪರಾಕ್ರಮಿಯಾಗಿರುವೆ. ಚಿತ್ತಚೋರನಾದ ಶ್ಯಾಮಸುಂದರನೇ! ನೀನು ಹಲವಾರು ದುಷ್ಟರನ್ನು ಸಂಹರಿಸಿರುವೆ. ಈಗ ಈ ಹಸಿವೂ ಕೂಡ ನಮ್ಮನ್ನು ಕಾಡುತ್ತಿದೆ. ಆದ್ದರಿಂದ ನೀವಿಬ್ಬರೂ ಈ ಹಸಿವನ್ನು ಶಾಂತಗೊಳಿಸಲು ಏನಾದರೂ ಉಪಾಯಮಾಡಿರಿ. ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಓ ಪರೀಕ್ಷಿತನೇ! ದೇವಕೀನಂದನ ಶ್ರೀಕೃಷ್ಣನಲ್ಲಿ ಗೋಪಾಲಕರು ಹೀಗೆ ಪ್ರಾರ್ಥಿಸಿದಾಗ ಅವನು ಮಥುರೆಯ ತನ್ನ ಭಕ್ತರಾದ ಬ್ರಾಹ್ಮಣಪತ್ನಿಯರ ಮೇಲೆ ಅನುಗ್ರಹವನ್ನು ತೋರಲಿಕ್ಕಾಗಿ ಹೀಗೆಂದನು – ॥ ೨ ॥ ಪ್ರಿಯ ಮಿತ್ರರೇ! ಇಲ್ಲಿಂದ ಸ್ವಲ್ಪ ದೂರದಲ್ಲೇ ವೇದವಾದಿಗಳಾದ ಬ್ರಾಹ್ಮಣರು ಸ್ವರ್ಗದ ಕಾಮನೆಯಿಂದ ಆಂಗಿರಸವೆಂಬ ಯಜ್ಞವನ್ನು ಮಾಡುತ್ತಿದ್ದಾರೆ. ನೀವು ಅವರ ಯಜ್ಞಶಾಲೆಗೆ ಹೋಗಿರಿ. ॥ ೩ ॥ ಗೋಪಾಲಕರೇ! ನಾನು ಕಳಿಸಿದ್ದರಿಂದ ನೀವು ಅಲ್ಲಿಗೆ ಹೋಗಿ ನನ್ನ ಅಣ್ಣ ಬಲರಾಮನ ಮತ್ತು ನನ್ನ ಹೆಸರನ್ನು ಹೇಳಿ ಸ್ವಲ್ಪ ಅನ್ನ ಭೋಜನ ಸಾಮಗ್ರಿಗಳನ್ನು ಅವರಿಂದ ಕೇಳಿ ತನ್ನಿರಿ. ॥ ೪ ॥ ಭಗವಂತನು ಹೀಗೆ ಆಜ್ಞಾಪಿಸಿದಾಗ ಗೊಲ್ಲಬಾಲಕರು ಆ ಬ್ರಾಹ್ಮಣರ ಯಜ್ಞಶಾಲೆಗೆ ಹೋಗಿ ಅವರಲ್ಲಿ ಭಗವಂತನ ಆಜ್ಞೆಯಂತೆ ಅನ್ನವನ್ನು ಯಾಚಿಸಿದರು. ಮೊದಲಿಗೆ ಅವರು ಸಾಷ್ಟಾಂಗ ನಮಸ್ಕಾರಮಾಡಿ ಮತ್ತೆ ಕೈ ಜೋಡಿಸಿಕೊಂಡು ಅವರಲ್ಲಿ ಕೇಳಿಕೊಂಡರು. ॥ ೫ ॥

ಹೇ ಭೂಮಿದೇವಾಃ ಶೃಣುತ
ಕೃಷ್ಣಸ್ಯಾದೇಶಕಾರಿಣಃ ।
ಪ್ರಾಪ್ತಾನ್‌ಜಾನೀತ ಭದ್ರಂ ವೋ
ಗೋಪಾನ್ನೋ ರಾಮಚೋದಿತಾನ್ ॥ ೬ ॥

ಗಾಶ್ಚಾರಯಂತಾವವಿದೂರ ಓದನಂ
ರಾಮಾಚ್ಯುತೌ ವೋ ಲಷತೋ ಬುಭುಕ್ಷಿತೌ ।
ತಯೋರ್ದ್ವಿಜಾ ಓದನಮರ್ಥಿನೋರ್ಯದಿ
ಶ್ರದ್ಧಾ ಚ ವೋ ಯಚ್ಛತ ಧರ್ಮವಿತ್ತಮಾಃ ॥ ೭ ॥

ದೀಕ್ಷಾಯಾಃ ಪಶುಸಂಸ್ಥಾಯಾಃ ಸೌತ್ರಾಮಣ್ಯಾಶ್ಚ ಸತ್ತಮಾಃ ।
ಅನ್ಯತ್ರ ದೀಕ್ಷಿತಸ್ಯಾಪಿ ನಾನ್ನಮಶ್ನನ್ಹಿ ದುಷ್ಯತಿ
॥ ೮ ॥

ಇತಿ ತೇ ಭಗವದ್ಯಾಚ್ಞಾಂ ಶೃಣ್ವಂತೋಽಪಿ ನ ಶುಶ್ರುವುಃ ।
ಕ್ಷುದ್ರಾಶಾ ಭೂರಿಕರ್ಮಾಣೋ ಬಾಲಿಶಾ ವೃದ್ಧಮಾನಿನಃ
॥ ೯ ॥

ದೇಶಃ ಕಾಲಃ ಪೃಥಗ್ದ್ರವ್ಯಂ ಮಂತ್ರತಂತ್ರರ್ತ್ವಿಜೋಽಗ್ನಯಃ ।
ದೇವತಾ ಯಜಮಾನಶ್ಚ ಕ್ರತುರ್ಧರ್ಮಶ್ಚ ಯನ್ಮಯಃ
॥ ೧೦ ॥

ತಂ ಬ್ರಹ್ಮ ಪರಮಂ ಸಾಕ್ಷಾದ್ಭಗವಂತಮಧೋಕ್ಷಜಮ್ ।
ಮನುಷ್ಯದೃಷ್ಟ್ಯಾ ದುಷ್ಪ್ರಜ್ಞಾ ಮರ್ತ್ಯಾತ್ಮಾನೋ ನ ಮೇನಿರೇ
॥ ೧೧ ॥

ನ ತೇ ಯದೋಮಿತಿ ಪ್ರೋಚುರ್ನ ನೇತಿ ಚ ಪರಂತಪ ।
ಗೋಪಾ ನಿರಾಶಾಃ ಪ್ರತ್ಯೇತ್ಯ ತಥೋಚುಃ ಕೃಷ್ಣರಾಮಯೋಃ
॥ ೧೨ ॥

ತದುಪಾಕರ್ಣ್ಯ ಭಗವಾನ್ ಪ್ರಹಸ್ಯ ಜಗದೀಶ್ವರಃ ।
ವ್ಯಾಜಹಾರ ಪುನರ್ಗೋಪಾನ್ ದರ್ಶಯನ್ ಲೌಕಿಕೀಂ ಗತಿಮ್
॥ ೧೩ ॥

ಮಾಂ ಜ್ಞಾಪಯತ ಪತ್ನೀಭ್ಯಃ ಸಸಂಕರ್ಷಣಮಾಗತಮ್ ।
ದಾಸ್ಯಂತಿ ಕಾಮಮನ್ನಂ ವಃ ಸ್ನಿಗ್ಧಾ ಮಯ್ಯುಷಿತಾ ಧಿಯಾ
॥ ೧೪ ॥

ಭೂಸುರೋತ್ತಮರೇ! ನಿಮಗೆ ಮಂಗಳವಾಗಲಿ! ವ್ರಜದ ಗೊಲ್ಲರಾದ ನಾವು ನಿಮ್ಮಲ್ಲಿ ಬೇಡಿಕೊಳ್ಳುವೆವು. ಭಗವಾನ್ ಶ್ರೀಕೃಷ್ಣನು ಮತ್ತು ಬಲರಾಮರು ಇವರ ಅಪ್ಪಣೆಯಂತೆ ನಾವು ನಿಮ್ಮಲ್ಲಿಗೆ ಬಂದಿರುವೆವು. ತಾವು ನಮ್ಮ ಮಾತನ್ನು ಆಲಿಸಿರಿ. ॥ ೬ ॥ ಭಗವಾನ್ ಶ್ರೀಕೃಷ್ಣ ಬಲರಾಮರು ಹಸುಗಳನ್ನು ಮೇಯಿಸುತ್ತಾ ಇಲ್ಲಿಂದ ಸ್ವಲ್ಪವೇ ಅಂತರದಲ್ಲಿ ಬಂದಿರುವರು. ಅವರಿಗೆ ಹಸಿವಾಗಿದೆ ಹಾಗೂ ನೀವು ಅವರಿಗೆ ಸ್ವಲ್ಪ ಅನ್ನವನ್ನು ನೀಡಬೇಕೆಂದು ಅವರು ಬಯಸುತ್ತಿದ್ದಾರೆ. ವಿಪ್ರೋತ್ತಮರೇ! ನೀವು ಧರ್ಮದ ಮರ್ಮವನ್ನು ಬಲ್ಲವರಾಗಿರುವಿರಿ. ನಿಮಗೆ ಶ್ರದ್ಧೆ ಇದ್ದರೆ ಆ ಭೋಜನಾರ್ಥಿಗಳಿಗೆ ಸ್ವಲ್ಪ ಅನ್ನವನ್ನು ಕೊಡಿರಿ. ॥ ೭ ॥ ಸಜ್ಜನರೇ! ಪಶುಬಲಿ ಇರುವ ಯಜ್ಞದಲ್ಲಿ ಮತ್ತು ಸೌತ್ರಾಮಣಿ ಯಜ್ಞದಲ್ಲಿ ದೀಕ್ಷಿತನ ಅನ್ನವನ್ನು ತಿನ್ನಬಾರದು. ಇದಲ್ಲದ ಬೇರೆ ಯಾವುದೇ ಸಮಯದಲ್ಲಿಯೂ ಯಜ್ಞದ ದೀಕ್ಷಿತನ ಅನ್ನವನ್ನು ತಿನ್ನುವುದರಲ್ಲಿ ದೋಷವಿರುವುದಿಲ್ಲ. ॥ ೮ ॥ ಪರೀಕ್ಷಿತನೇ! ಹೀಗೆ ಭಗವಂತನು ಅನ್ನವನ್ನು ಕೇಳಿದ ಮಾತಿನ ಕಡೆಗೆ ಆ ಬ್ರಾಹ್ಮಣರು ಯಾವುದೇ ಗಮನಕೊಡಲಿಲ್ಲ. ಅವರು ಸ್ವರ್ಗದ ತುಚ್ಛ ಫಲವನ್ನೇ ಬಯಸುತ್ತಿದ್ದರು. ಅದಕ್ಕಾಗಿ ಶ್ರಮಸಾಧ್ಯವಾದ ಮಹಾಯಜ್ಞದಲ್ಲಿ ತೊಡಗಿದ್ದರು. ನಿಜ ಹೇಳಬೇಕೆಂದರೆ, ಆ ಬ್ರಾಹ್ಮಣರು ಜ್ಞಾನದ ದೃಷ್ಟಿಯಿಂದ ಬಾಲಕರೇ ಆಗಿದ್ದರೂ ತಮ್ಮನ್ನು ಜ್ಞಾನವೃದ್ಧರೆಂದೇ ತಿಳಿಯುತ್ತಿದ್ದರು. ॥ ೯ ॥ ಪರೀಕ್ಷಿತನೇ! ದೇಶ, ಕಾಲ, ಅನೇಕ ರೀತಿಯ ಸಾಮಗ್ರಿಗಳು, ಬೇರೆ-ಬೇರೆ ಕರ್ಮಗಳಲ್ಲಿ ವಿಧಿಯುಕ್ತ ಮಂತ್ರಗಳು, ಅನುಷ್ಠಾನ ಪದ್ಧತಿ, ಋತ್ವಿಜ, ಬ್ರಹ್ಮನೇ ಆದಿ ಯಜ್ಞಮಾಡುವವರು, ಅಗ್ನಿ, ದೇವತೆ, ಯಜಮಾನ, ಯಜ್ಞ ಮತ್ತು ಧರ್ಮ - ಇವೆಲ್ಲದರ ರೂಪದಲ್ಲಿ ಏಕಮಾತ್ರ ಭಗವಂತನೇ ಪ್ರಕಟನಾಗುತ್ತಿದ್ದಾನೆ. ॥ ೧೦ ॥ ಅಂತಹವನೇ ಇಂದ್ರಿಯಾತೀತ, ಪರಬ್ರಹ್ಮ ಸಾಕ್ಷಾತ್ ಭಗವಾನ್ ಶ್ರೀಕೃಷ್ಣನೇ ಗೋಪಾಲಕರ ಮೂಲಕ ಅನ್ನವನ್ನು ಬೇಡುತ್ತಿರುವನು. ಆದರೆ ತಮ್ಮನ್ನು ಶರೀರವೆಂದೇ ತಿಳಿದಿರುವ ಈ ಮೂರ್ಖರು ಭಗವಂತನನ್ನು ಸಾಮಾನ್ಯ ಮನುಷ್ಯನೆಂದೇ ತಿಳಿದು ಅವನನ್ನು ಸಮ್ಮಾನಿಸಲಿಲ್ಲ. ॥ ೧೧ ॥ ಪರೀಕ್ಷಿತನೇ! ಆ ಬ್ರಾಹ್ಮಣರು ಆಗಲಿ ಅಥವಾ ಇಲ್ಲ ಎಂದು ಏನನ್ನೂ ಹೇಳದಿದ್ದಾಗ ಗೊಲ್ಲಬಾಲಕರಿಗೆ ನಿರಾಸೆ ಉಂಟಾಯಿತು. ಅವರು ಮರಳಿ ಬಂದು ಅಲ್ಲಿಯ ಎಲ್ಲ ವೃತ್ತಾಂತವನ್ನು ಬಲರಾಮ-ಕೃಷ್ಣರಿಗೆ ತಿಳಿಸಿದರು. ॥ ೧೨ ॥ ಸಕಲ ಜಗತ್ತಿನ ಸ್ವಾಮಿ ಭಗವಾನ್ ಶ್ರೀಕೃಷ್ಣನು ಅವರ ಮಾತನ್ನು ಕೇಳಿ ನಗತೊಡಗಿದನು. ಜಗತ್ತಿನಲ್ಲಿ ಅಸಫಲತೆ ಪದೇ-ಪದೇ ಉಂಟಾಗುತ್ತದೆ, ಆದರೆ ಅದರಿಂದ ನಿರಾಶರಾಗಬಾರದು, ಪುನಃ ಪುನಃ ಪ್ರಯತ್ನ ಮಾಡುವುದರಿಂದ ಖಂಡಿತವಾಗಿ ಸಫಲತೆ ಉಂಟಾಗುತ್ತದೆ ಎಂದು ಗೋಪಾಲಕರ ಬಳಿ ಅವನು ಹೇಳಿ ಮತ್ತೆ ಇಂತೆಂದನು. ॥ ೧೩ ॥ ಪ್ರಿಯರಾದ ಗೋಪಬಾಲಕರೇ! ಈ ಬಾರಿ ನೀವುಗಳು ಆ ಬ್ರಾಹ್ಮಣರ ಪತ್ನಿಯರ ಬಳಿಗೆ ಹೋಗಿ ಅವರಲ್ಲಿ ರಾಮ-ಶ್ಯಾಮರು ಇಲ್ಲಿಗೆ ಬಂದಿರುವರು ಎಂದು ಹೇಳಿರಿ. ನೀವು ಬಯಸಿದಷ್ಟು ಭೋಜನವನ್ನು ಅವರು ನಿಮಗೆ ಕೊಡುವರು. ಅವರು ನನ್ನನ್ನು ಬಹಳವಾಗಿ ಪ್ರೀತಿಸುತ್ತಾರೆ. ಅವರ ಮನಸ್ಸು ಸದಾಕಾಲ ನನ್ನಲ್ಲೇ ತೊಡಗಿರುತ್ತದೆ. ॥ ೧೪ ॥

ಗತ್ವಾಥ ಪತ್ನೀಶಾಲಾಯಾಂ ದೃಷ್ಟ್ವಾಽಽಸೀನಾಃ ಸ್ವಲಂಕೃತಾಃ ।
ನತ್ವಾ ದ್ವಿಜಸತೀರ್ಗೋಪಾಃ ಪ್ರಶ್ರಿತಾ ಇದಮಬ್ರುವನ್ ॥ ೧೫ ॥

ನಮೋ ವೋ ವಿಪ್ರಪತ್ನೀಭ್ಯೋ ನಿಬೋಧತ ವಚಾಂಸಿ ನಃ ।
ಇತೋಽವಿದೂರೇ ಚರತಾ ಕೃಷ್ಣೇನೇಹೇಷಿತಾ ವಯಮ್ ॥ ೧೬ ॥

ಗಾಶ್ಚಾರಯನ್ಸ ಗೋಪಾಲೈಃ ಸರಾಮೋ ದೂರಮಾಗತಃ ।
ಬುಭುಕ್ಷಿತಸ್ಯ ತಸ್ಯಾನ್ನಂ ಸಾನುಗಸ್ಯ ಪ್ರದೀಯತಾಮ್ ॥ ೧೭ ॥

ಶ್ರುತ್ವಾಚ್ಯುತಮುಪಾಯಾತಂ ನಿತ್ಯಂ ತದ್ದರ್ಶನೋತ್ಸುಕಾಃ ।
ತತ್ಕಥಾಕ್ಷಿಪ್ತಮನಸೋ ಬಭೂವುರ್ಜಾತಸಂಭ್ರಮಾಃ ॥ ೧೮ ॥

ಚತುರ್ವಿಧಂ ಬಹುಗುಣಮನ್ನಮಾದಾಯ ಭಾಜನೈಃ ।
ಅಭಿಸಸ್ರುಃ ಪ್ರಿಯಂ ಸರ್ವಾಃ ಸಮುದ್ರಮಿವ ನಿಮ್ನಗಾಃ ॥ ೧೯ ॥

ನಿಷಿಧ್ಯಮಾನಾಃ ಪತಿಭಿರ್ಭ್ರಾತೃಭಿರ್ಬಂಧುಭಿಃ ಸುತೈಃ ।
ಭಗವತ್ಯುತ್ತಮಶ್ಲೋಕೇ ದೀರ್ಘಶ್ರುತಧೃತಾಶಯಾಃ ॥ ೨೦ ॥

ಯಮುನೋಪವನೇಽಶೋಕನವಪಲ್ಲವಮಂಡಿತೇ ।
ವಿಚರಂತಂ ವೃತಂ ಗೋಪೈಃ ಸಾಗ್ರಜಂ ದದೃಶುಃ ಸ್ತ್ರಿಯಃ ॥ ೨೧ ॥

ಶ್ಯಾಮಂ ಹಿರಣ್ಯಪರಿಧಿಂ ವನಮಾಲ್ಯಬರ್ಹ-
ಧಾತುಪ್ರವಾಲನಟವೇಷಮನುವ್ರತಾಂಸೇ ।
ವಿನ್ಯಸ್ತಹಸ್ತಮಿತರೇಣ ಧುನಾನಮಬ್ಜಂ
ಕರ್ಣೋತ್ಪಲಾಲಕಕಪೋಲಮುಖಾಬ್ಜಹಾಸಮ್ ॥ ೨೨ ॥

ಶ್ರೀಕೃಷ್ಣನ ಅಪ್ಪಣೆಯಂತೆ ಗೋಪಾಲಕರು ಪತ್ನೀಶಾಲೆಗೆ ಹೋದರು. ಅಲ್ಲಿ ಬ್ರಾಹ್ಮಣಪತ್ನಿಯರು ಸುಂದರವಾದ ವಸ್ತ್ರಗಳನ್ನುಟ್ಟು ಸರ್ವಾಲಂಕಾರಗಳಿಂದ ಭೂಷಿತೆಯರಾಗಿ ಕುಳಿತಿದ್ದರು. ಗೋಪಾಲಕರು ದ್ವಿಜಪತ್ನಿಯರಿಗೆ ನಮಸ್ಕರಿಸಿ ವಿನೀತರಾಗಿ ಹೀಗೆ ಹೇಳಿದರು. ॥ ೧೫ ॥ ವಿಪ್ರಪತ್ನಿಯರಾದ ನಿಮಗೆ ನಾವು ನಮಸ್ಕರಿಸುತ್ತಿದ್ದೇವೆ. ನೀವು ದಯಮಾಡಿ ನಮ್ಮ ಮಾತನ್ನು ಆಲಿಸಬೇಕು. ಭಗವಾನ್ ಶ್ರೀಕೃಷ್ಣನು ಇಲ್ಲಿಂದ ಸ್ವಲ್ಪ ದೂರದಲ್ಲೇ ಬಂದಿರುವನು ಹಾಗೂ ಅವನೇ ನಮ್ಮನ್ನು ನಿಮ್ಮಲ್ಲಿಗೆ ಕಳಿಸಿರುವನು. ॥ ೧೬ ॥ ಅವನು ಗೋಪಬಾಲಕರೊಂದಿಗೆ ಮತ್ತು ಬಲರಾಮನೊಂದಿಗೆ ಹಸುಗಳನ್ನು ಮೇಯಿಸುತ್ತಾ ಈ ಕಡೆ ಬಹಳ ದೂರಕ್ಕೆ ಬಂದಿರುವನು. ಈಗ ಅವನಿಗೆ ಮತ್ತು ಅವನ ಜೊತೆಯವರಿಗೆ ತುಂಬಾ ಹಸಿವಾಗಿದೆ. ನೀವು ಅವನಿಗಾಗಿ ಏನಾದರು ಭೋಜನವನ್ನು ನೀಡಿರಿ. ॥ ೧೭ ॥ ಪರೀಕ್ಷಿತನೇ! ಆ ಬ್ರಾಹ್ಮಣಪತ್ನಿಯರು ಅನೇಕ ದಿನಗಳಿಂದ ಭಗವಂತನ ಮನೋಹರವಾದ ಲೀಲೆಗಳನ್ನು ಕೇಳುತ್ತಾ ಇದ್ದರು. ಅವರ ಮನಸ್ಸು ಶ್ರೀಕೃಷ್ಣನಲ್ಲೇ ನೆಟ್ಟುಹೋಗಿತ್ತು. ಯಾವ ರೀತಿಯಿಂದಲಾದರೂ ಶ್ರೀಕೃಷ್ಣನ ದರ್ಶನವಾಗಬೇಕೆಂದು ಸದಾಕಾಲ ಉತ್ಸುಕರಾಗಿದ್ದರು. ಅಚ್ಯುತನು ನಮ್ಮ ಸಮೀಪಕ್ಕೆ ಬಂದಿರುವನೆಂದು ತಿಳಿದೊಡನೆಯೇ ಅವರಿಗೆ ಸಂಭ್ರಮವೋ ಸಂಭ್ರಮ. ॥ ೧೮ ॥ ಅವರು ಪರಿಶುದ್ಧವಾದ ಪಾತ್ರೆಗಳಲ್ಲಿ ರುಚಿಕರವಾದ, ಹಿತಕರವಾದ ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯಗಳೆಂಬ ನಾಲ್ಕುವಿಧವಾದ ಭೋಜನ ಪದಾರ್ಥಗಳನ್ನು ತೆಗೆದುಕೊಂಡು ಅಣ್ಣ-ತಮ್ಮಂದಿರು, ಪತಿ-ಪುತ್ರರು ತಡೆಯುತ್ತಿದ್ದರೂ ಅದನ್ನು ಲೆಕ್ಕಿಸದೆ ನದಿಗಳು ಸಮುದ್ರದ ಕಡೆಗೆ ಸರ-ಸರನೆ ಹರಿದು ಹೋಗುವಂತೆ ತಮ್ಮ ಪ್ರಿಯತಮನಾದ ಭಗವಾನ್ ಶ್ರೀಕೃಷ್ಣನ ಬಳಿಗೆ ಹೋಗಲು ಹೊರಟರು. ಹಲವಾರು ದಿನಗಳಿಂದ ಶ್ರೀಕೃಷ್ಣನ ಲೀಲೆಗಳು, ಸೌಂದರ್ಯ, ಗುಣ, ಮಾಧುರ್ಯ - ಇವುಗಳನ್ನು ಕೇಳುತ್ತಲೇ ಇದ್ದ ದ್ವಿಜಪತ್ನಿಯರು ತಮ್ಮನ್ನು ಶ್ರೀಕೃಷ್ಣನಿಗೆ ಅರ್ಪಿಸಿಕೊಂಡುಬಿಟ್ಟಿದ್ದರು. ॥ ೧೯-೨೦ ॥ ಯಮುನಾ ನದಿಯ ತೀರದಲ್ಲಿ ಚಿಗುರುಗಳಿಂದ ಸಮಲಂಕೃತವಾದ ವೃಕ್ಷರಾಜಿಯಿಂದ ಕೂಡಿದ್ದ ಅಶೋಕವನದಲ್ಲಿ ಗೋಪರಿಂದ ಸುತ್ತುವರಿಯಲ್ಪಟ್ಟು ಅಣ್ಣನಾದ ಬಲರಾಮನೊಂದಿಗೆ ಸಂಚರಿಸುತ್ತಿದ್ದ ಮನಮೋಹಕನಾದ ಶ್ರೀಕೃಷ್ಣನನ್ನು ದ್ವಿಜಪತ್ನಿಯರು ನೋಡಿದರು. ॥ ೨೧ ॥ ಅವನ ಶ್ಯಾಮಲ ಶರೀರದ ಮೇಲೆ ಬಂಗಾರದಂತಹ ಪೀತಾಂಬರವನ್ನು ಧರಿಸಿದ್ದನು. ಕೊರಳಲ್ಲಿ ವನಮಾಲೆಯು ವಿರಾಜಿಸುತ್ತಿತ್ತು. ತಲೆಯ ಮೇಲೆ ನವಿಲು ಗರಿಯ ಕಿರೀಟವಿತ್ತು. ಮಣಿಶಿಲೆಯೇ ಮೊದಲಾದ ಧಾತುಗಳಿಂದ ಶರೀರದಲ್ಲಿ ಚಿತ್ರಿಸಿಕೊಂಡು, ಚಿಗುರೆಲೆಯ ಗುಚ್ಛಗಳಿಂದ ಶರೀರವನ್ನು ಸಿಂಗರಿಸಿಕೊಂಡು ನಾಟಕದ ನಟನಂತೆ ಅವನು ಕಾಣುತ್ತಿದ್ದನು. ಒಂದು ಕೈಯನ್ನು ಗೋಪಬಾಲಕನ ಹೆಗಲಮೇಲಿಟ್ಟುಕೊಂಡು, ಇನ್ನೊಂದು ಕೈಯಲ್ಲಿ ಕಮಲದ ಪುಷ್ಪವನ್ನು ಹಿಡಿದುಕೊಂಡು ಕುಣಿಸುತ್ತಿದ್ದನು. ಕಿವಿಗಳಲ್ಲಿ ಕಮಲದ ಕುಂಡಲಗಳಿದ್ದು, ಕೆನ್ನೆಗಳ ಮೇಲೆ ಮುಂಗುರುಳುಗಳು ನಲಿದಾಡುತ್ತಿದ್ದವು. ಮುಖಕಮಲವು ಮಂದವಾದ ಮುಗುಳ್ನಗೆಯಿಂದ ಪ್ರಫುಲ್ಲಿತವಾಗಿತ್ತು. ॥ ೨೨ ॥

ಪ್ರಾಯಃ ಶ್ರುತಪ್ರಿಯತಮೋದಯಕರ್ಣಪೂರೈ-
ರ್ಯಸ್ಮಿನ್ನಿಮಗ್ನಮನಸಸ್ತಮಥಾಕ್ಷಿರಂಧ್ರೈಃ ।
ಅಂತಃ ಪ್ರವೇಶ್ಯ ಸುಚಿರಂ ಪರಿರಭ್ಯತಾಪಂ
ಪ್ರಾಜ್ಞಂ ಯಥಾಭಿಮತಯೋ ವಿಜಹುರ್ನರೇಂದ್ರ ॥ ೨೩ ॥

ಪರೀಕ್ಷಿತನೇ! ಈ ಮೊದಲು ಬ್ರಾಹ್ಮಣಪತ್ನಿಯರು ಶ್ಯಾಮ ಸುಂದರನ ಸುಮನೋಹರವಾದ ಲೀಲಾ ಪ್ರಸಂಗಗಳನ್ನು ಕಿವಿಗಳಿಂದ ಕೇಳಿ ತಮ್ಮ-ತಮ್ಮ ಮನಸ್ಸನ್ನು ಅವನಲ್ಲಿಯೇ ಮುಳುಗಿಸಿ ಬಿಟ್ಟಿದ್ದರು. ಈಗಲಾದರೋ ಅವರು ತಮ್ಮ ವಿಶಾಲವಾದ ಕಣ್ಣುಗಳೆಂಬ ಹೆಬ್ಬಾಗಿಲುಗಳ ಮೂಲಕ ಪ್ರೇಮಮೂರ್ತಿಯನ್ನು ಹೃತ್ಕಮಲದಲ್ಲಿ ನೆಲೆಸಿಕೊಂಡು ಮನಸ್ಸು ತಣಿಯುವವರೆಗೂ ಅವನನ್ನು ಗಾಢವಾಗಿ ಆಲಿಂಗಿಸಿಕೊಂಡು ತಮ್ಮ ಹೃದಯದ ವಿರಹತಾಪವನ್ನು ನೀಗಿಕೊಂಡರು. ಜಾಗ್ರತ್-ಸ್ವಪ್ನಗಳಲ್ಲಿ ಇರುವ 'ನಾನು-ನನ್ನದು' ಎಂಬ ಮನೋವೃತ್ತಿಗಳೆಲ್ಲವೂ ಸುಷುಪ್ತಿಗೆ ಸಾಕ್ಷಿಯಾದ ಪ್ರಾಜ್ಞನಲ್ಲಿ ಲಯವಾಗುವಂತೆಯೇ ಬ್ರಾಹ್ಮಣ ಪತ್ನಿಯರು ಶ್ರೀಕೃಷ್ಣನಲ್ಲಿಯೇ ಲೀನರಾಗಿ ಸಂಸಾರ ತಾಪವನ್ನು ಕಳೆದುಕೊಂಡರು. ॥ ೨೩ ॥

ತಾಸ್ತಥಾ ತ್ಯಕ್ತಸರ್ವಾಶಾಃ ಪ್ರಾಪ್ತಾ ಆತ್ಮದಿದೃಕ್ಷಯಾ ।
ವಿಜ್ಞಾಯಾಖಿಲದೃಗ್ದ್ರಷ್ಟಾ ಪ್ರಾಹ ಪ್ರಹಸಿತಾನನಃ ॥ ೨೪ ॥

ಪ್ರಿಯ ಪರೀಕ್ಷಿತನೇ! ಭಗವಂತನು ಸಮಸ್ತರ ಮನಸ್ಸಿನಲ್ಲಿ ಇರುವುದನ್ನು ತಿಳಿಯುವವನೂ, ಎಲ್ಲರ ಬುದ್ಧಿಗೆ ಸಾಕ್ಷಿಯೂ ಆಗಿರುವನು. ಬ್ರಾಹ್ಮಣ ಪತ್ನಿಯರು ತಮ್ಮ ಪತಿ-ಪುತ್ರರನ್ನು, ಸಹೋದರರನ್ನು, ಬಂಧುಗಳನ್ನು ತೊರೆದು ವಿಷಯಸುಖಗಳನ್ನು ಪರಿತ್ಯಜಿಸಿ, ಕೇವಲ ನನ್ನ ದರ್ಶನಕ್ಕಾಗಿ ಬಂದಿರುವರೆಂಬುದನ್ನು ತಿಳಿದು ಶ್ರೀಕೃಷ್ಣಪರಮಾತ್ಮನು ನಗೆಮೊಗದಿಂದ ಬ್ರಾಹ್ಮಣಪತ್ನಿಯರಿಗೆ ಹೇಳಿದನು. ॥ ೨೪ ॥ ಮಹಾಭಾಗ್ಯವತಿಯರೇ! ನಿಮಗೆ ಸ್ವಾಗತ ಬಯಸುತ್ತೇನೆ. ಇತ್ತ ಬನ್ನಿರಿ. ದಯಮಾಡಿ ಎಲ್ಲರೂ ಕುಳಿತುಕೊಳ್ಳಿರಿ. ನಾನು ನಿಮಗೆ ಯಾವ ಕಾರ್ಯವನ್ನು ಮಾಡಲಿ? ನೀವೆಲ್ಲರೂ ನನ್ನ ದರ್ಶನದ ಇಚ್ಛೆಯಿಂದ ಇಲ್ಲಿಗೆ ಬಂದಿರುವಿರಿ. ಪ್ರೇಮಪೂರ್ಣವಾದ ಹೃದಯಿಗಳಾಗಿರುವ ನಿಮಗೆ ಇದು ಅನುರೂಪವೇ ಆಗಿದೆ. ॥ ೨೫ ॥ ಜಗತ್ತಿನಲ್ಲಿ ತಮ್ಮ ಆತ್ಮೋನ್ನತಿಯನ್ನು ತಿಳಿದಿರುವ ಬುದ್ಧಿವಂತರಾದವರು ತಮ್ಮ ಪ್ರಿಯತಮನಂತೆ ನನ್ನಲ್ಲಿ ಪ್ರೇಮವನ್ನಿರಿಸುವರು. ಆ ಪ್ರೇಮದಲ್ಲಿ ಯಾವ ರೀತಿಯ ಕಾಮನೆಯೂ ಇರುವುದಿಲ್ಲ. ಅದರಲ್ಲಿ ಯಾವ ವಿಧವಾದ ವ್ಯವಧಾನ, ಸಂಕೋಚ, ಮರೆ, ಇವಾವವೂ ದ್ವೈತ ಇರುವುದಿಲ್ಲ ॥ ೨೬ ॥ ಪ್ರಾಣ, ಬುದ್ಧಿ, ಮನಸ್ಸು, ಶರೀರ, ಸ್ವಜನ, ಸ್ತ್ರೀ, ಪುತ್ರ, ಧನ ಸಂಪತ್ತು - ಇವೆಲ್ಲವೂ ಯಾರ ಸಂಪರ್ಕದಿಂದ ಪ್ರಿಯವಾಗುವವೋ ಅಂತಹ ಆತ್ಮಕ್ಕಿಂತಲೂ, ಪರಮಾತ್ಮನಿಗಿಂತಲೂ, ಆತ್ಮ-ಪರಮಾತ್ಮ ಸ್ವರೂಪ ಕೃಷ್ಣನಾದ ನನಗಿಂತಲೂ ಪ್ರಿಯತಮರು ಬೇರೆಯಾರಿದ್ದಾರೆ? ॥ ೨೭ ॥ ಆದುದರಿಂದ ನೀವು ಬಂದಿರುವುದು ಉಚಿತವೇ ಆಗಿದೆ. ನಾನು ನಿಮ್ಮ ಪ್ರೇಮವನ್ನು ಅಭಿನಂದಿಸುತ್ತೇನೆ. ನೀವು ನನ್ನನ್ನು ಮನಃಪೂರ್ವಕವಾಗಿ ಸಂದರ್ಶಿಸಿದಿರಿ. ಇನ್ನು ನೀವು ಯಜ್ಞಶಾಲೆಗೆ ಹೋಗಿರಿ. ನಿಮ್ಮ ಪತಿಗಳು ಗೃಹಸ್ಥರಾಗಿದ್ದಾರೆ. ಅವರು ನಿಮ್ಮನ್ನು ಬಿಟ್ಟು ಯಜ್ಞವನ್ನು ಪೂರ್ಣಗೊಳಿಸಲಾರರು. ॥ ೨೮ ॥

ಶ್ರೀಭಗವಾನುವಾಚ

ಸ್ವಾಗತಂ ವೋ ಮಹಾಭಾಗಾ ಆಸ್ಯತಾಂ ಕರವಾಮ ಕಿಮ್ ।
ಯನ್ನೋ ದಿದೃಕ್ಷಯಾ ಪ್ರಾಪ್ತಾ ಉಪಪನ್ನಮಿದಂ ಹಿ ವಃ ॥ ೨೫ ॥

ನನ್ವದ್ಧಾ ಮಯಿ ಕುರ್ವಂತಿ ಕುಶಲಾಃ ಸ್ವಾರ್ಥದರ್ಶಿನಃ ।
ಅಹೈತುಕ್ಯವ್ಯವಹಿತಾಂ ಭಕ್ತಿಮಾತ್ಮಪ್ರಿಯೇ ಯಥಾ ॥ ೨೬ ॥

ಪ್ರಾಣಬುದ್ಧಿಮನಃಸ್ವಾತ್ಮದಾರಾಪತ್ಯಧನಾದಯಃ ।
ಯತ್ಸಂಪರ್ಕಾತ್ ಪ್ರಿಯಾ ಆಸಂಸ್ತತಃ ಕೋ ನ್ವಪರಃ ಪ್ರಿಯಃ ॥ ೨೭ ॥

ತದ್ಯಾತ ದೇವಯಜನಂ ಪತಯೋ ವೋ ದ್ವಿಜಾತಯಃ ।
ಸ್ವಸತ್ರಂ ಪಾರಯಿಷ್ಯಂತಿ ಯುಷ್ಮಾಭಿರ್ಗೃಹಮೇಧಿನಃ ॥ ೨೮ ॥

ಪತ್ನ್ಯ ಊಚುಃ

ಮೈವಂ ವಿಭೋಽರ್ಹತಿ ಭವಾನ್ಗದಿತುಂ ನೃಶಂಸಂ
ಸತ್ಯಂ ಕುರುಷ್ವ ನಿಗಮಂ ತವ ಪಾದಮೂಲಮ್ ।
ಪ್ರಾಪ್ತಾ ವಯಂ ತುಲಸಿದಾಮ ಪದಾವಸೃಷ್ಟಂ
ಕೇಶೈರ್ನಿವೋಢುಮತಿಲಂಘ್ಯ ಸಮಸ್ತಬಂಧೂನ್ ॥ ೨೯ ॥

ಗೃಹ್ಣಂತಿ ನೋ ನ ಪತಯಃ ಪಿತರೌ ಸುತಾ ವಾ
ನ ಭ್ರಾತೃಬಂಧುಸುಹೃದಃ ಕುತ ಏವ ಚಾನ್ಯೇ ।
ತಸ್ಮಾದ್ಭವತ್ಪ್ರಪದಯೋಃ ಪತಿತಾತ್ಮನಾಂ ನೋ
ನಾನ್ಯಾ ಭವೇದ್ಗತಿರರಿಂದಮ ತದ್ವಿಧೇಹಿ ॥ ೩೦ ॥

ಶ್ರೀಭಗವಾನುವಾಚ

ಪತಯೋ ನಾಭ್ಯಸೂಯೇರನ್ಪಿತೃಭ್ರಾತೃಸುತಾದಯಃ ।
ಲೋಕಾಶ್ಚ ವೋ ಮಯೋಪೇತಾ ದೇವಾ ಅಪ್ಯನುಮನ್ವತೇ ॥ ೩೧ ॥

ನ ಪ್ರೀತಯೇಽನುರಾಗಾಯ ಹ್ಯಂಗಸಂಗೋ ನೃಣಾಮಿಹ ।
ತನ್ಮನೋ ಮಯಿ ಯುಂಜಾನಾ ಅಚಿರಾನ್ಮಾಮವಾಪ್ಸ್ಯಥ ॥ ೩೨ ॥

ಶ್ರೀಶುಕ ಉವಾಚ

ಇತ್ಯುಕ್ತಾ ದ್ವಿಜಪತ್ನ್ಯಸ್ತಾ ಯಜ್ಞವಾಟಂ ಪುನರ್ಗತಾಃ ।
ತೇ ಚಾನಸೂಯವಃ ಸ್ವಾಭಿಃ ಸ್ತ್ರೀಭಿಃ ಸತ್ರಮಪಾರಯನ್ ॥ ೩೩ ॥

ತತ್ರೈಕಾ ವಿಧೃತಾ ಭರ್ತ್ರಾ ಭಗವಂತಂ ಯಥಾಶ್ರುತಮ್ ।
ಹೃದೋಪಗುಹ್ಯ ವಿಜಹೌ ದೇಹಂ ಕರ್ಮಾನುಬಂಧನಮ್ ॥ ೩೪ ॥

ಭಗವಾನಪಿ ಗೋವಿಂದಸ್ತೇನೈವಾನ್ನೇನ ಗೋಪಕಾನ್ ।
ಚತುರ್ವಿಧೇನಾಶಯಿತ್ವಾ ಸ್ವಯಂ ಚ ಬುಭುಜೇ ಪ್ರಭುಃ ॥ ೩೫ ॥

**ಬ್ರಾಹ್ಮಣ ಪತ್ನಿಯರು ಹೇಳಿದರು** – ಶ್ಯಾಮಸುಂದರನೇ! ವಿಭುವೇ! ಇಷ್ಟು ನಿಷ್ಠುರವಾಗಿ ಮಾತಾಡುವುದು ನಿನಗೆ ಯೋಗ್ಯವಾಗಿ ಕಾಣುವುದಿಲ್ಲ. ಒಮ್ಮೆ ಭಗವಂತನನ್ನು ಪಡೆದುಕೊಂಡವನು ಮತ್ತೆ ಸಂಸಾರಕ್ಕೆ ಮರಳುವುದಿಲ್ಲವೆಂದು ಶ್ರುತಿಗಳು ಹೇಳುತ್ತವೆ. ಆ ಶ್ರುತಿವಾಣಿಯನ್ನು ಸತ್ಯವನ್ನಾಗಿ ಮಾಡು. ನಾವು ನಮ್ಮ ಸಮಸ್ತ ಸಂಬಂಧಿಗಳ ಆಜ್ಞೆಯನ್ನು ಮೀರಿ – ನಿನ್ನ ಚರಣಗಳಿಂದ ಬಿದ್ದಿರುವ ತುಳಸಿಯ ಮಾಲೆಯನ್ನು ನಮ್ಮ ಮುಡಿಯಲ್ಲಿ ಧರಿಸಿಕೊಳ್ಳಬೇಕೆಂದು ಇಲ್ಲಿಗೆ ಬಂದಿರುವೆವು. ॥ ೨೯ ॥ ಸ್ವಾಮಿಯೇ! ಈಗ ನಮ್ಮ ಪತಿ-ಪುತ್ರರು, ತಂದೆ-ತಾಯಿ, ಅಣ್ಣ-ತಮ್ಮಂದಿರು, ಸ್ವಜನ-ಬಂಧುಗಳು ನಮ್ಮನ್ನು ಸ್ವೀಕರಿಸಲಾರರು. ಹಾಗಿರುವಾಗ ಬೇರೆಯವರ ವಿಷಯವಾಗಿ ಹೇಳುವುದೇನಿದೆ? ವೀರಶಿರೋಮಣಿಯೇ! ಈಗ ನಾವು ನಿನ್ನ ಚರಣಗಳನ್ನೇ ಪರಮಾಶ್ರಯವೆಂದು ತಿಳಿದಿರುವೆವು. ನಮಗೆ ಬೇರೆಯಾರ ಆಸರೆಯೂ ಇಲ್ಲ. ಅದಕ್ಕಾಗಿ ನಾವು ಬೇರೆಯವರಲ್ಲಿ ಶರಣಾಗದ ಹಾಗೇ ನೀನೇ ವ್ಯವಸ್ಥೆ ಮಾಡು. ॥ ೩೦ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ದೇವಿಯರೇ! ನಿಮ್ಮ ಪತಿ-ಪುತ್ರರಾಗಲೀ, ತಂದೆ-ತಾಯಿಯಾಗಲೀ, ಬಂಧು-ಬಾಂಧವರಾಗಲೀ ಯಾರೂ ನಿಮ್ಮನ್ನು ತಿರಸ್ಕರಿಸಲಾರರು. ಇವರುಗಳ ಮಾತೇನು, ಇಡೀ ಜಗತ್ತೆ ನಿಮ್ಮನ್ನು ಸಮ್ಮಾನಿಸುವುದು. ಇದಕ್ಕೆ ಕಾರಣವಿಷ್ಟೇ. ಈಗ ನೀವು ನನ್ನವರಾಗಿದ್ದೀರಿ. ದೇವತೆಗಳೂ ನನ್ನ ಈ ಮಾತನ್ನು ಅನುಮೋದಿಸುತ್ತಿದ್ದಾರೆ. ॥ ೩೧ ॥ ದೇವಿಯರೇ! ಈ ಪ್ರಪಂಚದ ಮನುಷ್ಯರಲ್ಲಿ ಪರಸ್ಪರವಾದ ಪ್ರೀತಿ-ಅನುರಾಗಗಳಿಗೆ ಕೇವಲ ಅಂಗಸಂಗವೇ ಕಾರಣವಾಗುವುದಿಲ್ಲ. ಆದುದರಿಂದ ನೀವು ಈಗಲೇ ಯಜ್ಞಶಾಲೆಗೆ ಹೋಗಿರಿ. ನಿಮ್ಮ ಮನಸ್ಸನ್ನು ನನ್ನಲ್ಲಿ ನೆಲೆಗೊಳಿಸಿರಿ. ನಿಮಗೆ ಬಹುಬೇಗನೇ ನನ್ನ ಪ್ರಾಪ್ತಿಯುಂಟಾಗುವುದು. ॥ ೩೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಂತನು ಹೀಗೆ ಹೇಳಲು ಭಗವದ್ಭಕ್ತರಾದ ಬ್ರಾಹ್ಮಣಪತ್ನಿಯರು ಯಜ್ಞಶಾಲೆಗೆ ಹಿಂದಿರುಗಿದರು. ಶ್ರೀಕೃಷ್ಣನು ಹೇಳಿದ್ದಂತೆ ಆ ಬ್ರಾಹ್ಮಣರು ತಮ್ಮ ಪತ್ನಿಯರಲ್ಲಿ ಯಾವ ವಿಧವಾದ ದೋಷವನ್ನು ಎಣಿಸಲಿಲ್ಲ. ಅವರೊಡನೆ ಸೇರಿಕೊಂಡು ತಮ್ಮ ಯಜ್ಞವನ್ನು ಪೂರ್ಣಗೊಳಿಸಿದರು. ॥ ೩೩ ॥ ಆ ಸ್ತ್ರೀಯರಲ್ಲಿ ಓರ್ವಳಿಗೆ ಹೊರಡುವಾಗಲೇ ಅವಳ ಪತಿಯು ಬಲವಂತವಾಗಿ ತಡೆದು ಬಿಟ್ಟಿದ್ದನು. ಆ ಬ್ರಾಹ್ಮಣಪತ್ನಿಯು ಅನೇಕ ದಿನಗಳಿಂದ ಕೇಳಿದ ಭಗವಂತನ ಸ್ವರೂಪವನ್ನು ಹೃದಯದಲ್ಲಿರಿಸಿಕೊಂಡು, ಅವನ ಧ್ಯಾನವನ್ನೇ ಮಾಡುತ್ತಾ, ಮನಸ್ಸಿನಲ್ಲೇ ಭಗವಂತನನ್ನು ಆಲಿಂಗಿಸಿಕೊಂಡು ಕರ್ಮದಿಂದ ಉಂಟಾದ ತನ್ನ ಶರೀರವನ್ನು ತ್ಯಜಿಸಿದಳು. ಶುದ್ಧ ಸತ್ತ್ವಮಯ ದಿವ್ಯ ದೇಹವನ್ನು ಧರಿಸಿ ಭಗವಂತನಲ್ಲಿ ಐಕ್ಯಳಾದಳು. ॥ ೩೪ ॥ ಇತ್ತ ಭಗವಾನ್ ಶ್ರೀಕೃಷ್ಣನು ಬ್ರಾಹ್ಮಣ ಪತ್ನಿಯರು ತಂದಿರುವ ನಾಲ್ಕು ವಿಧವಾದ ಅನ್ನವನ್ನು ಮೊದಲಿಗೆ ಗೋಪಬಾಲಕರಿಗೆ ಭೋಜನ ಮಾಡಿಸಿ ಮತ್ತೆ ಸ್ವತಃ ಭೋಜನ ಮಾಡಿದನು. ॥ ೩೫ ॥

ಏವಂ ಲೀಲಾನರವಪುರ್ನೃಲೋಕಮನುಶೀಲಯನ್ ।
ರೇಮೇ ಗೋಗೋಪಗೋಪೀನಾಂ ರಮಯನ್ರೂಪವಾಕ್ಕೃತೈಃ
॥ ೩೬ ॥

ಪರೀಕ್ಷಿತನೇ! ಲೀಲಾಮಾನುಷ ವಿಗ್ರಹನಾದ ಶ್ರೀಕೃಷ್ಣನು ಈ ವಿಧವಾಗಿ ಮನುಷ್ಯರಂತೆ ಲೀಲೆಯನ್ನಾಡುತ್ತಾ ತನ್ನ ಸೌಂದರ್ಯ, ಮಾಧುರ್ಯ, ವಾಣಿ ಮತ್ತು ಕರ್ಮಗಳಿಂದ ಗೋವುಗಳನ್ನು ಗೋಪಬಾಲಕರನ್ನು, ಗೋಪಿಯರನ್ನು ಆನಂದಗೊಳಿಸಿದನು ಹಾಗೂ ತಾನೂ ಕೂಡ ಅವರ ಅಲೌಕಿಕ ಪ್ರೇಮರಸವನ್ನು ಆಸ್ವಾದಿಸುತ್ತಾ ಆನಂದಿತನಾದನು. ॥ ೩೬ ॥

ಅಥಾನುಸ್ಮೃತ್ಯ ವಿಪ್ರಾಸ್ತೇ ಅನ್ವತಪ್ಯನ್ಕೃತಾಗಸಃ ।
ಯದ್ವಿಶ್ವೇಶ್ವರಯೋರ್ಯಾಚ್ಞಾಮಹನ್ಮ ನೃವಿಡಂಬಯೋಃ
॥ ೩೭ ॥

ಪರೀಕ್ಷಿತನೇ! ಇತ್ತ ಬ್ರಾಹ್ಮಣರಿಗೆ ಶ್ರೀಕೃಷ್ಣನಾದರೋ ಸಾಕ್ಷಾತ್ ಭಗವಂತನಾಗಿರುವನು ಎಂದು ತಿಳಿದಾಗ ಅವರಿಗೆ ಬಹಳವಾಗಿ ಪಶ್ಚಾತ್ತಾಪವುಂಟಾಯಿತು. ಜಗದೀಶ್ವರರಾದ ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರ ಆಜ್ಞೆಯನ್ನು ಉಲ್ಲಂಘಿಸಿ ನಾವು ಬಹು ದೊಡ್ಡ ಅಪರಾಧವನ್ನು ಮಾಡಿರುವೆವು ಎಂದು ಯೋಚಿಸಿದರು. ಅವರಾದರೋ ಮಾನವಲೀಲೆಗಳನ್ನು ಮಾಡುತ್ತಿದ್ದರೂ ಕೂಡ ಪರಮೇಶ್ವರರೇ ಆಗಿದ್ದಾರೆ. ॥ ೩೭ ॥ ನಮ್ಮ ಪತ್ನಿಯರ ಹೃದಯದಲ್ಲಿ ಭಗವಂತನ ಅಲೌಕಿಕವಾದ ಪ್ರೇಮವು ತುಂಬಿದೆ. ನಾವು ಅದರಿಂದ ಪೂರ್ಣವಾಗಿ ಬರಿದಾಗಿರುವೆವು ಎಂದು ತಿಳಿದಾಗ, ಅವರು ಪಶ್ಚಾತ್ತಾಪ ಪಟ್ಟು ತಮ್ಮನ್ನು ತಾವೇ ನಿಂದಿಸಿಕೊಂಡರು. ॥ ೩೮ ॥ ಅಧೋಕ್ಷಜನಿಂದ ವಿಮುಖರಾಗಿರುವ ನಮಗೆ ಧಿಕ್ಕಾರವಿರಲಿ, ಶ್ರೇಷ್ಠಕುಲದಲ್ಲಿ ನಾವು ಹುಟ್ಟಿದೆವು, ಗಾಯತ್ರಿಯನ್ನು ಗ್ರಹಣಮಾಡಿ ದ್ವಿಜರಾದೆವು. ವೇದಾಧ್ಯಯನ ಮಾಡಿ ನಾವು ದೊಡ್ಡ-ದೊಡ್ಡ ಯಜ್ಞಗಳನ್ನು ಮಾಡಿದೆವು. ಆದರೆ ಇವೆಲ್ಲವೂ ಉಪಯೋಗಕ್ಕೆ ಬಂದಿಲ್ಲವಲ್ಲ! ನಮಗೆ ಧಿಕ್ಕಾರವಿರಲಿ, ಧಿಕ್ಕಾರವಿರಲಿ. ನಮ್ಮ ವಿದ್ಯೆ, ವ್ರತಗಳು ವ್ಯರ್ಥವಾದುವು. ನಮ್ಮ ಈ ಬಹುಜ್ಞತೆಗೆ ಧಿಕ್ಕಾರವಿರಲಿ. ಶ್ರೇಷ್ಠವಂಶದಲ್ಲಿ ಹುಟ್ಟುವುದು, ಕರ್ಮಕಾಂಡದಲ್ಲಿ ನಿಪುಣರಾಗುವುದು ಏನು ಪ್ರಯೋಜನ? ಇವುಗಳಿಗೆ ಧಿಕ್ಕಾರವಿರಲಿ. ॥ ೩೯ ॥ ನಿಶ್ಚಯವಾಗಿಯೂ ಭಗವಂತನ ಮಾಯೆಯು ಮಹಾ-ಮಹಾಯೋಗಿಗಳನ್ನೂ ಮೋಹಿತರಾಗಿಸುತ್ತದೆ. ಹಾಗಿರುವಾಗ ನಾವು ಮನುಷ್ಯರ ಗುರುಗಳು ಮತ್ತು ಬ್ರಾಹ್ಮಣರೆಂದು ಹೇಳಿಕೊಳ್ಳುವೆವು. ಆದರೆ ನಿಜವಾದ ಸ್ವಾರ್ಥ ಮತ್ತು ಪರಮಾರ್ಥದ ವಿಷಯದಲ್ಲಿ ನಾವು ಖಂಡಿತವಾಗಿ ಅಜ್ಞರಾಗಿದ್ದೇವೆ. ॥ ೪೦ ॥ ನೋಡಿರಲ್ಲ! ಇವರು ಸ್ತ್ರೀಯರಾಗಿದ್ದರೂ ಜಗದ್ಗುರು ಭಗವಾನ್ ಶ್ರೀಕೃಷ್ಣನಲ್ಲಿ ಇವರಿಗೆ ಎಷ್ಟೊಂದು ಅಗಾಧವಾದ ಪ್ರೇಮವಿದೆ, ಅಖಂಡ ಅನುರಾಗವಿದೆ! ಅದರಿಂದಲೇ ಇವರು – ಸಾವಿನೊಂದಿಗೂ ಕಡಿದು ಹೋಗದಿರುವ ಗೃಹವೆಂಬ ಹೆಸರುಳ್ಳ ಬಲಿಷ್ಠವಾದ ಪಾಶವನ್ನೂ ಕತ್ತರಿಸಿ ಬಿಟ್ಟಿರುವರು. ಇದೆಂತಹ ಆಶ್ಚರ್ಯ! ॥ ೪೧ ॥ ಇವರಿಗೆ ದ್ವಿಜಾತಿಗಳ ಉಪನಯನಾದಿ ಸಂಸ್ಕಾರಗಳು ಆಗಲಿಲ್ಲ, ಇವರು ಗುರುಕುಲದಲ್ಲಿ ವಾಸಿಸಲಿಲ್ಲ, ಇವರು ತಪಸ್ಸು ಮಾಡಿಲ್ಲ, ಆತ್ಮನ ಸಂಬಂಧವಾಗಿ ವಿವೇಕ-ವಿಚಾರ ಮಾಡಲಿಲ್ಲ, ಇವುಗಳ ಮಾತಾದರೋ ದೂರವುಳಿಯಿತು, ಇವರಲ್ಲಿ ಪೂರ್ಣ ಪವಿತ್ರತೆಯೂ ಇಲ್ಲ, ಶುಭಕರ್ಮಗಳೂ ಇಲ್ಲ. ॥ ೪೨ ॥

ದೃಷ್ಟ್ವಾ ಸ್ತ್ರೀಣಾಂ ಭಗವತಿ ಕೃಷ್ಣೇ ಭಕ್ತಿಮಲೌಕಿಕೀಮ್ ।
ಆತ್ಮಾನಂ ಚ ತಯಾ ಹೀನಮನುತಪ್ತಾ ವ್ಯಗರ್ಹಯನ್
॥ ೩೮ ॥

ಧಿಗ್ಜನ್ಮನಸ್ತ್ರಿವೃದ್ವಿದ್ಯಾಂ ಧಿಗ್ವ್ರತಂ ಧಿಗ್ಬಹುಜ್ಞತಾಮ್ ।
ಧಿಕ್ಕುಲಂ ಧಿಕ್ಕ್ರಿಯಾದಾಕ್ಷ್ಯಂ ವಿಮುಖಾ ಯೇ ತ್ವಧೋಕ್ಷಜೇ
॥ ೩೯ ॥

ನೂನಂ ಭಗವತೋ ಮಾಯಾ
ಯೋಗಿನಾಮಪಿ ಮೋಹಿನೀ ।
ಯದ್ವಯಂ ಗುರವೋ ನೃಣಾಂ
ಸ್ವಾರ್ಥೇ ಮುಹ್ಯಾಮಹೇ ದ್ವಿಜಾಃ ॥ ೪೦ ॥

ಅಹೋ ಪಶ್ಯತ ನಾರೀಣಾಮಪಿ ಕೃಷ್ಣೇ ಜಗದ್ಗುರೌ ।
ದುರಂತಭಾವಂ ಯೋಽವಿಧ್ಯನ್ಮೃತ್ಯುಪಾಶಾನ್ಗೃಹಾಭಿಧಾನ್
॥ ೪೧ ॥

ನಾಸಾಂ ದ್ವಿಜಾತಿಸಂಸ್ಕಾರೋ ನ ನಿವಾಸೋ ಗುರಾವಪಿ ।
ನ ತಪೋ ನಾತ್ಮಮೀಮಾಂಸಾ ನ ಶೌಚಂ ನ ಕ್ರಿಯಾಃ ಶುಭಾಃ
॥ ೪೨ ॥

ಅಥಾಪಿ ಹ್ಯುತ್ತಮಶ್ಲೋಕೇ ಕೃಷ್ಣೇ ಯೋಗೇಶ್ವರೇಶ್ವರೇ ।
ಭಕ್ತಿರ್ದೃಢಾ ನ ಚಾಸ್ಮಾಕಂ ಸಂಸ್ಕಾರಾದಿಮತಾಮಪಿ
॥ ೪೩ ॥

ನನು ಸ್ವಾರ್ಥವಿಮೂಢಾನಾಂ ಪ್ರಮತ್ತಾನಾಂ ಗೃಹೇಹಯಾ ।
ಅಹೋ ನಃ ಸ್ಮಾರಯಾಮಾಸ ಗೋಪವಾಕ್ಯೈಃ ಸತಾಂ ಗತಿಃ
॥ ೪೪ ॥

ಅನ್ಯಥಾ ಪೂರ್ಣಕಾಮಸ್ಯ ಕೈವಲ್ಯಾದ್ಯಾಶಿಷಾಂ ಪತೇಃ ।
ಈಶಿತವ್ಯೈಃ ಕಿಮಸ್ಮಾಭಿರೀಶಸ್ಯೈತದ್ವಿಡಂಬನಮ್
॥ ೪೫ ॥

ಹಿತ್ವಾನ್ಯಾನ್ಭಜತೇ ಯಂ ಶ್ರೀಃ ಪಾದಸ್ಪರ್ಶಾಶಯಾಽಸಕೃತ್ ।
ಆತ್ಮದೋಷಾಪವರ್ಗೇಣ ತದ್ಯಾಚ್ಞಾ ಜನಮೋಹಿನೀ
॥ ೪೬ ॥

ದೇಶಃ ಕಾಲಃ ಪೃಥಗ್ದ್ರವ್ಯಂ ಮಂತ್ರತಂತ್ರರ್ತ್ವಿಜೋಽಗ್ನಯಃ ।
ದೇವತಾ ಯಜಮಾನಶ್ಚ ಕ್ರತುರ್ಧರ್ಮಶ್ಚಯನ್ಮಯಃ
॥ ೪೭ ॥

ಸ ಏಷ ಭಗವಾನ್ಸಾಕ್ಷಾದ್ವಿಷ್ಣುರ್ಯೋಗೇಶ್ವರೇಶ್ವರಃ ।
ಜಾತೋ ಯದುಷ್ವಿತ್ಯಶೃಣ್ಮ ಹ್ಯಪಿ ಮೂಢಾ ನ ವಿದ್ಮಹೇ
॥ ೪೮ ॥

ಅಹೋ ವಯಂ ಧನ್ಯತಮಾ ಯೇಷಾಂ ನಸ್ತಾದೃಶೀಃ ಸ್ತ್ರಿಯಃ ।
ಭಕ್ತ್ಯಾ ಯಾಸಾಂ ಮತಿರ್ಜಾತಾ ಅಸ್ಮಾಕಂ ನಿಶ್ಚಲಾ ಹರೌ
॥ ೪೯ ॥

ನಮಸ್ತುಭ್ಯಂ ಭಗವತೇ ಕೃಷ್ಣಾಯಾಕುಂಠಮೇಧಸೇ ।
ಯನ್ಮಾಯಾಮೋಹಿತಧಿಯೋ ಭ್ರಮಾಮಃ ಕರ್ಮವರ್ತ್ಮಸು
॥ ೫೦ ॥

ಹೀಗಿದ್ದರೂ ಸಮಸ್ತ ಯೋಗೇಶ್ವರರಿಗೂ ಈಶ್ವರನಾದ, ಪುಣ್ಯಶ್ಲೋಕನಾದ ಭಗವಾನ್ ಶ್ರೀಕೃಷ್ಣನ ಚರಣಗಳಲ್ಲಿ ಇವರಿಗೆ ದೃಢವಾದ ಭಕ್ತಿ ಉಂಟಾಗಿದೆ. ನಾವು ನಮ್ಮ ಸಂಸ್ಕಾರಗಳನ್ನು ಮಾಡಿಕೊಂಡಿರುವೆವು. ಗುರುಕುಲದಲ್ಲಿ ವಾಸಿಸಿದ್ದೇವೆ. ತಪಸ್ಸು ಮಾಡಿದ್ದೇವೆ. ಆತ್ಮಾನುಸಂಧಾನ ಮಾಡಿದ್ದೇವೆ. ಪವಿತ್ರತೆಯನ್ನು ಪಾಲಿಸಿದ್ದೇವೆ. ಉತ್ತಮೋತ್ತಮ ಕರ್ಮಗಳನ್ನು ಮಾಡಿದ್ದೇವೆ. ಆದರೂ ಭಗವಂತನ ಚರಣಗಳಲ್ಲಿ ನಮಗೆ ಭಕ್ತಿಯುಂಟಾಗ ಲಿಲ್ಲವಲ್ಲ! ॥ ೪೩ ॥ ನಾವುಗಳು ಗೃಹಕೃತ್ಯದಲ್ಲಿ ಉನ್ಮತ್ತರಾಗಿದ್ದೆವು, ನಮ್ಮ ಒಳಿತು-ಕೆಡುಕುಗಳನ್ನು ಪೂರ್ಣವಾಗಿ ಮರೆತು ಹೋಗಿದ್ದೆವು ಎಂಬುದು ನಿಜವಾದದು. ಆಹಾ ! ಭಗವಂತನ ಎಷ್ಟೊಂದು ದಯೆ ಇದೆ, ಭಕ್ತವತ್ಸಲ ಪ್ರಭುವು ಗೊಲ್ಲಬಾಲಕರನ್ನು ಕಳಿಸಿ ಅವರ ಮಾತಿನಿಂದ ನಮ್ಮನ್ನು ಎಚ್ಚರಿಸಿದನು. ತನ್ನ ನೆನಪನ್ನು ಮಾಡಿಸಿ ದನು. ॥ ೪೪ ॥ ಭಗವಂತನು ಸ್ವತಃ ಪೂರ್ಣಕಾಮನಾಗಿರುವನು. ಕೈವಲ್ಯ ಮೋಕ್ಷದವರೆಗಿನ ಉಂಟಾಗುವ ಕಾಮನೆಗಳನ್ನು ಪೂರ್ಣ ಮಾಡುವವನು. ನಮ್ಮನ್ನು ಎಚ್ಚರಿಸುವುದೇ ಪ್ರಯೋಜನವಲ್ಲದಿದ್ದರೆ ನಮ್ಮಂತಹ ಕ್ಷುದ್ರ ಜೀವರಿಂದ ಅವನಿಗೇನು ಪ್ರಯೋಜನವಿತ್ತು? ಖಂಡಿತವಾಗಿಯೂ ಅವನು ಇದೇ ಉದ್ದೇಶದಿಂದ ಬೇಡುವ ನೆಪ ವನ್ನು ಮಾಡಿರುವನು. ಹಾಗಿಲ್ಲದಿದ್ದರೆ ಅವನಿಗೆ ಬೇಡುವ ಆವಶ್ಯಕತೆ ಏನಿತ್ತು? ॥ ೪೫ ॥ ಸಾಕ್ಷಾತ್ ಲಕ್ಷ್ಮೀದೇವಿಯೂ ಬೇರೆ ದೇವತೆ ಗಳೆಲ್ಲರನ್ನು ಬಿಟ್ಟು ತನ್ನ ಚಂಚಲತೆ, ಗರ್ವ ಮೊದಲಾದ ದೋಷ ಗಳನ್ನು ಪರಿತ್ಯಾಗ ಮಾಡಿ ನಿರಂತರವಾಗಿ ಅವನ ಚರಣಕಮಲ ಗಳನ್ನು ಸ್ಪರ್ಶಿಸಲಿಕ್ಕಾಗಿ ಸೇವೆ ಮಾಡುತ್ತಾ ಇರುವಳು. ಅಂತಹ ಪ್ರಭುವು ಇತರರಲ್ಲಿ ಭೋಜನವನ್ನು ಯಾಚಿಸುವುದು ಜನರನ್ನು ವಿಮೋಹಗಳಿಸಲಿಕ್ಕಾಗಿಯಲ್ಲದೆ ಬೇರೇನಿದೆ? ॥ ೪೬ ॥ ದೇಶ, ಕಾಲ, ಬೇರೆ-ಬೇರೆ ಸಾಮಗ್ರಿಗಳು, ಆಯಾಯ ಕರ್ಮಗಳಲ್ಲಿ ವಿನಿಯೋಗಿಸುವ ಮಂತ್ರಗಳು, ಅನುಷ್ಠಾನ ಪದ್ಧತಿ, ಋತ್ವಿಜರು, ಅಗ್ನಿ, ದೇವತೆಗಳು, ಯಜಮಾನ, ಯಜ್ಞ ಮತ್ತು ಧರ್ಮ - ಇವೆಲ್ಲವೂ ಭಗವಂತನ ಸ್ವರೂಪವೇ ಆಗಿವೆ. ॥ ೪೭ ॥ ಯೋಗೇಶ್ವರರಿಗೂ ಈಶ್ವರನಾದ ಭಗವಾನ್ ವಿಷ್ಣುವೇ ಸಾಕ್ಷಾತ್ ಶ್ರೀಕೃಷ್ಣರೂಪದಿಂದ ಯದುವಂಶದಲ್ಲಿ ಅವತರಿಸಿರುವನು. ಈ ಮಾತನ್ನು ನಾವು ಕೇಳಿದ್ದೆವು. ಆದರೆ ನಾವು ಅವನನ್ನು ಗುರುತಿಸ ಲಾರದಷ್ಟು ಮೂಢರಾಗಿದ್ದೇವೆ. ॥ ೪೮ ॥ ಇಷ್ಟೆಲ್ಲ ಆಗಿದ್ದರೂ ಕೂಡ ನಾವು ಧನ್ಯಾತಿಧನ್ಯರಾಗಿದ್ದೇವೆ. ನಮ್ಮ ಸೌಭಾಗ್ಯವೇ ಸರಿ! ಅದರಿಂದಲೇ ಇಂತಹ ಪತ್ನಿಯರು ನಮಗೆ ದೊರಕಿರುವರು. ಅವರ ಭಕ್ತಿಯಿಂದಲೇ ನಮ್ಮ ಬುದ್ಧಿಯೂ ಶ್ರೀಹರಿಯಲ್ಲಿ ಅವಿಚಲವಾಗಿ ಸೇರಿಹೋಗಿದೆ. ॥ ೪೯ ॥ ಪ್ರಭೋ! ನೀನು ಅಚಿಂತ್ಯ ಮತ್ತು ಅನಂತ ಐಶ್ವರ್ಯಗಳ ಒಡೆಯನಾಗಿರುವೆ. ಶ್ರೀಕೃಷ್ಣನೇ! ನಿನ್ನ ಜ್ಞಾನವೂ ಅಬಾಧಿತವಾಗಿದೆ. ನಿನ್ನ ಮಾಯೆಯಿಂದಲೇ ನಮ್ಮ ಬುದ್ಧಿಯು ಮೋಹಿತವಾಗಿದೆ ಹಾಗೂ ನಾವು ಕರ್ಮಗಳ ಜಂಜಾಟದಲ್ಲಿ ಅಲೆಯುತ್ತಿರುವೆವು. ನಾವು ನಿನಗೆ ನಮಸ್ಕರಿಸುತ್ತಿ ದ್ದೇವೆ. ॥ ೫೦ ॥

ಸ ವೈ ನ ಆದ್ಯಃ ಪುರುಷಃ ಸ್ವಮಾಯಾಮೋಹಿತಾತ್ಮನಾಮ್ ।
ಅವಿಜ್ಞಾತಾನುಭಾವಾನಾಂ ಕ್ಷಂತುಮರ್ಹತ್ಯತಿಕ್ರಮಮ್ ॥ ೫೧ ॥

ಆದಿಪುರುಷನಾದ, ಪುರುಷೋತ್ತಮನಾದ ಭಗವಾನ್ ಶ್ರೀಕೃಷ್ಣನು ನಮ್ಮ ಈ ಅಪರಾಧವನ್ನು ಕ್ಷಮಿಸಲಿ. ನಮ್ಮ ಬುದ್ಧಿಯು ಆವನ ಮಾಯೆಯಿಂದಲೇ ಮೋಹಿತವಾಗಿದೆ. ನಾವು ಅವನ ಅಪಾರವಾದ ಪ್ರಭಾವವನ್ನು ತಿಳಿಯದ ಅಜ್ಞಾನಿಗಳಾಗಿ ಇದ್ದೇವೆ. ॥ ೫೧ ॥

ಇತಿ ಸ್ವಾಘಮನುಸ್ಮೃತ್ಯ ಕೃಷ್ಣೇ ತೇ ಕೃತಹೇಲನಾಃ ।
ದಿದೃಕ್ಷವೋಽಪ್ಯಚ್ಯುತಯೋಃ ಕಂಸಾದ್ಭೀತಾ ನ ಚಾಚಲನ್ ॥ ೫೨ ॥

ಪರೀಕ್ಷಿತನೇ! ಆ ಬ್ರಾಹ್ಮಣರು ಶ್ರೀಕೃಷ್ಣನನ್ನು ತಿರಸ್ಕರಿಸಿದ್ದರು. ಆದ್ದರಿಂದ ಅವರಿಗೆ ತಮ್ಮ ಅಪರಾಧದ ಸ್ಮೃತಿಯಿಂದ ಬಹಳ ಪಶ್ಚಾತ್ತಾಪ ಉಂಟಾಯಿತು. ಅವರ ಹೃದಯದಲ್ಲಿ ಶ್ರೀಕೃಷ್ಣ ಬಲರಾಮರ ದರ್ಶನದ ತೀವ್ರ ಇಚ್ಛೆ ಉಂಟಾಯಿತು. ಆದರೆ ಕಂಸನ ಭಯದಿಂದ ಅವರು ದರ್ಶನಕ್ಕೆ ಹೋಗಲಿಲ್ಲ. ॥ ೫೨ ॥

ಇಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೨೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಯಜ್ಞಪತ್ನ್ಯುದ್ಧರಣಂ ನಾಮ ತ್ರಯೋವಿಂಶೋಽಧ್ಯಾಯಃ ॥ ೨೩ ॥

# ಇಪ್ಪತ್ತನಾಲ್ಕನೆಯ ಅಧ್ಯಾಯ

## ಇಂದ್ರನ ಯಜ್ಞ ನಿವಾರಣೆ

*ಶ್ರೀಶುಕ ಉವಾಚ*

ಭಗವಾನಪಿ ತತ್ರೈವ ಬಲದೇವೇನ ಸಂಯುತಃ ।
ಅಪಶ್ಯನ್ನಿವಸನ್ಗೋಪಾನಿಂದ್ರಯಾಗಕೃತೋದ್ಯಮಾನ್ ॥ ೧ ॥

ತದಭಿಜ್ಞೋಽಪಿ ಭಗವಾನ್ ಸರ್ವಾತ್ಮಾ ಸರ್ವದರ್ಶನಃ ।
ಪ್ರಶ್ರಯಾವನತೋಽಪೃಚ್ಛದ್ವೃದ್ಧಾನ್ನಂದಪುರೋಗಮಾನ್ ॥ ೨ ॥

ಕಥ್ಯತಾಂ ಮೇ ಪಿತಃ ಕೋಽಯಂ ಸಂಭ್ರಮೋ ವ ಉಪಾಗತಃ ।
ಕಿಂ ಫಲಂ ಕಸ್ಯ ಚೋದ್ದೇಶಃ ಕೇನ ವಾ ಸಾಧ್ಯತೇ ಮಖಃ ॥ ೩ ॥

ಏತದ್ಬ್ರೂಹಿ ಮಹಾನ್ಕಾಮೋ ಮಹ್ಯಂ ಶುಶ್ರೂಷವೇ ಪಿತಃ ।
ನ ಹಿ ಗೋಪ್ಯಂ ಹಿ ಸಾಧೂನಾಂ ಕೃತ್ಯಂ ಸರ್ವಾತ್ಮನಾಮಿಹ ॥ ೪ ॥

ಅಸ್ತ್ಯಸ್ವಪರದೃಷ್ಟೀನಾಮಮಿತ್ರೋದಾಸ್ತವಿದ್ವಿಷಾಮ್ ।
ಉದಾಸೀನೋಽರಿವದ್ವರ್ಜ್ಯ ಆತ್ಮವತ್ಸುಹೃದುಚ್ಯತೇ ॥ ೫ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತ ಮಹಾರಾಜನೇ! ಭಗವಾನ್ ಶ್ರೀಕೃಷ್ಣನು ಬಲರಾಮನೊಂದಿಗೆ ವೃಂದಾವನದಲ್ಲಿದ್ದು ಅನೇಕ ಪ್ರಕಾರವಾದ ಲೀಲೆಗಳನ್ನು ಪ್ರಕಟಪಡಿಸುತ್ತಿದ್ದನು. ಒಂದು ದಿನ ಅಲ್ಲಿಯ ಗೋಪರೆಲ್ಲರೂ ಇಂದ್ರಯಜ್ಞವನ್ನು ಮಾಡಲು ಸಿದ್ಧತೆ ಮಾಡುತ್ತಿರುವುದನ್ನು ನೋಡಿದನು. ॥ ೧ ॥ ಶ್ರೀಕೃಷ್ಣನು ಸರ್ವಾಂತರ್ಯಾಮಿಯೂ, ಸರ್ವಜ್ಞನೂ ಆಗಿದ್ದುದರಿಂದ ಎಲ್ಲವನ್ನೂ ಅವನು ತಿಳಿದಿರುತ್ತಿದ್ದನು. ಹೀಗಿದ್ದರೂ ವಿನಯದಿಂದ ಕೂಡಿ ನಂದನೇ ಮೊದಲಾದ ಹಿರಿಯ ಗೋಪರನ್ನು ಕೇಳಿದನು. ॥ ೨ ॥ ತಂದೆಯವರೇ! ನಿಮ್ಮ ಮುಂದೆ ಎಂತಹ ಮಹಾಕಾರ್ಯವು ಇದಿರಾಗಿದೆ? ಯಾವ ಉತ್ಸವವು ನಡೆಯಲಿದೆ? ಇದರ ಫಲವು ಏನು? ಯಾವ ಉದ್ದೇಶದಿಂದ ಯಾವ ಯಾವ ಸಾಮಗ್ರಿಗಳಿಂದ ಈ ಯಜ್ಞವನ್ನು ಮಾಡಲಾಗುತ್ತದೆ? ಇದೆಲ್ಲವನ್ನು ನನಗೆ ತಿಳಿಸಿರಿ. ॥ ೩ ॥ ನೀವು ನನಗೆ ತಂದೆಯಾಗಿದ್ದು ನಾನು ನಿಮ್ಮ ಮಗನಲ್ಲವೇ! ಅಪ್ಪಾ! ಇದನ್ನು ತಿಳಿದುಕೊಳ್ಳಬೇಕೆಂಬ ಉತ್ಕಂಠತೆಯೂ ಇದೆ. ಲೋಕದಲ್ಲಿ ಸಮಸ್ತರನ್ನು ತಮ್ಮಂತೆಯೇ ಕಾಣುವ, 'ಇವರು ತಮ್ಮವರು, ಇವರು ಪರರು' ಎಂಬ ಭೇದ ಭಾವವೇ ಇಲ್ಲದಿರುವ ಸಾಧುಗಳಿಗೆ ಇತರರಿಂದ ಮುಚ್ಚಿಡಬೇಕಾದುದು ಯಾವುದೂ ಇರುವುದಿಲ್ಲ. ಇವರಿಗೆ ಮಿತ್ರ-ಶತ್ರು ಉದಾಸೀನ ಇವರಲ್ಲಿ ಯಾವ ಭೇದವೂ ಇರುವುದಿಲ್ಲ. ಆದರೆ ಇಂತಹ ಸ್ಥಿತಿಯಿಲ್ಲದಿದ್ದರೆ ರಹಸ್ಯದ ಮಾತನ್ನು ಶತ್ರುವಿನಂತೆ ಉದಾಸೀನನಲ್ಲಿಯೂ ಹೇಳಬಾರದು. ಮಿತ್ರನಾದರೋ ತನ್ನಂತೆಯೇ ಎಂದು ಹೇಳಲಾಗಿದೆ. ಆದಕ್ಕಾಗಿ ಅವನಲ್ಲಿ ಯಾವ ಮಾತನ್ನು ಮರೆಮಾಚಲಾಗುವುದಿಲ್ಲ. ॥ ೪-೫ ॥

ಜ್ಞಾತ್ವಾಜ್ಞಾತ್ವಾ ಚ ಕರ್ಮಾಣಿ ಜನೋಽಯಮನುತಿಷ್ಠತಿ ।
ವಿದುಷಃ ಕರ್ಮಸಿದ್ಧಿಃ ಸ್ಯಾತ್ತಥಾ ನಾವಿದುಷೋ ಭವೇತ್ ॥ ೬ ॥

ತತ್ರ ತಾವತ್ಕ್ರಿಯಾಯೋಗೋ ಭವತಾಂ ಕಿಂ ವಿಚಾರಿತಃ ।
ಅಥವಾ ಲೌಕಿಕಸ್ತನ್ಮೇ ಪೃಚ್ಛತಃ ಸಾಧು ಭಣ್ಯತಾಮ್ ॥ ೭ ॥

*ನಂದಗೋಪ ಉವಾಚ*

ಪರ್ಜನ್ಯೋ ಭಗವಾನಿಂದ್ರೋ ಮೇಘಾಸ್ತಸ್ಯಾತ್ಮಮೂರ್ತಯಃ ।
ತೇಽಭಿವರ್ಷಂತಿ ಭೂತಾನಾಂ ಪ್ರೀಣನಂ ಜೀವನಂ ಪಯಃ ॥ ೮ ॥

ತಂ ತಾತ ವಯಮನ್ಯೇ ಚ ವಾರ್ಮುಚಾಂ ಪತಿಮೀಶ್ವರಮ್ ।
ದ್ರವ್ಯೈಸ್ತದ್ರೇತಸಾ ಸಿದ್ಧೈರ್ಯಜಂತೇ ಕ್ರತುಭಿರ್ನರಾಃ ॥ ೯ ॥

ತಚ್ಛೇಷೇಣೋಪಜೀವಂತಿ ತ್ರಿವರ್ಗಫಲಹೇತವೇ ।
ಪುಂಸಾಂ ಪುರುಷಕಾರಾಣಾಂ ಪರ್ಜನ್ಯಃ ಫಲಭಾವನಃ ॥ ೧೦ ॥

ಯ ಏವಂ ವಿಸೃಜೇದ್ಧರ್ಮಂ ಪಾರಂಪರ್ಯಾಗತಂ ನರಃ ।
ಕಾಮಾಲ್ಲೋಭಾದ್ಭಯಾದ್ದ್ವೇಷಾತ್ಸ ವೈ ನಾಪ್ನೋತಿ ಶೋಭನಮ್ ॥ ೧೧ ॥

*ಶ್ರೀಶುಕ ಉವಾಚ*

ವಚೋ ನಿಶಮ್ಯ ನಂದಸ್ಯ ತಥಾನ್ಯೇಷಾಂ ವ್ರಜೌಕಸಾಮ್ ।
ಇಂದ್ರಾಯ ಮನ್ಯುಂ ಜನಯನ್ಪಿತರಂ ಪ್ರಾಹ ಕೇಶವಃ ॥ ೧೨ ॥

*ಶ್ರೀಭಗವಾನುವಾಚ*

ಕರ್ಮಣಾ ಜಾಯತೇ ಜಂತುಃ ಕರ್ಮಣೈವ ವಿಲೀಯತೇ ।
ಸುಖಂ ದುಃಖಂ ಭಯಂ ಕ್ಷೇಮಂ ಕರ್ಮಣೈವಾಭಿಪದ್ಯತೇ ॥ ೧೩ ॥

ಅಸ್ತಿ ಚೇದೀಶ್ವರಃ ಕಶ್ಚಿತ್ಫಲರೂಪ್ಯನ್ಯಕರ್ಮಣಾಮ್ ।
ಕರ್ತಾರಂ ಭಜತೇ ಸೋಽಪಿ ನ ಹ್ಯಕರ್ತುಃ ಪ್ರಭುರ್ಹಿ ಸಃ ॥ ೧೪ ॥

ಕಿಮಿಂದ್ರೇಣೇಹ ಭೂತಾನಾಂ ಸ್ವಸ್ವಕರ್ಮಾನುವರ್ತಿನಾಮ್ ।
ಅನೀಶೇನಾನ್ಯಥಾ ಕರ್ತುಂ ಸ್ವಭಾವವಿಹಿತಂ ನೃಣಾಮ್ ॥ ೧೫ ॥

ಈ ಸಂಸಾರಿ ಮನುಷ್ಯನು ತಿಳಿದೋ-ತಿಳಿಯದೆಯೋ ಅನೇಕ ವಿಧದ ಕರ್ಮಗಳ ಅನುಷ್ಠಾನವನ್ನು ಮಾಡುತ್ತಾನೆ. ಅದರಲ್ಲಿ ತಿಳಿದು-ತಿಳಿದು ಮಾಡಿದ ಕರ್ಮಗಳು ಫಲಕೊಡುವಂತೆ ತಿಳಿಯದೇ ಮಾಡಿದ ಕರ್ಮಗಳ ಫಲದೊರೆಯುವುದಿಲ್ಲ. ॥ ೬ ॥ ಆದ್ದರಿಂದ ಈಗ ನೀವೆಲ್ಲರೂ ಮಾಡಲು ಹೊರಟಿರುವ ಕ್ರಿಯಾ ಯೋಗವು ಸಹೃದಯರೊಂದಿಗೆ ವಿಚಾರ ವಿಮರ್ಶೆಮಾಡಿ, ಶಾಸ್ತ್ರಸಮ್ಮತವೂ ಅಥವಾ ಲೌಕಿಕವೇ ಇರಬಹುದು. ಇದೆಲ್ಲವನ್ನು ನಾನು ತಿಳಿಯಲು ಬಯಸುತ್ತೇನೆ. ದಯಮಾಡಿ ಸ್ಪಷ್ಟವಾಗಿ ಹೇಳು ವವರಾಗಿರಿ. ॥ ೭ ॥

**ನಂದಗೋಪನು ಹೇಳಿದನು** - ಮಗು! ಭಗವಾನ್ ಇಂದ್ರನು ಮಳೆಗರೆಯುವ ಮೇಘಗಳ ಅಧಿಪತಿಯಾಗಿರುವನು. ಈ ಮೇಘಗಳು ಅವನದೇ ರೂಪಗಳಾಗಿವೆ. ಅವು ಸಮಸ್ತ ಪ್ರಾಣಿಗಳನ್ನು ತೃಪ್ತಿಪಡಿಸುವಂತಹ ಜೀವನ ದಾತೃವಾದ ನೀರನ್ನು ಸುರಿಸುವುವು. ॥ ೮ ॥ ನನ್ನ ಮುದ್ದುಕಂದ! ನಾವು ಮತ್ತು ಇತರರು ಅದೇ ಮೇಘಪತಿಯಾದ ಭಗವಾನ್ ಇಂದ್ರನನ್ನು ಯಜ್ಞಗಳ ಮೂಲಕ ಪೂಜಿಸುತ್ತೇವೆ. ಯಜ್ಞಮಾಡುವ ಸಾಮಗ್ರಿ ಗಳೂ ಕೂಡ ಅವನು ಸುರಿಸಿದ ಶಕ್ತಿಯುತವಾದ ನೀರಿನಿಂದಲೇ ಉತ್ಪನ್ನವಾಗಿವೆ. ॥ ೯ ॥ ಅವನ ಯಜ್ಞವನ್ನು ಮಾಡಿದ ಬಳಿಕ ಉಳಿದಿರುವ ಅನ್ನದಿಂದಲೇ ನಾವೆಲ್ಲರೂ ಅರ್ಥ, ಧರ್ಮ ಮತ್ತು ಕಾಮರೂಪವಾದ ತ್ರಿವರ್ಗಗಳ ಸಿದ್ಧಿಗಾಗಿ ಜೀವನನಿರ್ವಾಹ ಮಾಡುತ್ತೇವೆ. ಮನುಷ್ಯರ ಬೇಸಾಯವೇ ಮುಂತಾದ ಪ್ರಯತ್ನ ಗಳಿಗೆ ಫಲವನ್ನು ಕೊಡುವವನು ಇಂದ್ರನೇ ಆಗಿರುವನು. ॥ ೧೦ ॥ ಈ ಧರ್ಮವು (ಸಂಪ್ರದಾಯ) ನಮ್ಮ ಕುಲಪರಂಪರೆಯಿಂದ ನಡೆದು ಬಂದಿದೆ. ಇಂತಹ ಪರಂಪರಾಗತ ಧರ್ಮವನ್ನು ಕಾಮ, ಲೋಭ, ಭಯ ಅಥವಾ ದ್ವೇಷದಿಂದ ಬಿಟ್ಟು ಬಿಡುವವನಿಗೆ ಎಂದಿಗೂ ಒಳ್ಳೆಯದಾಗುವುದಿಲ್ಲ. ॥ ೧೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಭಗವಾನ್ ಕೇಶವನು ತಂದೆಯ ಮತ್ತು ಇತರ ವ್ರಜವಾಸಿಗಳ ಮಾತನ್ನು ಕೇಳಿ ಇಂದ್ರನಿಗೆ ಕೋಪವನ್ನುಂಟುಮಾಡುವ ಈ ಮಾತುಗಳನ್ನು ನಂದಗೋಪನ ಬಳಿ ಹೇಳಿದನು. ॥ ೧೨ ॥

**ಶ್ರೀಭಗವಂತನು ಹೇಳಿದನು** - ತಂದೆಯವರೇ! ಪ್ರಾಣಿಯು ತನ್ನ ಕರ್ಮಕ್ಕನುಸಾರವಾಗಿಯೇ ಹುಟ್ಟುತ್ತಾನೆ ಮತ್ತು ಕರ್ಮಾನು ಸಾರವೇ ಸಾಯುತ್ತಾನೆ. ಅವನಿಗೆ ಅವನ ಕರ್ಮಕ್ಕೆ ಅನುಸಾರವೇ ಸುಖ-ದುಃಖ, ಭಯ ಕ್ಷೇಮಗಳು ಪ್ರಾಪ್ತವಾಗುತ್ತವೆ. ॥ ೧೩ ॥ ಜಡವಾದ ಕರ್ಮವೇ ಕರ್ಮ ಮಾಡಿದವನಿಗೆ ಫಲ ನೀಡದೆಂದೂ, ಫಲವನ್ನು ಕೊಡುವ ಬೇರೊಬ್ಬ ಈಶ್ವರನಿದ್ದಾನೆಂದು ಭಾವಿಸಿದರೂ, ಆ ಈಶ್ವರನೂ ಕೂಡ ಕರ್ಮಮಾಡಿದವನಿಗೇ ಫಲನೀಡಬಲ್ಲನೇ ಹೊರತು ಕರ್ಮಮಾಡದವನ ಮೇಲೆ ಅವನ ಪ್ರಭಾವವೇನೂ ನಡೆಯುವುದಿಲ್ಲ. ॥ ೧೪ ॥ ಸಮಸ್ತ ಪ್ರಾಣಿಗಳೂ ತಮ್ಮ-ತಮ್ಮ ಕರ್ಮಗಳ ಫಲಗಳನ್ನೇ ಅನುಭವಿಸುತ್ತಿರುವಾಗ ನಮಗೆ ಇಂದ್ರನ ಆವಶ್ಯಕತೆ ಏನಿದೆ? ಅಪ್ಪಾಜೀ! ಪೂರ್ವಸಂಸ್ಕಾರಕ್ಕೆ ಅನುಸಾರ ಪ್ರಾಪ್ತವಾಗುವ ಮನುಷ್ಯರ ಕರ್ಮಗಳನ್ನು ಅವನು ಬದಲಿಸ ಲಾರನೆಂದಾಗ ಅವನಿಂದ ಏನು ಪ್ರಯೋಜನ? ॥ ೧೫ ॥

ಸ್ವಭಾವತಂತ್ರೋ ಹಿ ಜನಃ ಸ್ವಭಾವಮನುವರ್ತತೇ ।
ಸ್ವಭಾವಸ್ಥಮಿದಂ ಸರ್ವಂ ಸದೇವಾಸುರಮಾನುಷಮ್
॥ ೧೬ ॥

ದೇಹಾನುಚ್ಚಾವಚಾನ್ ಜಂತುಃ ಪ್ರಾಪ್ಯೋತ್ಸೃಜತಿ ಕರ್ಮಣಾ ।
ಶತ್ರುರ್ಮಿತ್ರಮುದಾಸೀನಃ ಕರ್ಮೈವ ಗುರುರೀಶ್ವರಃ
॥ ೧೭ ॥

ತಸ್ಮಾತ್ಸಂಪೂಜಯೇತ್ಕರ್ಮ ಸ್ವಭಾವಸ್ಥಃ ಸ್ವಕರ್ಮಕೃತ್ ।
ಅಂಜಸಾ ಯೇನ ವರ್ತೇತ ತದೇವಾಸ್ಯ ಹಿ ದೈವತಮ್
॥ ೧೮ ॥

ಆಜೀವ್ಯೈಕತರಂ ಭಾವಂ ಯಸ್ತ್ವನ್ಯಮುಪಜೀವತಿ ।
ನ ತಸ್ಮಾದ್ವಿಂದತೇ ಕ್ಷೇಮಂ ಜಾರಂ ನಾರ್ಯಸತೀ ಯಥಾ
॥ ೧೯ ॥

ವರ್ತೇತ ಬ್ರಹ್ಮಣಾ ವಿಪ್ರೋ ರಾಜನ್ಯೋ ರಕ್ಷಯಾ ಭುವಃ ।
ವೈಶ್ಯಸ್ತು ವಾರ್ತಯಾ ಜೀವೇಚ್ಛೂದ್ರಸ್ತು ದ್ವಿಜಸೇವಯಾ
॥ ೨೦ ॥

ಕೃಷಿವಾಣಿಜ್ಯಗೋರಕ್ಷಾ ಕುಸೀದಂ ತುರ್ಯಮುಚ್ಯತೇ ।
ವಾರ್ತಾ ಚತುರ್ವಿಧಾ ತತ್ರ ವಯಂ ಗೋವೃತ್ತಯೋಽನಿಶಮ್
॥ ೨೧ ॥

ಸತ್ತ್ವಂ ರಜಸ್ತಮ ಇತಿ ಸ್ಥಿತ್ಯುತ್ಪತ್ತ್ಯಂತಹೇತವಃ ।
ರಜಸೋತ್ಪದ್ಯತೇ ವಿಶ್ವಮನ್ಯೋನ್ಯಂ ವಿವಿಧಂ ಜಗತ್
॥ ೨೨ ॥

ರಜಸಾ ಚೋದಿತಾ ಮೇಘಾ ವರ್ಷಂತ್ಯಂಬೂನಿ ಸರ್ವತಃ ।
ಪ್ರಜಾಸ್ತೈರೇವ ಸಿದ್ಧ್ಯಂತಿ ಮಹೇಂದ್ರಃ ಕಿಂ ಕರಿಷ್ಯತಿ
॥ ೨೩ ॥

ನ ನಃ ಪುರೋ ಜನಪದಾ ನ ಗ್ರಾಮಾ ನ ಗೃಹಾ ವಯಮ್ ।
ನಿತ್ಯಂ ವನೌಕಸಸ್ತಾತ ವನಶೈಲನಿವಾಸಿನಃ
॥ ೨೪ ॥

ತಸ್ಮಾದ್ಗವಾಂ ಬ್ರಾಹ್ಮಣಾನಾಮದ್ರೇಶ್ಚಾರಭ್ಯತಾಂ ಮಖಃ ।
ಯ ಇಂದ್ರಯಾಗಸಂಭಾರಾಸ್ತೈರಯಂ ಸಾಧ್ಯತಾಂ ಮಖಃ
॥ ೨೫ ॥

ಪಚ್ಯಂತಾಂ ವಿವಿಧಾಃ ಪಾಕಾಃ ಸೂಪಾಂತಾಃ ಪಾಯಸಾದಯಃ ।
ಸಂಯಾವಾಪೂಪಶಷ್ಕುಲ್ಯಃ ಸರ್ವದೋಹಶ್ಚ ಗೃಹ್ಯತಾಮ್
॥ ೨೬ ॥

ಮನುಷ್ಯರೆಲ್ಲರೂ ತಮ್ಮ ಸ್ವಭಾವಕ್ಕೆ (ಹಿಂದಿನ ಸಂಸ್ಕಾರಕ್ಕೆ) ಅಧೀನರಾಗಿದ್ದಾರೆ. ಅವರು ಅದನ್ನೇ ಅನುಸರಿಸುತ್ತಾರೆ. ಇಷ್ಟೇ ಅಲ್ಲ, ದೇವತೆಗಳು, ಅಸುರರು, ಮನುಷ್ಯರು -ಇವರಿಂದ ಕೂಡಿದ ಈ ಜಗತ್ತೆಲ್ಲವೂ ಸ್ವಭಾವದಲ್ಲೇ ನೆಲೆನಿಂತಿದೆ. ॥ ೧೬ ॥ ಜೀವನು ತನ್ನ ಕರ್ಮಕ್ಕೆ ಅನುಸಾರವೇ ಉತ್ತಮ ಅಥವಾ ಅಧಮ ಶರೀರಗಳನ್ನು ಪಡೆಯುತ್ತಾನೆ ಹಾಗೂ ತೊರೆಯುತ್ತಾರೆ. ತನ್ನ ಕರ್ಮಕ್ಕನುಸಾರವೇ ಇವನು ಶತ್ರು, ಇವನು ಮಿತ್ರ, ಇವನು ಉದಾಸೀನ ಎಂದು ವ್ಯವಹರಿಸುತ್ತಾನೆ. ಕರ್ಮವೇ ಗುರು, ಕರ್ಮವೇ ಈಶ್ವರನು. ॥ ೧೭ ॥ ಅದಕ್ಕಾಗಿ ತಂದೆಯವರೇ ! ಮನುಷ್ಯನು ತನ್ನ ಪೂರ್ವಸಂಸ್ಕಾರಕ್ಕನುಸಾರ ಬಂದಿರುವ ವರ್ಣ ಮತ್ತು ಆಶ್ರಮಕ್ಕೆ ಅನುಕೂಲವಾದ ಧರ್ಮಗಳನ್ನೇ ಪಾಲಿಸುತ್ತಾ ಕರ್ಮವನ್ನೇ ಆದರಿಸಬೇಕು. ಯಾವುದರಿಂದ ಮನುಷ್ಯನ ಜೀವನ ನಿರ್ವಾಹವು ಸುಗಮವಾಗಿ ನಡೆಯುವುದೋ ಅದೇ ಅವನಿಗೆ ಇಷ್ಟದೇವತೆಯಾಗಿರುತ್ತದೆ. ॥ ೧೮ ॥ ತನ್ನ ವಿವಾಹಿತ ಪತಿಯನ್ನು ತೊರೆದು ಜಾರನನ್ನು ಸೇವಿಸುವ ವ್ಯಭಿಚಾರಿಣಿ ಸ್ತ್ರೀಯು ಎಂದಿಗೂ ಶಾಂತಿಯನ್ನು ಪಡೆಯಲಾರಳು. ಹಾಗೆಯೇ ತನ್ನ ಜೀವನ ನಿರ್ವಾಹ ನಡೆಸುವ ಒಂದು ದೇವತೆಯನ್ನು ಬಿಟ್ಟು ಬೇರೆ ದೇವರನ್ನು ಉಪಾಸಿಸುವ ಮನುಷ್ಯನಿಗೆ ಎಂದಿಗೂ ಸುಖವು ಸಿಗಲಾರದು. ॥ ೧೯ ॥ ಬ್ರಾಹ್ಮಣನು ಅಧ್ಯಯನ-ಅಧ್ಯಾಪನದಿಂದ, ಕ್ಷತ್ರಿಯನು ಪ್ರಜಾಪಾಲನೆಯಿಂದ, ವೈಶ್ಯನು ವಾರ್ತೆಯಿಂದ ಮತ್ತು ಶೂದ್ರನು ತ್ರಿವರ್ಣದವರ ಸೇವೆಯಿಂದ ಜೀವನವನ್ನು ನಿರ್ವಹಿಸಬೇಕು. ॥ ೨೦ ॥ ವೈಶ್ಯರ ವಾರ್ತೆಯು - ಕೃಷಿ, ವಾಣಿಜ್ಯ, ಗೋರಕ್ಷಣೆ ಮತ್ತು ಬಡ್ಡಿ ಪಡೆಯುವುದು ಎಂಬ ನಾಲ್ಕು ವಿಧವಾಗಿದೆ. ನಾವುಗಳು ಆ ನಾಲ್ಕರಲ್ಲಿ ಕೇವಲ ಗೋರಕ್ಷಣೆಯನ್ನೇ ಹಿಂದಿನಿಂದಲೂ ಮಾಡುತ್ತಾ ಬಂದಿರುವೆವು. ॥ ೨೧ ॥ ಅಪ್ಪಾ ! ಈ ಪ್ರಪಂಚದ ಸ್ಥಿತಿ-ಉತ್ಪತ್ತಿ-ಲಯಗಳು ಕ್ರಮವಾಗಿ ಸತ್ತ್ವಗುಣ, ರಜೋಗುಣ ಮತ್ತು ತಮೋಗುಣಗಳಿಂದ ಆಗುತ್ತವೆ. ವಿವಿಧ ರೀತಿಯ ಈ ಜಗತ್ತು ಸ್ತ್ರೀ-ಪುರುಷರ ಸಂಯೋಗದಿಂದ ರಜೋಗುಣದ ಮೂಲಕ ಹುಟ್ಟುತ್ತದೆ. ॥ ೨೨ ॥ ಅದೇ ರಜೋಗುಣದ ಪ್ರೇರಣೆಯಿಂದ ಮೇಘಗಳು ಎಲ್ಲೆಡೆ ನೀರು ಸುರಿಸುತ್ತವೆ. ಅದರಿಂದ ಅನ್ನವೂ ಮತ್ತು ಅನ್ನದಿಂದ ಸಮಸ್ತ ಜೀವರ ಜೀವನ ನಡೆಯುತ್ತದೆ. ಇದರಲ್ಲಿ ಇಂದ್ರನ ಸಂಬಂಧವೇನಿದೆ ? ಅವನೇನು ಮಾಡಬಲ್ಲನು ? ॥ ೨೩ ॥ ತಂದೆಯವರೇ ! ನಮ್ಮ ಅಧೀನದಲ್ಲಿ ಯಾವುದೇ ರಾಜ್ಯ ವಾಗಲೀ, ಪಟ್ಟಣವಾಗಲೀ, ಊರಾಗಲೀ, ಹಳ್ಳಿಯಾಗಲೀ ಇರುವುದಿಲ್ಲ, ನಮಗೆ ಮನೆ-ಮಠಗಳೂ ಇಲ್ಲ, ನಾವಾದರೋ ವನವಾಸಿಗಳು. ವನ ಮತ್ತು ಪರ್ವತವೇ ನಮ್ಮ ಮನೆಯಾಗಿದೆ.॥ ೨೪ ॥ ಆದುದರಿಂದ ನಾವುಗಳು ಗೋವುಗಳ, ಬ್ರಾಹ್ಮಣರ ಮತ್ತು ಗಿರಿರಾಜನಾದ ಗೋವರ್ಧನದ ಕುರಿತು ಯಜ್ಞವನ್ನು ಪ್ರಾರಂಭಿಸೋಣ. ಇಂದ್ರಯಜ್ಞಕ್ಕಾಗಿ ಸಂಗ್ರಹಿಸಿದ ಸಾಮಗ್ರಿಗಳಿಂದಲೇ ಈ ಯಜ್ಞಾನುಷ್ಠಾನ ನಡೆಯಲಿ. ॥ ೨೫ ॥ ಈ ಯಜ್ಞಕ್ಕಾಗಿ ಅನೇಕ ಪ್ರಕಾರದ ಪಕ್ವಾನ್ನಗಳೂ, ಪಾಯಸ, ಕಜ್ಜಾಯಗಳೂ, ಚಕ್ಕುಲಿಗಳೂ ಮೊದಲ್ಗೊಂಡು ತೊವ್ವೆಯವರೆಗಿನ ಬಗೆ-ಬಗೆಯ ಅಡಿಗೆಗಳನ್ನು ಸಿದ್ಧಪಡಿಸಿರಿ. ಇಂದು ಕರೆದ ಹಸುಗಳ ಎಲ್ಲ ಹಾಲನ್ನು ಕೂಡಿಹಾಕಿರಿ. ॥ ೨೬ ॥

ಹೂಯಂತಾಮಗ್ನಯಃ ಸಮ್ಯಗ್ಬ್ರಾಹ್ಮಣೈರ್ಬ್ರಹ್ಮವಾದಿಭಿಃ ।
ಅನ್ನಂ ಬಹುವಿಧಂ ತೇಭ್ಯೋ ದೇಯಂ ವೋ ಧೇನುದಕ್ಷಿಣಾಃ
॥ ೨೭ ॥

ಅನ್ಯೇಭ್ಯಶ್ಚಾಶ್ವಚಾಂಡಾಲಪತಿತೇಭ್ಯೋ ಯಥಾರ್ಹತಃ ।
ಯವಸಂ ಚ ಗವಾಂ ದತ್ತ್ವಾ ಗಿರಯೇ ದೀಯತಾಂ ಬಲಿಃ
॥ ೨೮ ॥

ಸ್ವಲಂಕೃತಾ ಭುಕ್ತವಂತಃ ಸ್ವನುಲಿಪ್ತಾಃ ಸುವಾಸಸಃ ।
ಪ್ರದಕ್ಷಿಣಂ ಚ ಕುರುತ ಗೋವಿಪ್ರಾನಲಪರ್ವತಾನ್
॥ ೨೯ ॥

ಏತನ್ಮಮ ಮತಂ ತಾತ ಕ್ರಿಯತಾಂ ಯದಿ ರೋಚತೇ ।
ಅಯಂ ಗೋಬ್ರಾಹ್ಮಣಾದ್ರೀಣಾಂ ಮಹ್ಯಂ ಚ ದಯಿತೋ ಮಖಃ
॥ ೩೦ ॥

*ಶ್ರೀಶುಕ ಉವಾಚ*

ಕಾಲಾತ್ಮನಾ ಭಗವತಾ ಶಕ್ರದರ್ಪಂ ಜಿಘಾಂಸತಾ ।
ಪ್ರೋಕ್ತಂ ನಿಶಮ್ಯ ನಂದಾದ್ಯಾಃ ಸಾಧ್ವಗೃಹ್ಣಂತ ತದ್ವಚಃ
॥ ೩೧ ॥

ತಥಾ ಚ ವ್ಯದಧುಃ ಸರ್ವಂ ಯಥಾಽಽಹ ಮಧುಸೂದನಃ ।
ವಾಚಯಿತ್ವಾ ಸ್ವಸ್ತ್ಯಯನಂ ತದ್ದ್ರವ್ಯೇಣ ಗಿರಿದ್ವಿಜಾನ್
॥ ೩೨ ॥

ಉಪಹೃತ್ಯ ಬಲೀನ್ ಸರ್ವಾನಾದೃತಾ ಯವಸಂ ಗವಾಮ್ ।
ಗೋಧನಾನಿ ಪುರಸ್ಕೃತ್ಯ ಗಿರಿಂ ಚಕ್ರುಃ ಪ್ರದಕ್ಷಿಣಮ್
॥ ೩೩ ॥

ಅನಾಂಸ್ಯನಡುದ್ಯುಕ್ತಾನಿ ತೇ ಚಾರುಹ್ಯ ಸ್ವಲಂಕೃತಾಃ ।
ಗೋಪ್ಯಶ್ಚ ಕೃಷ್ಣವೀರ್ಯಾಣಿ ಗಾಯಂತ್ಯಃ ಸದ್ವಿಜಾಶಿಷಃ
॥ ೩೪ ॥

ಕೃಷ್ಣಸ್ತ್ವನ್ಯತಮಂ ರೂಪಂ ಗೋಪವಿಶ್ರಂಭಣಂ ಗತಃ ।
ಶೈಲೋಽಸ್ಮೀತಿಬ್ರುವನ್ ಭೂರಿ ಬಲಿಮಾದದ್ಬೃಹದ್ವಪುಃ
॥ ೩೫ ॥

ತಸ್ಮೈ ನಮೋ ವ್ರಜಜನೈಃ ಸಹ ಚಕ್ರೇಽಽತ್ಮನಾಽಽತ್ಮನೇ ।
ಅಹೋ ಪಶ್ಯತ ಶೈಲೋಽಸೌ ರೂಪೀ ನೋಽನುಗ್ರಹಂ ವ್ಯಧಾತ್
॥ ೩೬ ॥

ಏಷೋಽವಜಾನತೋ ಮರ್ತ್ಯಾನ್ಕಾಮರೂಪೀ ವನೌಕಸಃ ।
ಹಂತಿ ಹ್ಯಸ್ಮೈ ನಮಸ್ಯಾಮಃ ಶರ್ಮಣೇ ಆತ್ಮನೋ ಗವಾಮ್
॥ ೩೭ ॥

ಬ್ರಹ್ಮವಾದಿಗಳಾದ ಬ್ರಾಹ್ಮಣರು ಅಗ್ನಿಯಲ್ಲಿ ಚೆನ್ನಾಗಿ ಹವನ ಮಾಡಲಿ. ಅವರಿಗೆ ಅನೇಕ ವಿಧದ ಭಕ್ಷ್ಯಗಳಿಂದ ಕೂಡಿದ ಊಟ ಮಾಡಿಸಿ, ಗೋವುಗಳನ್ನೂ, ದಕ್ಷಿಣೆಯನ್ನೂ ದಾನ ಮಾಡಿರಿ.॥೨೭॥ ಬಳಿಕ ಇತರ ವರ್ಣದವರಿಗೂ, ಶುನಕ-ಚಾಂಡಾಲ ಪತಿತರಿಗೂ ಯಥಾಯೋಗ್ಯವಾಗಿ ಭೋಜನವನ್ನು ಮಾಡಿಸಿ, ಗೋವುಗಳಿಗೆ ಹುಲ್ಲು ತಿನ್ನಿಸಿ, ಗೋವರ್ಧನ ಗಿರಿಯನ್ನು ಪೂಜಿಸಿರಿ. ॥ ೨೮ ॥ ಬಳಿಕ ನೀವು ಭೋಜನವನ್ನು ಮಾಡಿ, ಹೊಸಬಟ್ಟೆಗಳನ್ನು ಧರಿಸಿ, ಗಂಧವನ್ನು ಪೂಸಿಕೊಂಡು ಅಲಂಕೃತರಾಗಿ ಅಗ್ನಿಗೆ, ಗೋವುಗಳಿಗೆ, ಬ್ರಾಹ್ಮಣರಿಗೆ, ಪರ್ವತರಾಜನಿಗೂ ಪ್ರದಕ್ಷಿಣೆ ಮಾಡಿರಿ. ॥ ೨೯ ॥ ಅಪ್ಪಾ! ಇದು ನಿಮಗೆಲ್ಲರಿಗೆ ಉಚಿತವೆನಿಸಿದಲ್ಲಿ ನಾನು ಹೇಳಿದಂತೆ ಮಾಡಬಹುದು. ಈ ಯಜ್ಞವು ಗೋ-ಬ್ರಾಹ್ಮಣ-ಗಿರಿರಾಜನಾದ ಗೋವರ್ಧನನಿಗೆ ಪ್ರಿಯವಾಗಿದೆ. ನನಗೂ ಈ ಯಜ್ಞವೇ ಅತ್ಯಂತ ಪ್ರಿಯವಾಗಿದೆ. ॥ ೩೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಕಾಲಾತ್ಮಕನಾದ ಭಗವಂತನಿಗೆ ಇಂದ್ರನ ಅಹಂಕಾರ ಮುರಿಯುವುದೇ ಆಶಯವಾಗಿತ್ತು. ನಂದಗೋಪನೇ ಮೊದಲಾದವರು, ಅವನ ಮಾತನ್ನು ಕೇಳಿ ಸಾಧು! ಸಾಧು! ಬಹಳ ಒಳ್ಳೆಯದೆಂದು ಹೇಳುತ್ತಾ ಸಂತೋಷದಿಂದ ಅಂಗೀಕರಿಸಿದರು. ॥ ೩೧ ॥ ಭಗವಾನ್ ಶ್ರೀಕೃಷ್ಣನು ಹೇಳಿದಂತೆಯೆ ಯಜ್ಞವನ್ನು ಪ್ರಾರಂಭಿಸಿದರು. ಮೊದಲಿಗೆ ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿ, ಅವರಿಂದ ಹೋಮ ಹವನಾದಿಗಳನ್ನು ಮಾಡಿಸಿ ಅವರಿಗೆ ಭೂರಿದಕ್ಷಿಣೆಯನ್ನಿತ್ತರು. ಗಿರಿರಾಜನನ್ನು ಅನೇಕ ವಿಧದಿಂದ ಪೂಜಿಸಿದರು. ಗೋವುಗಳಿಗೆ ಹುಲ್ಲನ್ನು ತಿನ್ನಿಸಿದ ಬಳಿದ ನಂದಗೋಪನೇ ಮೊದಲಾದ ಗೋಪರು ಗೋವುಗಳನ್ನು ಮುಂದಿಟ್ಟುಕೊಂಡು ಗಿರಿರಾಜನ ಪ್ರದಕ್ಷಿಣೆ ಮಾಡಿದರು. ॥ ೩೨-೩೩ ॥ ಬ್ರಾಹ್ಮಣರ ಆಶೀರ್ವಾದಗಳನ್ನು ಪಡೆದು ಗೋಪ-ಗೋಪಿಯರು ಚೆನ್ನಾಗಿ ಸಿಂಗರಿಸಿಕೊಂಡು ಎತ್ತುಗಳು ಹೂಡಿದ ಬಂಡಿಗಳಲ್ಲಿ ಕುಳಿತುಕೊಂಡು ಭಗವಾನ್ ಶ್ರೀಕೃಷ್ಣನ ಲೀಲೆಗಳನ್ನು ಹಾಡುತ್ತಾ ಗೋವರ್ಧನ ಗಿರಿಯ ಪ್ರದಕ್ಷಿಣೆ ಮಾಡತೊಡಗಿದರು. ॥ ೩೪ ॥ ಶ್ರೀಕೃಷ್ಣನು ಗೋಪಾಲಕರಿಗೆ ವಿಶ್ವಾಸವನ್ನುಂಟುಮಾಡಲಿಕ್ಕಾಗಿ ಗೋವರ್ಧನ ಗಿರಿಯಮೇಲೆ ಇನ್ನೊಂದು ವಿಶಾಲದೇಹವನ್ನು ಧರಿಸಿ ಪ್ರಕಟನಾದನು. 'ನಾನು ಗಿರಿರಾಜನಾಗಿರುವೆ' ಹೀಗೆ ಹೇಳುತ್ತಾ ಅವರು ಅರ್ಪಿಸಿದ ಪೂಜೆಯನ್ನು ಸ್ವೀಕರಿಸಿ, ಭಕ್ಷ್ಯ ಭೋಜ್ಯಗಳನ್ನು ಸಾಕ್ಷಾತ್ತಾಗಿ ಭುಂಜಿಸಿದನು. ॥ ೩೫ ॥ ಭಗವಾನ್ ಶ್ರೀಕೃಷ್ಣನು ತನ್ನದೇ ಆದ ಆ ಸ್ವರೂಪಕ್ಕೆ ಇತರ ವ್ರಜವಾಸಿಗಳೊಂದಿಗೆ ನಮಸ್ಕರಿಸಿದನು ಮತ್ತು ಹೇಳಿದನು - 'ನೋಡಿ, ನೋಡಿ! ಎಂತಹ ಆಶ್ಚರ್ಯವಾಗಿದೆ! ಗಿರಿರಾಜನೆ ಸಾಕ್ಷಾತ್ತಾಗಿ ಪ್ರಕಟನಾಗಿ ನಮ್ಮ ಮೇಲೆ ಕೃಪೆಯನ್ನು ತೋರಿರುವನು. ॥ ೩೬ ॥ ಬಂಧುಗಳೇ! ಈ ಪರ್ವತವು ಯಾವುದೇ ರೂಪವನ್ನು ಧರಿಸಬಲ್ಲದು. ಇದನ್ನು ತಿರಸ್ಕರಿಸುವ ವನವಾಸಿಗಳನ್ನು ಈ ಪರ್ವತವು ಕೊಂದೇಬಿಡುತ್ತದೆ. ಬನ್ನಿರಿ, ನಮ್ಮ ಮತ್ತು ಗೋವುಗಳ ಕ್ಷೇಮಕ್ಕಾಗಿ ಈ ಗಿರಿರಾಜನಿಗೆ ನಮಸ್ಕರಿಸೋಣ.' ॥ ೩೭ ॥

ಇತ್ಯದ್ರಿಗೋದ್ವಿಜಮಖಂ ವಾಸುದೇವಪ್ರಚೋದಿತಾಃ ।
ಯಥಾ ವಿಧಾಯ ತೇ ಗೋಪಾಃ ಸಹಕೃಷ್ಣಾ ವ್ರಜಂ ಯಯುಃ ॥ ೩೮ ॥

ಹೀಗೆ ಭಗವಾನ್ ಶ್ರೀಕೃಷ್ಣನ ಪ್ರೇರಣೆಯಿಂದ ನಂದಗೋಪನೇ ಮೊದಲಾದ ಹಿರಿಯ-ಕಿರಿಯ ಗೋಪಾಲಕರು ಗಿರಿರಾಜನನ್ನು, ಗೋವುಗಳನ್ನು, ಬ್ರಾಹ್ಮಣರನ್ನು ವಿಧಿವತ್ತಾಗಿ ಪೂಜಿಸಿ ಮತ್ತೆ ಶ್ರೀಕೃಷ್ಣನೊಂದಿಗೆ ಎಲ್ಲರೂ ವ್ರಜಕ್ಕೆ ಮರಳಿ ಬಂದರು. ॥ ೩೮ ॥

ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೨೪ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಚತುರ್ವಿಂಶೋಽಧ್ಯಾಯಃ ॥ ೨೪ ॥

# ಇಪ್ಪತ್ತೈದನೆಯ ಅಧ್ಯಾಯ

## ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ಎತ್ತಿದುದು

*ಶ್ರೀಶುಕ ಉವಾಚ*

ಇಂದ್ರಸ್ತದಾಽಽತ್ಮನಃ ಪೂಜಾಂ ವಿಜ್ಞಾಯ ವಿಹತಾಂ ನೃಪ ।
ಗೋಪೇಭ್ಯಃ ಕೃಷ್ಣನಾಥೇಭ್ಯೋ ನಂದಾದಿಭ್ಯಶ್ಚುಕೋಪ ಸಃ ॥ ೧ ॥

ಗಣಂ ಸಾಂವರ್ತಕಂ ನಾಮ ಮೇಘಾನಾಂ ಚಾಂತಕಾರಿಣಾಮ್ ।
ಇಂದ್ರಃ ಪ್ರಾಚೋದಯತ್ಕ್ರುದ್ಧೋ ವಾಕ್ಯಂ ಚಾಹೇಶಮಾನ್ಯುತ ॥ ೨ ॥

ಅಹೋ ಶ್ರೀಮದಮಾಹಾತ್ಮ್ಯಂ ಗೋಪಾನಾಂ ಕಾನನೌಕಸಾಮ್ ।
ಕೃಷ್ಣಂ ಮರ್ತ್ಯಮುಪಾಶ್ರಿತ್ಯ ಯೇ ಚಕ್ರುರ್ದೇವಹೇಲನಮ್ ॥ ೩ ॥

ಯಥಾದೃಢೈಃ ಕರ್ಮಮಯೈಃ ಕ್ರತುಭಿರ್ನಾಮನೌನಿಭೈಃ ।
ವಿದ್ಯಾಮಾನ್ವೀಕ್ಷಿಕೀಂ ಹಿತ್ವಾ ತಿತೀರ್ಷಂತಿ ಭವಾರ್ಣವಮ್ ॥ ೪ ॥

ವಾಚಾಲಂ ಬಾಲಿಶಂ ಸ್ತಬ್ಧಮಜ್ಞಂ ಪಂಡಿತಮಾನಿನಮ್ ।
ಕೃಷ್ಣಂ ಮರ್ತ್ಯಮುಪಾಶ್ರಿತ್ಯ ಗೋಪಾ ಮೇ ಚಕ್ರುರಪ್ರಿಯಮ್ ॥ ೫ ॥

ಏಷಾಂ ಶ್ರಿಯಾವಲಿಪ್ತಾನಾಂ ಕೃಷ್ಣೇನಾಧ್ಮಾಯಿತಾತ್ಮನಾಮ್ ।
ಧುನುತ ಶ್ರೀಮದಸ್ತಂಭಂ ಪಶೂನ್ನಯತ ಸಂಕ್ಷಯಮ್ ॥ ೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಗೊಲ್ಲರು ತನ್ನ ಪೂಜೆಯನ್ನು ನಿಲ್ಲಿಸಿಬಿಟ್ಟರೆಂಬುದನ್ನು ತಿಳಿದ ಇಂದ್ರನು ಶ್ರೀಕೃಷ್ಣನನ್ನೇ ರಕ್ಷಕನನ್ನಾಗಿ ಹೊಂದಿದ್ದ ನಂದಗೋಪನೇ ಮೊದಲಾದ ಗೋಪಾಲಕರ ಮೇಲೆ ಅತ್ಯಂತ ಕ್ರೋಧಗೊಂಡನು. ॥ ೧ ॥ ತಾನು ಮೂರು ಲೋಕಗಳಿಗೂ ಒಡೆಯನಾಗಿ ಇರುವೆನೆಂಬ ಅಹಂಕಾರವು ಆತನಲ್ಲಿ ಬಹಳವಾಗಿತ್ತು. ಈ ಕಾರಣದಿಂದ ಅವನು ಸಿಟ್ಟಿನಿಂದ ಉರಿದೆದ್ದು ಪ್ರಳಯವನ್ನುಂಟು ಮಾಡುವ ಸಂವರ್ತಕಗಳೆಂಬ ಮೇಘಗಳನ್ನು ಕರೆದು ವ್ರಜದ ಮೇಲೆ ಆಕ್ರಮಣ ಮಾಡಿರೆಂದು ಅಪ್ಪಣೆ ಕೊಡುತ್ತಾ, ಇಂತೆಂದನು - ॥ ೨ ॥ ಕಾಡು ಮನುಷ್ಯರಾದ ಈ ಗೊಲ್ಲರು ಧನಮದದಿಂದ ಎಷ್ಟೊಂದು ಉದ್ಧಟರಾಗಿದ್ದಾರೆ. ಸಾಮಾನ್ಯ ಮನುಷ್ಯನಾದ ಶ್ರೀಕೃಷ್ಣನನ್ನು ಅವಲಂಬಿಸಿರುವ ಇವರು ದೇವರಾಜನಾದ ನನ್ನನ್ನೇ ಅವಮಾನಿಸುತ್ತಿದ್ದಾರಲ್ಲಾ! ॥ ೩ ॥ ಅಧ್ಯಾತ್ಮವಿದ್ಯೆಯನ್ನು ಬಿಟ್ಟಿರುವ ಅನೇಕ ಮಂದಬುದ್ಧಿಯ ಜನರು ಶಿಥಿಲವಾದ ಕರ್ಮಮಯವಾದ ನಾಮಮಾತ್ರಕ್ಕೆ ನಾವೆಗಳಂತೆ ತೋರುವ ಯಜ್ಞಗಳಿಂದ ಭವಸಾಗರವನ್ನು ದಾಟಲು ಇಚ್ಛಿಸುವಂತೆ, ಇವರು ಸರ್ವಸಂಪತ್ಸಮೃದ್ಧಿಯನ್ನು ಕೊಡುವ ಇಂದ್ರನ ಯಾಗವನ್ನು ಬಿಟ್ಟು ಗೋ-ಗೋವರ್ಧನಗಳ ಪೂಜೆಯನ್ನು ಆರಂಭಿಸಿದ್ದಾರಲ್ಲ! ॥ ೪ ॥ ಬಾಯಿಬಡಕನಾದ, ಮೂರ್ಖನಾದ, ಸ್ತಬ್ಧನಾದ, ಅಜ್ಞನಾದ ಮತ್ತು ತನ್ನನ್ನು ಮಹಾಪಂಡಿತನೆಂದು ಭಾವಿಸಿಕೊಂಡಿರುವ ಮನುಷ್ಯಮಾತ್ರನಾದ ಕೃಷ್ಣನನ್ನು ಆಶ್ರಯಿಸಿ ಈ ಮೂರ್ಖ ಗೋಪಾಲಕರು ನನಗೆ ಬಹಳ ಅಪ್ರಿಯವಾದ ಕಾರ್ಯವನ್ನು ಮಾಡಿಬಿಟ್ಟರು. ॥ ೫ ॥ ಮೊದಲೇ ಇವರು ಧನಮದದಿಂದ ಉನ್ಮತ್ತರಾಗಿದ್ದರು. ಈಗ ಕೃಷ್ಣನೂ ಇವರನ್ನು ಪ್ರೋತ್ಸಾಹಿಸಿದನು. ಈಗ ನೀವು ಹೋಗಿ ಇವರ ಧನಮದವನ್ನು, ಉದ್ಧಟತನವನ್ನು ವಿನಾಶಗೊಳಿಸಿರಿ. ಅವರ ಗೋಸಂಪತ್ತನ್ನು ಧ್ವಂಸಮಾಡಿಬಿಡಿ. ॥ ೬ ॥

ಅಹಂ ಚೈರಾವತಂ ನಾಗಮಾರುಹ್ಯಾನುವ್ರಜೇ ವ್ರಜಮ್ ।
ಮರುದ್ಗಣೈರ್ಮಹಾವೀರ್ಯೈರ್ನಂದಗೋಷ್ಠಜಿಘಾಂಸಯಾ ॥ ೭ ॥

ಶ್ರೀಶುಕ ಉವಾಚ

ಇತ್ಥಂ ಮಘವತಾಽಽಜ್ಞಪ್ತಾ ಮೇಘಾ ನಿರ್ಮುಕ್ತಬಂಧನಾಃ ।
ನಂದಗೋಕುಲಮಾಸಾರೈಃ ಪೀಡಯಾಮಾಸುರೋಜಸಾ ॥ ೮ ॥

ವಿದ್ಯೋತಮಾನಾ ವಿದ್ಯುದ್ಭಿಃ ಸ್ತನಂತಃ ಸ್ತನಯಿತ್ನುಭಿಃ ।
ತೀವ್ರೈರ್ಮರುದ್ಗಣೈರ್ನುನ್ನಾ ವವೃಷುರ್ಜಲಶರ್ಕರಾಃ ॥ ೯ ॥

ಸ್ಥೂಣಾಸ್ಥೂಲಾ ವರ್ಷಧಾರಾ ಮುಂಚತ್ಸ್ವಭ್ರೇಷ್ವಭೀಕ್ಷ್ಣಶಃ ।
ಜಲೌಘೈಃ ಪ್ಲಾವ್ಯಮಾನಾ ಭೂರ್ನಾದೃಶ್ಯತ ನತೋನ್ನತಮ್ ॥ ೧೦ ॥

ಅತ್ಯಾಸಾರಾತಿವಾತೇನ ಪಶವೋ ಜಾತವೇಪನಾಃ ।
ಗೋಪಾ ಗೋಪ್ಯಶ್ಚ ಶೀತಾರ್ತಾ ಗೋವಿಂದಂ ಶರಣಂ ಯಯುಃ ॥ ೧೧ ॥

ಶಿರಃ ಸುತಾಂಶ್ಚ ಕಾಯೇನ ಪ್ರಚ್ಛಾದ್ಯಾಸಾರಪೀಡಿತಾಃ ।
ವೇಪಮಾನಾ ಭಗವತಃ ಪಾದಮೂಲಮುಪಾಯಯುಃ ॥ ೧೨ ॥

ಕೃಷ್ಣ ಕೃಷ್ಣ ಮಹಾಭಾಗ ತ್ವನ್ನಾಥಂ ಗೋಕುಲಂ ಪ್ರಭೋ ।
ತ್ರಾತುಮರ್ಹಸಿ ದೇವಾನ್ನಃ ಕುಪಿತಾದ್ಭಕ್ತವತ್ಸಲ ॥ ೧೩ ॥

ಶಿಲಾವರ್ಷನಿಪಾತೇನ ಹನ್ಯಮಾನಮಚೇತನಮ್ ।
ನಿರೀಕ್ಷ್ಯ ಭಗವಾನ್ಮೇನೇ ಕುಪಿತೇಂದ್ರಕೃತಂ ಹರಿಃ ॥ ೧೪ ॥

ಅಪರ್ತ್ವತ್ಯುಲ್ಬಣಂ ವರ್ಷಮತಿವಾತಂ ಶಿಲಾಮಯಮ್ ।
ಸ್ವಯಾಗೇ ವಿಹತೇಽಸ್ಮಾಭಿರಿಂದ್ರೋ ನಾಶಾಯ ವರ್ಷತಿ ॥ ೧೫ ॥

ತತ್ರ ಪ್ರತಿವಿಧಿಂ ಸಮ್ಯಗಾತ್ಮಯೋಗೇನ ಸಾಧಯೇ ।
ಲೋಕೇಶಮಾನಿನಾಂ ಮೌಢ್ಯಾದ್ಧರಿಷ್ಯೇ ಶ್ರೀಮದಂ ತಮಃ ॥ ೧೬ ॥

ನ ಹಿ ಸದ್ಭಾವಯುಕ್ತಾನಾಂ ಸುರಾಣಾಮೀಶವಿಸ್ಮಯಃ ।
ಮತ್ತೋಽಸತಾಂ ಮಾನಭಂಗಃ ಪ್ರಶಮಾಯೋಪಕಲ್ಪತೇ ॥ ೧೭ ॥

ಸಾಂವರ್ತಕ ಮೇಘಗಳೇ! ನಾನೂ ಕೂಡ ನಿಮ್ಮ ಹಿಂದೆಯೆ ಐರಾವತನ್ನೇರಿ ನಂದನ ಹಳ್ಳಿಯನ್ನು ವಿನಾಶಗೊಳಿಸಲಿಕ್ಕಾಗಿ ಮಹಾಪರಾಕ್ರಮಿ ಮರುದ್ಗಣಗಳೊಂದಿಗೆ ಬರುತ್ತೇನೆ. ॥ ೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಹೀಗೆ ಇಂದ್ರನು ಪ್ರಳಯಕಾಲದ ಮೇಘಗಳಿಗೆ ಆಜ್ಞೆಯನ್ನಿತ್ತು ಅವುಗಳ ಬಂಧನವನ್ನು ಬಿಚ್ಚಿ ಕಳಿಸಿದನು. ಅವುಗಳು ಅತ್ಯಂತ ವೇಗದಿಂದ ನಂದಗೋಕುಲಕ್ಕೆ ಧಾವಿಸಿ ಒನಕೆಯಷ್ಟು ದಪ್ಪವಾಗಿ ಮಳೆಗರೆದು ವ್ರಜವಾಸಿಗಳನ್ನು ಪೀಡಿಸತೊಡಗಿದವು. ॥ ೧೮ ॥ ನಾಲ್ಕೂ ದಿಕ್ಕುಗಳು ಮಿಂಚಿನಿಂದ ಪ್ರಕಾಶಿಸಿದುವು. ಮೇಘಗಳು ಪರಸ್ಪರ ಅಪ್ಪಳಿಸುತ್ತಾ ಗುಡುಗಿದವು. ಪ್ರಚಂಡವಾದ ಬಿರು ಗಾಳಿಯು ಬೀಸತೊಡಗಿ ದೊಡ್ಡ-ದೊಡ್ಡ ಆಲಿಕಲ್ಲಿನ ಮಳೆ ಸುರಿಯತೊಡಗಿತು. ॥ ೯ ॥ ಹೀಗೆ ಮೇಘಗಳು ಕಂಬಗಾತ್ರದ ಜಲಧಾರೆಗಳಿಂದ ಕ್ಷಣ-ಕ್ಷಣಕ್ಕೂ ಮಳೆಯನ್ನು ಸುರಿಸಲು ಅಗಾಧ ವಾದ ನೀರಿನ ಪ್ರವಾಹದಿಂದ ವ್ರಜಭೂಮಿಯ ಹಳ್ಳ-ತಿಟ್ಟುಗಳೆಲ್ಲ ಮುಳುಗಿ ಕಾಣದಂತಾದುವು. ॥ ೧೦ ॥ ಹೀಗೆ ನಿರಂತರವಾಗಿ ಸುರಿಯುತ್ತಿದ್ದ ಜಲಧಾರೆಗೆ ಸಿಕ್ಕಿ ಹಸು-ಕರುಗಳು ನಡುಗತೊಡ ಗಿದವು. ಗೋಪ-ಗೋಪಿಯರು ಮಳೆಯಿಂದ ತೊಯ್ದು ಹೋಗಿ ಶೀತದಿಂದ ಪೀಡಿತರಾಗಿ, ಅನನ್ಯಗತಿಕರಾದ ಅವರು ಗೋವಿಂದ ನನ್ನೇ ಶರಣು ಹೋದರು. ॥ ೧೧ ॥ ಅತಿವೃಷ್ಟಿಯಿಂದ ಪೀಡಿತ ರಾದ ಗೋಪ-ಗೋಪಿಯರು ತಮ್ಮ ತಲೆಗಳನ್ನು ಮತ್ತು ಶಿಶುಗಳನ್ನು ಬಗ್ಗಿ ತಮ್ಮ ಮಡಿಲಲ್ಲಿ ಅಡಗಿಸಿಕೊಂಡರು. ಕಡೆಗೆ ಅವರೆಲ್ಲರೂ ರಕ್ಷಣೆಗಾಗಿ ಶ್ರೀಕೃಷ್ಣನ ಪಾದಮೂಲವನ್ನೇ ಆಶ್ರಯಿಸಿದರು. ಮತ್ತು ಪ್ರಾರ್ಥಿಸುತ್ತಾರೆ- ॥ ೧೨ ॥ ಮಹಾಭಾಗ್ಯಶಾಲಿಯೇ! ಶ್ರೀಕೃಷ್ಣ! ಪ್ರಭುವೇ! ಗೋಕುಲಕ್ಕೆ ನೀನೇ ಒಡೆಯನು. ಗೊಲ್ಲರಿಗೆ ನೀನೆ ಪರಮಾಶ್ರಯನು. ಭಕ್ತವತ್ಸಲನೇ! ಕುಪಿತನಾಗಿರುವ ಇಂದ್ರದೇವ ನಿಂದ ನಮ್ಮನ್ನು ರಕ್ಷಿಸು. ॥ ೧೩ ॥ ಆಲಿಕಲ್ಲುಗಳಿಂದಲೂ ಮತ್ತು ಮಳೆಯಿಂದಲೂ ಹಿಂಸಿಸಲ್ಪಡುತ್ತಿದ್ದ ಗೋವುಗಳನ್ನು, ಗೋಪಾಲಕ ರನ್ನು ಶ್ರೀಕೃಷ್ಣನು ನೋಡಿದನು. ಕುಪಿತನಾದ ಇಂದ್ರನೇ ಈ ಕಾರ್ಯವನ್ನು ಮಾಡಿರುವನೆಂದು ಭಗವಂತನು ತಿಳಿದು ಕೊಂಡನು. ॥ ೧೪ ॥ ಬಳಿಕ ಶ್ರೀಕೃಷ್ಣನು ಮನಸ್ಸಿನಲ್ಲೇ ಹೀಗೆಂದು ಯೋಚಿಸಿದನು - 'ನಾವು ಇಂದ್ರನ ಯಜ್ಞವನ್ನು ನಿಲ್ಲಿಸಿದ್ದರಿಂದ ಮಳೆಗಾಲವಲ್ಲದ ಕಾಲದಲ್ಲಿ ಪ್ರಚಂಡವಾದ ವಾಯುವಿನೊಂದಿಗೆ ಆಲಿಕಲ್ಲುಗಳಿಂದ ಕೂಡಿದ ಘನಘೋರ ಮಳೆಯನ್ನು ಸುರಿಸು ತ್ತಿದ್ದಾನೆ. ॥ ೧೩ ॥ ಇರಲಿ, ನಾನು ನನ್ನ ಯೋಗಮಾಯೆಯಿಂದ ಇವನಿಗೆ ಸರಿಯಾಗಿ ಪಾಠಕಲಿಸುತ್ತೇನೆ. ಇವನು ಮೂರ್ಖತೆ ಯಿಂದ ತನ್ನನ್ನೇ ಲೋಕಪಾಲನೆಂದು ತಿಳಿದಿರುವನು. ಇವನ ಐಶ್ವರ್ಯದ ಮತ್ತು ಧನದ ಸೊಕ್ಕನ್ನೂ, ಅಜ್ಞಾನವನ್ನೂ ತೊಲಗಿ ಸುತ್ತೇನೆ. ॥ ೧೬ ॥ ದೇವತೆಗಳಾದರೋ ಸತ್ತ್ವಪ್ರಧಾನರಾಗಿರು ತ್ತಾರೆ. ಇವರಲ್ಲಿ ತಮ್ಮ ಐಶ್ವರ್ಯ, ಪದವಿಗಳ ಅಹಂಕಾರ ವಿರಬಾರದು. ಆದುದರಿಂದ ಈ ಸತ್ತ್ವಗುಣದಿಂದ ಚ್ಯುತರಾದ ದುಷ್ಟ ದೇವತೆಗಳ ಮಾನಭಂಗ ಮಾಡುತ್ತೇನೆ. ಇದರಿಂದ ಕೊನೆಗೆ ಅವರಿಗೆ ಶಾಂತಿಯೇ ಸಿಗುತ್ತದೆ. ॥ ೧೭ ॥

ತಸ್ಮಾನ್ಮಚ್ಛರಣಂ ಗೋಷ್ಠಂ ಮನ್ನಾಥಂ ಮತ್ಪರಿಗ್ರಹಮ್ ।
ಗೋಪಾಯೇ ಸ್ವಾತ್ಮಯೋಗೇನ ಸೋಽಯಂ ಮೇ ವ್ರತ ಆಹಿತಃ
॥ ೧೮ ॥

ಇತ್ಯುಕ್ತ್ವೈಕೇನ ಹಸ್ತೇನ ಕೃತ್ವಾ ಗೋವರ್ಧನಾಚಲಮ್ ।
ದಧಾರ ಲೀಲಯಾ ಕೃಷ್ಣಶ್ಛತ್ರಾಕಮಿವ ಬಾಲಕಃ
॥ ೧೯ ॥

ಅಥಾಹ ಭಗವಾನ್ ಗೋಪಾನ್ ಹೇಽಂಬ ತಾತ ವ್ರಜೌಕಸಃ ।
ಯಥೋಪಜೋಷಂ ವಿಶತ ಗಿರಿಗರ್ತಂ ಸಗೋಧನಾಃ
॥ ೨೦ ॥

ನ ತ್ರಾಸ ಇಹ ವಃ ಕಾರ್ಯೋ ಮದ್ಧಸ್ತಾದ್ರಿನಿಪಾತನೇ ।
ವಾತವರ್ಷಭಯೇನಾಲಂ ತತ್ತ್ರಾಣಂ ವಿಹಿತಂ ಹಿ ವಃ
॥ ೨೧ ॥

ತಥಾ ನಿರ್ವಿವಿಶುರ್ಗರ್ತಂ ಕೃಷ್ಣಾಶ್ವಾಸಿತಮಾನಸಾಃ ।
ಯಥಾವಕಾಶಂ ಸಧನಾಃ ಸವ್ರಜಾಃ ಸೋಪಜೀವಿನಃ
॥ ೨೨ ॥

ಕ್ಷುತ್ತೃಡ್ವ್ಯಥಾಂ ಸುಖಾಪೇಕ್ಷಾಂ ಹಿತ್ವಾ ತೈರ್ವ್ರಜವಾಸಿಭಿಃ ।
ವೀಕ್ಷ್ಯಮಾಣೋ ದಧಾವದ್ರಿಂ ಸಪ್ತಾಹಂ ನಾಚಲತ್ಪದಾತ್
॥ ೨೩ ॥

ಕೃಷ್ಣಯೋಗಾನುಭಾವಂ ತಂ ನಿಶಾಮ್ಯೇಂದ್ರೋಽತಿವಿಸ್ಮಿತಃ ।
ನಿಃಸ್ತಂಭೋ ಭ್ರಷ್ಟಸಂಕಲ್ಪಃ ಸ್ವಾನ್ಮೇಘಾನ್ ಸಂನ್ಯವಾರಯತ್
॥ ೨೪ ॥

ಖಂ ವ್ಯಭ್ರಮುದಿತಾದಿತ್ಯಂ ವಾತವರ್ಷಂ ಚ ದಾರುಣಮ್ ।
ನಿಶಾಮ್ಯೋಪರತಂ ಗೋಪಾನ್ ಗೋವರ್ಧನಧರೋಽಬ್ರವೀತ್
॥ ೨೫ ॥

ನಿರ್ಯಾತ ತ್ಯಜತ ತ್ರಾಸಂ ಗೋಪಾಃ ಸಸ್ತ್ರೀಧನಾರ್ಭಕಾಃ ।
ಉಪಾರತಂ ವಾತವರ್ಷಂ ವ್ಯುದಪ್ರಾಯಾಶ್ಚ ನಿಮ್ನಗಾಃ
॥ ೨೬ ॥

ತತಸ್ತೇ ನಿರ್ಯಯುರ್ಗೋಪಾಃ ಸ್ವಂ ಸ್ವಮಾದಾಯ ಗೋಧನಮ್ ।
ಶಕಟೋಢೋಪಕರಣಂ ಸ್ತ್ರೀಬಾಲಸ್ಥವಿರಾಃ ಶನೈಃ
॥ ೨೭ ॥

ಈ ಇಡೀ ವ್ರಜವೇ ನನಗೆ ಆಶ್ರಿತವಾಗಿದೆ. ನನ್ನನ್ನೇ ಏಕೈಕನಾಥನನ್ನಾಗಿ ಭಾವಿಸಿಕೊಂಡಿದ್ದಾರೆ. ನನ್ನಿಂದ ಸ್ವೀಕೃತರಾಗಿದ್ದಾರೆ. ಆದ್ದರಿಂದ ನಾನು ನನ್ನ ಯೋಗಮಾಯೆಯಿಂದ ಇವರನ್ನು ರಕ್ಷಿಸುವೆನು. ಶರಣಾಗತರನ್ನು ರಕ್ಷಿಸುವುದೇ ನನ್ನ ವ್ರತವಾಗಿದೆ. ಈಗ ಅದನ್ನು ಪಾಲಿಸುವ ಅವಕಾಶ ಸನ್ನಿಹಿತವಾಗಿದೆ. ॥ ೧೮ ॥

ಪರೀಕ್ಷಿತನೇ! ಶ್ರೀಕೃಷ್ಣನು ಹೀಗೆ ಭಾವಿಸಿ - ಹುಡುಗರು ನಾಯಿಕೊಡೆಯನ್ನೆತ್ತಿ ಹಿಡಿದುಕೊಳ್ಳುವಂತೆ ಲೀಲಾಜಾಲವಾಗಿ ಗೋವರ್ಧನ ಪರ್ವತವನ್ನು ಒಂದೇ ಕೈಯಿಂದ ಎತ್ತಿ ಹಿಡಿದುಕೊಂಡನು. ॥ ೧೯ ॥ ಅನಂತರ ಭಗವಂತನು ಗೋಪರಲ್ಲಿ ಹೇಳಿದನು - ಅಪ್ಪ! ಅಮ್ಮ! ವ್ರಜವಾಸಿಗಳೇ! ನೀವೆಲ್ಲರೂ ನಿಮ್ಮ ಗೋವುಗಳೊಂದಿಗೆ ಹಾಗೂ ಸಮಸ್ತ ಸಾಮಗ್ರಿಗಳಿಂದ ಕೂಡಿಕೊಂಡು ಈ ಪರ್ವತದ ತಳಭಾಗದಲ್ಲಿ ಬಂದು ನಿಶ್ಚಿಂತರಾಗಿ ಕುಳಿತುಕೊಳ್ಳಿರಿ. ॥ ೨೦ ॥ ಈ ಪರ್ವತವು ನನ್ನ ಕೈಯಿಂದ ಜಾರಿ ಬೀಳಬಹುದೆಂದು ನೀವು ಶಂಕಿಸಬೇಡಿರಿ. ನೀವೆಲ್ಲರೂ ಸ್ವಲ್ಪವೂ ಹೆದರಿಕೊಳ್ಳಬೇಡಿ. ಈ ಬಿರುಗಾಳಿ, ಮಳೆಯ ಭಯದಿಂದ ನಿಮ್ಮನ್ನು ರಕ್ಷಿಸಲಿಕ್ಕಾಗಿಯೇ ನಾನು ಈ ಯುಕ್ತಿಯನ್ನು ಮಾಡಿರುವೆನು. ॥ ೨೧ ॥ ಭಗವಾನ್ ಶ್ರೀಕೃಷ್ಣನು ಹೀಗೆ ಎಲ್ಲರಿಗೆ ಆಶ್ವಾಸನೆಯನ್ನು ಕೊಟ್ಟು ಧೈರ್ಯತುಂಬಿದಾಗ ಗೊಲ್ಲರೆಲ್ಲರೂ ತಮ್ಮ ಗೋಸಂಪತ್ತನ್ನು, ಕರುಗಳನ್ನು, ಆಶ್ರಿತರನ್ನು, ಪುರೋಹಿತರನ್ನು, ಭೃತ್ಯರನ್ನು, ಮಕ್ಕಳು-ಮರಿಗಳೊಂದಿಗೆ ಜೊತೆಯಲ್ಲಿ ಕರೆದುಕೊಂಡು ಗೋವರ್ಧನ ಪರ್ವತದ ಹಳ್ಳದಲ್ಲಿ ಸೇರಿಕೊಂಡರು. ॥ ೨೨ ॥ ಭಗವಾನ್ ಶ್ರೀಕೃಷ್ಣನನ್ನು ನೋಡುತ್ತಿರುವಂತೆಯೇ ವ್ರಜವಾಸಿಗಳು ಏಳು ದಿವಸಗಳ ಕಾಲ ಹಸಿವು ಬಾಯಾರಿಕೆಗಳನ್ನು ಸುಖಾಪೇಕ್ಷೆಯನ್ನು ಮರೆತುಬಿಟ್ಟರು. ಶ್ರೀಕೃಷ್ಣನು ಒಂದು ಹೆಜ್ಜೆಯಷ್ಟಾದರೂ ಕದಲದೆ ಗೋವರ್ಧನ ಗಿರಿಯನ್ನೆತ್ತಿಕೊಂಡು ಸ್ಥಿರವಾಗಿ ನಿಂತಿದ್ದನು. ॥ ೨೩॥ ಶ್ರೀಕೃಷ್ಣನ ಇಂತಹ ಪರಮಾದ್ಭುತವಾದ ಯೋಗಮಾಯೆಯನ್ನು ಕಂಡು ಇಂದ್ರನಿಗೆ ಅತ್ಯಾಶ್ಚರ್ಯವಾಯಿತು. ಅವನ ಗರ್ವವೂ ಕುಗ್ಗಿತು. ಉದ್ದೇಶವು ಈಡೇರಲಿಲ್ಲ. ಬಳಿಕ ಅವನು ತಾನಾಗಿಯೇ ಮೇಘಗಳನ್ನು ಹಿಂದಕ್ಕೆ ಕರೆಸಿಕೊಂಡು ಮಳೆಯನ್ನು ನಿಲ್ಲಿಸಿದನು. ॥ ೨೪ ॥ ಗೋವರ್ಧನ ಧಾರಿಯಾದ ಶ್ರೀಕೃಷ್ಣನು ನೋಡಿದನು - ಭಯಂಕರವಾದ ಬಿರುಗಾಳಿ ಮತ್ತು ಮಳೆಯು ನಿಂತು ಹೋಗಿ ಆಕಾಶವು ಸ್ವಚ್ಛವಾಗಿ ಸೂರ್ಯನು ಪ್ರಕಾಶಿಸುತ್ತಿರುವನು. ಆಗ ಅವನು ಗೋಪಾಲಕರಲ್ಲಿ ಹೇಳಿದನು. ॥ ೨೫ ॥ ಪ್ರಿಯರಾದ ಗೋಪಾಲಕರೇ! ಈಗ ನೀವು ಯಾವುದೇ ಭಯವಿಲ್ಲದೆ ನಿಮ್ಮ-ನಿಮ್ಮ ಗೋವುಗಳೊಡನೆ, ಹೆಂಡಿರು ಮಕ್ಕಳೊಡನೆ, ಹೊರಗೆ ಹೊರಟು ಬನ್ನಿರಿ. ಇದೋ ನೋಡಿರಿ - ಬಿರುಗಾಳಿ, ಮಳೆ ನಿಂತು ಹೋಗಿ ನದಿಗಳ ನೀರೂ ಕೂಡ ಇಳಿಮುಖವಾಗಿದೆ. ॥ ೨೬ ॥ ಭಗವಂತನ ಈ ಆಜ್ಞೆಯನ್ನು ಪಡೆದು ಗೋಪರು ತಮ್ಮ-ತಮ್ಮ ಗೋಧನ, ಪುತ್ರಿ-ಪುತ್ರರೊಂದಿಗೆ, ಮುದುಕರೊಂದಿಗೆ ಜೊತೆಗೆ ಕರಕೊಂಡು, ತಮ್ಮ ಸಾಮಗ್ರಿಯನ್ನು ಗಾಡಿಗಳಲ್ಲಿ ತುಂಬಿಕೊಂಡು ಎಲ್ಲ ಜನರೂ ಹೊರಗೆ ಬಂದರು.॥ ೨೭ ॥

ಭಗವಾನಪಿ ತಂ ಶೈಲಂ ಸ್ವಸ್ಥಾನೇ ಪೂರ್ವವತ್ಪ್ರಭುಃ ।
ಪಶ್ಯತಾಂ ಸರ್ವಭೂತಾನಾಂ ಸ್ಥಾಪಯಾಮಾಸ ಲೀಲಯಾ ॥ ೨೮ ॥

ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣನೂ ಕೂಡ ಎಲ್ಲರೂ ನೋಡುತ್ತಿರುವಂತೆ ಲೀಲಾಜಾಲವಾಗಿಯೇ ಗೋವರ್ಧನಗಿರಿಯನ್ನು ಹಿಂದಿನಂತೆಯೇ ಅದರ ಸ್ಥಾನದಲ್ಲಿ ಇರಿಸಿದನು. ॥ ೨೮ ॥

ತಂ ಪ್ರೇಮವೇಗಾನ್ನಿಭೃತಾ ವ್ರಜೌಕಸೋ
ಯಥಾ ಸಮೀಯುಃ ಪರಿರಂಭಣಾದಿಭಿಃ ।
ಗೋಪ್ಯಶ್ಚ ಸಸ್ನೇಹಮಪೂಜಯನ್ಮುದಾ
ದಧ್ಯಕ್ಷತಾದ್ಭಿರ್ಯುಯುಜುಃ ಸದಾಶಿಷಃ ॥ ೨೯ ॥

ಪರ್ವತವನ್ನು ಕೆಳಗೆ ಇರಿಸಿದಾಕ್ಷಣ-ವ್ರಜವಾಸಿಗಳ ಹೃದಯಗಳು ಪ್ರೇಮರಸದಿಂದ ತುಂಬಿ ಭಗವಾನ್ ಶ್ರೀಕೃಷ್ಣನ ಬಳಿಗೆ ಬಂದು ಕೆಲವರು ಅವನನ್ನು ಅಪ್ಪಿಕೊಂಡರೆ, ಕೆಲವರು ಮುತ್ತಿಟ್ಟರು. ಎಲ್ಲರೂ ಅವನನ್ನು ಸತ್ಕರಿಸಿದರು. ವೃದ್ಧೆಯರಾದ ಗೋಪಿಯರು ಮಹದಾನಂದದಿಂದ, ಸ್ನೇಹದಿಂದ ಶ್ರೀಕೃಷ್ಣನಿಗೆ ಮೊಸರು, ಅಕ್ಷತೆ, ನೀರು ಇವುಗಳಿಂದ ಮಂಗಲ ತಿಲಕವನ್ನಿಟ್ಟು ತುಂಬು ಹೃದಯದಿಂದ ಆಶೀರ್ವದಿಸಿದರು. ॥ ೨೯ ॥

ಯಶೋದಾ ರೋಹಿಣೀ ನಂದೋ ರಾಮಶ್ಚ ಬಲಿನಾಂ ವರಃ ।
ಕೃಷ್ಣಮಾಲಿಂಗ್ಯ ಯುಯುಜುರಾಶಿಷಃ ಸ್ನೇಹಕಾತರಾಃ ॥ ೩೦ ॥

ಯಶೋದಾದೇವಿ, ರೋಹಿಣಿ, ನಂದಗೋಪ ಮತ್ತು ಬಲಿಷ್ಠರಲ್ಲಿ ಶ್ರೇಷ್ಠನಾದ ಬಲರಾಮ ಮುಂತಾದವರು ಸ್ನೇಹಪರವಶರಾಗಿ ಶ್ರೀಕೃಷ್ಣನನ್ನು ಗಾಢವಾಗಿ ಆಲಿಂಗಿಸಿಕೊಂಡು ಆಶೀರ್ವದಿಸಿದರು. ॥ ೩೦ ॥

ದಿವಿ ದೇವಗಣಾಃ ಸಾಧ್ಯಾಃ ಸಿದ್ಧಗಂಧರ್ವಚಾರಣಾಃ ।
ತುಷ್ಟುವುರ್ಮುಮುಚುಸ್ತುಷ್ಟಾಃ ಪುಷ್ಪವರ್ಷಾಣಿ ಪಾರ್ಥಿವ ॥ ೩೧ ॥

ಪರೀಕ್ಷಿತನೇ! ಆ ಸಮಯದಲ್ಲಿ ಆಕಾಶದಲ್ಲಿ ಸ್ಥಿತರಾದ ದೇವತೆಗಳು ಸಾಧ್ಯರು, ಸಿದ್ಧರು, ಗಂಧರ್ವರು, ಚಾರಣರು ಮೊದಲಾದವರು ಪರಮ ಸಂತುಷ್ಟರಾಗಿ ಭಗವಂತನನ್ನು ಸ್ತುತಿಸುತ್ತಾ ಅವನ ಮೇಲೆ ಹೂವಿನ ಮಳೆಗರೆಯತೊಡಗಿದರು. ॥ ೩೧ ॥

ಶಂಖದುಂದುಭಯೋ ನೇದುರ್ದಿವಿ ದೇವಪ್ರಣೋದಿತಾಃ ।
ಜಗುರ್ಗಂಧರ್ವಪತಯಸ್ತುಂಬುರುಪ್ರಮುಖಾ ನೃಪ ॥ ೩೨ ॥

ರಾಜನೇ! ಸ್ವರ್ಗದಲ್ಲಿ ದೇವತೆಗಳು ಶಂಖ, ದುಂದುಭಿಗಳನ್ನು ನುಡಿಸತೊಡಗಿದರು. ತುಂಬುರು, ಗಂಧರ್ವರು ಭಗವಂತನ ಮಧುರ ಲೀಲೆಗಳನ್ನು ಹಾಡತೊಡಗಿದರು. ॥ ೩೨ ॥

ತತೋಽನುರಕ್ತೈಃ ಪಶುಪೈಃ ಪರಿಶ್ರಿತೋ
ರಾಜನ್ಸ್ವಗೋಷ್ಠಂ ಸಬಲೋಽವ್ರಜದ್ಧರಿಃ ।
ತಥಾವಿಧಾನ್ಯಸ್ಯ ಕೃತಾನಿ ಗೋಪಿಕಾ
ಗಾಯಂತ್ಯ ಈಯುರ್ಮುದಿತಾ ಹೃದಿಸ್ಪೃಶಃ ॥ ೩೩ ॥

ಇದಾದ ಬಳಿಕ ಭಗವಾನ್ ಶ್ರೀಕೃಷ್ಣನು ಗೊಲ್ಲಬಾಲಕರಿಂದರೊಡಗೂಡಿ ಬಲರಾಮನೊಂದಿಗೆ ವ್ರಜಕ್ಕೆ ಹೊರಟನು. ಅವನೊಂದಿಗೆ ಆನಂದಭರಿತರಾಗಿದ್ದ ಗೋಪಿಯರೂ ಶ್ರೀಕೃಷ್ಣನ ಚೇತೋಹಾರಿಗಳಾದ ಗೋವರ್ಧನೋದ್ಧರಣವೇ ಮುಂತಾದ ಲೀಲಾ ಪ್ರಸಂಗಗಳನ್ನು ಹೃದಯಂಗಮವಾಗಿ ಹಾಡುತ್ತಾ ವ್ರಜಕ್ಕೆ ತೆರಳಿದರು. ॥ ೩೩ ॥

*ಇಪ್ಪತ್ತೈದನೆಯ ಅಧ್ಯಾಯವು ಮುಗಿಯಿತು. ॥ ೨೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮಸ್ಕಂಧೇ ಪೂರ್ವಾರ್ಧೇ ಪಂಚವಿಂಶೋಽಧ್ಯಾಯಃ ॥ ೨೫ ॥

---

# ಇಪ್ಪತ್ತಾರನೆಯ ಅಧ್ಯಾಯ

## ಶ್ರೀಕೃಷ್ಣನ ಪ್ರಭಾವದ ವಿಷಯವಾಗಿ ನಂದಗೋಪನೇ ಮೊದಲಾದವರ ಜಿಜ್ಞಾಸೆ

*ಶ್ರೀಶುಕ ಉವಾಚ*

ಏವಂವಿಧಾನಿ ಕರ್ಮಾಣಿ ಗೋಪಾಃ ಕೃಷ್ಣಸ್ಯ ವೀಕ್ಷ್ಯ ತೇ ।
ಅತದ್ವೀರ್ಯವಿದಃ ಪ್ರೋಚುಃ ಸಮಭ್ಯೇತ್ಯ ಸುವಿಸ್ಮಿತಾಃ ॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ವ್ರಜದ ಗೋಪಾಲಕರು ಭಗವಾನ್ ಶ್ರೀಕೃಷ್ಣನ ಗೋವರ್ಧನೋದ್ಧರಣದಂತಹ ಅಲೌಕಿಕ ಕರ್ಮಗಳನ್ನು ನೋಡಿ ಅತ್ಯಂತ ಆಶ್ಚರ್ಯಚಕಿತರಾದರು. ಅವರಿಗೆ ಭಗವಂತನ ಅನಂತ ಶಕ್ತಿಯ ಪರಿಚಯವೇ ಇರಲಿಲ್ಲ. ಅವರೆಲ್ಲರೂ ಒಂದೆಡೆ ಸೇರಿ ಪರಸ್ಪರವಾಗಿ ಹೀಗೆ ಮಾತನಾಡಿಕೊಂಡರು. ॥ ೧ ॥

ಬಾಲಕಸ್ಯ ಯದೇತಾನಿ ಕರ್ಮಾಣ್ಯತ್ಯದ್ಭುತಾನಿ ವೈ ।
ಕಥಮರ್ಹತ್ಯಸೌ ಜನ್ಮ ಗ್ರಾಮ್ಯೇಷ್ವಾತ್ಮಜುಗುಪ್ಸಿತಮ್ ॥ ೨ ॥

ಯಃ ಸಪ್ತಹಾಯನೋ ಬಾಲಃ ಕರೇಣೈಕೇನ ಲೀಲಯಾ ।
ಕಥಂ ಬಿಭ್ರದ್ಗಿರಿವರಂ ಪುಷ್ಕರಂ ಗಜರಾಡಿವ ॥ ೩ ॥

ತೋಕೇನಾಮೀಲಿತಾಕ್ಷೇಣ ಪೂತನಾಯಾ ಮಹೌಜಸಃ ।
ಪೀತಃ ಸ್ತನಃ ಸಹ ಪ್ರಾಣೈಃ ಕಾಲೇನೇವ ವಯಸ್ತನೋಃ ॥ ೪ ॥

ಹಿನ್ವತೋಽಧಃ ಶಯಾನಸ್ಯ ಮಾಸ್ಯಸ್ಯ ಚರಣಾವುದಕ್ ।
ಅನೋಽಪತದ್ವಿಪರ್ಯಸ್ತಂ ರುದತಃ ಪ್ರಪದಾಹತಮ್ ॥ ೫ ॥

ಏಕಹಾಯನ ಆಸೀನೋ ಹ್ರಿಯಮಾಣೋ ವಿಹಾಯಸಾ ।
ದೈತ್ಯೇನ ಯಸ್ತೃಣಾವರ್ತಮಹನ್ಕಂಠಗ್ರಹಾತುರಮ್ ॥ ೬ ॥

ಕ್ವಚಿದ್ ಹೈಯಂಗವಸ್ತೈನ್ಯೇ ಮಾತ್ರಾ ಬದ್ಧಉಲೂಖಲೇ ।
ಗಚ್ಛನ್ನರ್ಜುನಯೋರ್ಮಧ್ಯೇ ಬಾಹುಭ್ಯಾಂ ತಾವಪಾತಯತ್ ॥ ೭ ॥

ವನೇ ಸಂಚಾರಯನ್ ವತ್ಸಾನ್
ಸರಾಮೋ ಬಾಲಕೈರ್ವೃತಃ ।
ಹಂತುಕಾಮಂ ಬಕಂ ದೋರ್ಭ್ಯಾಂ
ಮುಖತೋಽರಿಮಪಾಟಯತ್ ॥ ೮ ॥

ವತ್ಸೇಷು ವತ್ಸರೂಪೇಣ ಪ್ರವಿಶಂತಂ ಜಿಘಾಂಸಯಾ ।
ಹತ್ವಾ ನ್ಯಪಾತಯತ್ತೇನ ಕಪಿತ್ಥಾನಿ ಚ ಲೀಲಯಾ ॥ ೯ ॥

ಹತ್ವಾ ರಾಸಭದೈತೇಯಂ ತದ್ಬಂಧೂಂಶ್ಚ ಬಲಾನ್ವಿತಃ ।
ಚಕ್ರೇ ತಾಲವನಂ ಕ್ಷೇಮಂ ಪರಿಪಕ್ವಫಲಾನ್ವಿತಮ್ ॥ ೧೦ ॥

ಈ ಬಾಲಕನ ಕರ್ಮಗಳೆಲ್ಲವೂ ಅತ್ಯದ್ಭುತವಾದವುಗಳು. ಇಂತಹ ಪರಮಾದ್ಭುತ ಬಾಲಕನು ನಮ್ಮಂತಹ ಹಳ್ಳಿಗರ ಮಧ್ಯದಲ್ಲಿ ಜನ್ಮತಾಳಿದ್ದು ಇವನಿಗಾದರೋ ನಿಂದನೀಯವಾದುದು. ಇದು ಹೇಗೆ ಉಚಿತವಾಗಬಲ್ಲದು ? ॥ ೨ ॥ ಗಜರಾಜನು ಸರೋವರದಲ್ಲಿರುವ ಕಮಲವನ್ನು ಕಿತ್ತು ಮೇಲೆತ್ತಿ ಹಿಡಿಯುವಂತೆ ಏಳು ವರ್ಷದ ಈ ಬಾಲಕನು ಗೋವರ್ಧನಗಿರಿಯನ್ನು ಏಳುದಿನಗಳವರೆಗೆ ನಿರಾಯಾಸವಾಗಿ ಒಂದೇ ಕೈಯಿಂದ ಮೇಲೆತ್ತಿ ಹಿಡಿದು ನಿಂತಿದ್ದನು. ಇದು ಇವನಿಂದ ಹೇಗೆ ಸಾಧ್ಯವಾಯಿತು ? ॥ ೩ ॥ ಇವನು ಹಸುಳೆಯಾಗಿದ್ದಾಗಲೇ ಭಯಂಕರಳಾದ ಪೂತನೆಯು ವಿಷದ ಹಾಲನ್ನುಣಿಸಲು ಬಂದಿದ್ದಳು. ಕಣ್ಣು ಮುಚ್ಚಿಕೊಂಡು ಸ್ತನ್ಯಪಾನ ಮಾಡಿದ ಇವನು ಸ್ತನ್ಯದೊಡನೆ - ಕಾಲನು ಶರೀರದಿಂದ ಆಯುಸ್ಸನ್ನು ಅಪಹರಿಸುವಂತೆ ಪೂತನೆಯ ಪ್ರಾಣಗಳನ್ನೇ ಅಪಹರಿಸಿ ಬಿಟ್ಟನು. ಎಂತಹ ಅದ್ಭುತವಿದು ? ॥ ೪ ॥ ಇವನಿನ್ನೂ ಮೂರುತಿಂಗಳ ಮಗುವಿದ್ದಾಗ ಗಾಡಿಯ ಕೆಳಗೆ ಅಳುತ್ತಾ ಮಲಗಿದ್ದನು. ಅಳುತ್ತಳುತ್ತಾ ಕೈ-ಕಾಲುಗಳನ್ನು ಒದರುತ್ತಿದ್ದಾಗ ಒಮ್ಮೆ ಅವನ ಪುಟ್ಟ ಕಾಲುಗಾಡಿಗೆ ತಗುಲಿ ಸಾಮಗ್ರಿಗಳಿಂದ ಕೂಡಿದ ಆ ಗಾಡಿಯು ತಲೆಕೆಳಕಾಗಿ ಬಿಟ್ಟಿತು. ಇದು ಹೇಗಾಯಿತು ಎಂಬುದು ನಮ್ಮಿಂದ ಯೋಚಿಸಲೂ ಸಾಧ್ಯವಾಗುತ್ತಿಲ್ಲ. ॥ ೫ ॥ ಈ ನಮ್ಮ ಮುದ್ದು ಕೃಷ್ಣನಿಗೆ ಆಗ ಒಂದು ವರ್ಷ ತುಂಬಿತ್ತು. ತೃಣಾವರ್ತನೆಂಬ ದೈತ್ಯನು ಬಿರುಗಾಳಿಯ ರೂಪದಿಂದ ಬಂದು ಇವನನ್ನು ಆಕಾಶಕ್ಕೆ ಹಾರಿಸಿಕೊಂಡು ಹೋದನು. ಆದರೆ ಈ ಅದ್ಭುತಬಾಲಕನು ರಾಕ್ಷಸನ ಕುತ್ತಿಗೆಯನ್ನು ಬಲವಾಗಿ ಹಿಡಿದು ಸಂಹರಿಸಿಬಿಟ್ಟನು. ॥ ೬ ॥ ಈ ಕಳ್ಳ ಕೃಷ್ಣನು ಬೆಣ್ಣೆಯನ್ನು ಕದಿಯುತ್ತಿದ್ದಾಗ ಇವನ ತಾಯಿ ಯಶೋದೆಯು ಇವನನ್ನು ಒರಳಿಗೆ ಕಟ್ಟಿಹಾಕಿದಳು. ಇವನು ಅಂಬೆಗಾಲು ಹಾಕುತ್ತಾ ಒರಳಿನೊಡನೆಯೇ ಮತ್ತಿಮರಗಳ ಮಧ್ಯದಲ್ಲಿ ನುಸುಳಿ ಅದ್ಭುತವಾಗಿದ್ದ ಆ ವೃಕ್ಷಗಳನ್ನೇ ಬುಡಮೇಲಾಗಿಸಿದನು. ಇದೇನು ನಂಬಲು ಸಾಧ್ಯವಾದ ಪ್ರಸಂಗವೇ ? ॥ ೭ ॥ ಮತ್ತೊಂದು ಪ್ರಸಂಗದಲ್ಲಿ ಶ್ರೀಕೃಷ್ಣನು ಬಲರಾಮನೊಂದಿಗೂ, ಗೋಪಾಲ ಬಾಲಕರೊಂದಿಗೂ ಕರುಗಳನ್ನು ಮೇಯಿಸುತ್ತಿದ್ದಾಗ ಇವನನ್ನು ಕೊಲ್ಲುವ ಸಲುವಾಗಿಯೇ ದೈತ್ಯನೊಬ್ಬನು ಬಕಪಕ್ಷಿಯ ರೂಪದಲ್ಲಿ ಬಂದಿದ್ದನು. ಅದು ರಾಕ್ಷಸನೆಂದರಿತ ಇವನು ಅದರ ಕೊಕ್ಕನ್ನು ಹಿಡಿದು ಹುಲ್ಲಿನ ಕಡ್ಡಿಯನ್ನು ಸೀಳುವಂತೆ ಅವನನ್ನು ಸೀಳಿ ಹಾಕಿದನು. ॥ ೮ ॥ ಇನ್ನೊಮ್ಮೆ ಶ್ರೀಕೃಷ್ಣನನ್ನು ಸಂಹರಿಸುವ ಆಶೆಯದಿಂದ ಮತ್ತೊಬ್ಬ ದೈತ್ಯನು ಕರುವಿನ ವೇಷವನ್ನು ಧರಿಸಿ ಕರುಗಳ ನಡುವೆಯೇ ಸೇರಿಕೊಂಡನು. ಇದನ್ನರಿತ ಶ್ರೀಕೃಷ್ಣನು ಆ ವತ್ಸಾಸುರನನ್ನು ಆಡುತ್ತಾಡುತ್ತಲೇ ಕೊಂದು ಅವನನ್ನು ಬೇಲದ ಮರದ ಮೇಲಕ್ಕೆಸೆದು ನೂರಾರು ಹಣ್ಣುಗಳನ್ನು ಉದುರಿಸಿದನು. ॥ ೯ ॥ ಇವನು ಬಲರಾಮನೊಂದಿಗೆ ಸೇರಿ ಕತ್ತೆಯ ರೂಪದಲ್ಲಿ ಇದ್ದ ಧೇನುಕಾಸುರನನ್ನು ಹಾಗೂ ಅವರ ಸಹೋದರರೆಲ್ಲರನ್ನು ಕೊಂದು ಹಾಕಿದನು. ಪಕ್ವವಾದ ತಾಳೆಹಣ್ಣುಗಳಿಂದ ಕೂಡಿದ ತಾಲವನವನ್ನು ಎಲ್ಲರ ಉಪಯೋಗಕ್ಕಾಗಿ ಮಂಗಲಮಯವಾಗಿಸಿದನು. ॥ ೧೦ ॥

ಪ್ರಲಂಬಂ ಘಾತಯಿತ್ವೋಗ್ರಂ ಬಲೇನ ಬಲಶಾಲಿನಾ ।
ಅಮೋಚಯದ್ವ್ರಜಪಶೂನ್ಗೋಪಾಂಶ್ಚಾರಣ್ಯವಹ್ನಿತಃ
॥ ೧೧ ॥

ಆಶೀವಿಷತಮಾಹೀಂದ್ರಂ ದಮಿತ್ವಾವಿಮದಂ ಹ್ರದಾತ್ ।
ಪ್ರಸಹ್ಯೋದ್ವಾಸ್ಯ ಯಮುನಾಂ ಚಕ್ರೇಽಸೌ ನಿರ್ವಿಷೋದಕಾಮ್
॥ ೧೨ ॥

ದುಸ್ತ್ಯಜಶ್ಚಾನುರಾಗೋಽಸ್ಮಿನ್ಸರ್ವೇಷಾಂ ನೋ ವ್ರಜೌಕಸಾಮ್ ।
ನಂದ ತೇ ತನಯೇಽಸ್ಮಾಸು ತಸ್ಯಾಪ್ಯೌತ್ಪತ್ತಿಕಃ ಕಥಮ್
॥ ೧೩ ॥

ಕ್ವ ಸಪ್ತಹಾಯನೋ ಬಾಲಃ ಕ್ವ ಮಹಾದ್ರಿವಿಧಾರಣಮ್ ।
ತತೋ ನೋ ಜಾಯತೇ ಶಂಕಾ ವ್ರಜನಾಥ ತವಾತ್ಮಜೇ
॥ ೧೪ ॥

ನಂದ ಉವಾಚ

ಶ್ರೂಯತಾಂ ಮೇ ವಚೋ ಗೋಪಾ
ವ್ಯೇತು ಶಂಕಾ ಚ ವೋಽರ್ಭಕೇ ।
ಏನಂ ಕುಮಾರಮುದ್ದಿಶ್ಯ
ಗರ್ಗೋ ಮೇ ಯದುವಾಚ ಹ ॥ ೧೫ ॥

ವರ್ಣಾಸ್ತ್ರಯಃ ಕಿಲಾಸ್ಯಾಸನ್ ಗೃಹ್ಣತೋಽನುಯುಗಂ ತನೂಃ ।
ಶುಕ್ಲೋ ರಕ್ತಸ್ತಥಾ ಪೀತ ಇದಾನೀಂ ಕೃಷ್ಣತಾಂ ಗತಃ
॥ ೧೬ ॥

ಪ್ರಾಗಯಂ ವಸುದೇವಸ್ಯ ಕ್ವಚಿಜ್ಜಾತಸ್ತವಾತ್ಮಜಃ ।
ವಾಸುದೇವ ಇತಿ ಶ್ರೀಮಾನಭಿಜ್ಞಾಃ ಸಂಪ್ರಚಕ್ಷತೇ
॥ ೧೭ ॥

ಬಹೂನಿ ಸಂತಿ ನಾಮಾನಿ ರೂಪಾಣಿ ಚ ಸುತಸ್ಯ ತೇ ।
ಗುಣಕರ್ಮಾನುರೂಪಾಣಿ ತಾನ್ಯಹಂ ವೇದ ನೋ ಜನಾಃ
॥ ೧೮ ॥

ಏಷ ವಃ ಶ್ರೇಯ ಆಧಾಸ್ಯದ್ಗೋಪಗೋಕುಲನಂದನಃ ।
ಅನೇನ ಸರ್ವದುರ್ಗಾಣಿ ಯೂಯಮಂಜಸ್ತರಿಷ್ಯಥ
॥ ೧೯ ॥

ಪುರಾನೇನ ವ್ರಜಪತೇ ಸಾಧವೋ ದಸ್ಯುಪೀಡಿತಾಃ ।
ಅರಾಜಕೇ ರಕ್ಷ್ಯಮಾಣಾ ಜಿಗ್ಯುರ್ದಸ್ಯೂನ್ ಸಮೇಧಿತಾಃ
॥ ೨೦ ॥

ಇನ್ನೊಂದು ಪ್ರಸಂಗದಲ್ಲಿ ಇವನು ಬಲಶಾಲಿಯಾದ ಬಲರಾಮನ ಮೂಲಕ ಕ್ರೂರನಾದ ಪ್ರಲಂಬಾಸುರನನ್ನು ಸಂಹಾರ ಮಾಡಿಸಿದನು. ಮತ್ತೊಮ್ಮೆ ಗೋವುಗಳನ್ನು, ಗೋಪಾಲರನ್ನು ಕಾಡುಗಿಚ್ಚಿನಿಂದ ರಕ್ಷಿಸಿದನು. ॥ ೧೧ ॥ ಯಮುನಾ ನದಿಯಲ್ಲಿದ್ದ ವಿಷದ ಬಲ ಮದದಿಂದ ಉನ್ಮತ್ತನಾಗಿದ್ದ ಕಾಳಿಯನ ಗರ್ವವನ್ನು ಮುರಿದು ಬಲವಂತವಾಗಿ ಅವನನ್ನು ಮಡುವಿನಿಂದ ಹೊರದೂಡಿ ಯಮುನೆಯ ನೀರನ್ನು ವಿಷರಹಿತವನ್ನಾಗಿಸಿ, ಅಮೃತಮಯವಾಗಿಸಿದನು. ॥ ೧೨ ॥ ನಂದರಾಜನೇ! ಈ ವ್ರಜದಲ್ಲಿ ವಾಸಿಸುವ ನಮಗೆ ನಿನ್ನ ಮಗನಲ್ಲಿ ಅನಿವಾರ್ಯವಾದ ಪ್ರೀತಿಯಿರುವುದು ನಿಶ್ಚಯ. ಈ ಬಾಲಕನಿಗೂ ನಮ್ಮ ಮೇಲೆ ಅಷ್ಟೇ ಸ್ವಾಭಾವಿಕವಾದ ಪ್ರೀತಿಯಿದೆ. ಇದರ ಕಾರಣವೇನಿರಬಹುದು? ನೀವು ಹೇಳಬಲ್ಲಿರಾ? ॥ ೧೩ ॥ ಏಳುವರ್ಷಗಳ ಬಾಲಕನೆಂದರೇನು? ಮಹಾಪರ್ವತವನ್ನು ಧರಿಸುವುದೆಂದರೇನು? ಇದು ನಡೆದದ್ದಂತೂ ನಿಜ. ವ್ರಜನಾಥನೇ! ನಿನ್ನ ಮಗನು ಯಾರಾಗಿರಬಹುದೆಂಬ ವಿಷಯದಲ್ಲಿ ನಮಗೆ ಸಂದೇಹವುಂಟಾಗಿದೆ. ॥ ೧೪ ॥

**ನಂದಗೋಪನು ಹೇಳಿದನು** – ಗೋಪಾಲಕರೇ! ನೀವು ನನ್ನ ಮಾತನ್ನು ಸಾವಧಾನವಾಗಿ ಕೇಳಿರಿ. ಇದರಿಂದ ನನ್ನ ಮಗನ ವಿಷಯದಲ್ಲಿದ್ದ ನಿಮ್ಮ ಸಂದೇಹವು ನಿವಾರಣೆಯಾದೀತು. ಮಹರ್ಷಿಗಳಾದ ಗರ್ಗರು ನಾಮಕರಣೋತ್ಸವದ ಸಂದರ್ಭದಲ್ಲಿ ಈ ಬಾಲಕನನ್ನು ನೋಡಿ ಇವನ ಕುರಿತು ಹೀಗೆ ಹೇಳಿದ್ದರು – ॥ ೧೫ ॥ "ನಂದಗೋಪನೇ! ನಿನ್ನ ಈ ಬಾಲಕನು ಪ್ರತಿಯೊಂದು ಯುಗದಲ್ಲಿಯೂ ಶರೀರವನ್ನು ಧರಿಸುವನು. ಬೇರೆ-ಬೇರೆ ಯುಗಗಳಲ್ಲಿ ಇವನಿಗೆ ಶ್ವೇತ, ರಕ್ತ, ಪೀತ ಮುಂತಾದ ಬೇರೆ-ಬೇರೆ ಬಣ್ಣಗಳನ್ನು ಇವನು ಸ್ವೀಕರಿಸಿದ್ದನು. ಈ ಸಲ ಇವನು ಕೃಷ್ಣವರ್ಣದವನಾಗಿರುವನು. ॥ ೧೬ ॥ ನಂದನೇ! ನಿನ್ನ ಪುತ್ರನಾದ ಇವನು ಮೊದಲು ಎಲ್ಲೋ ವಸುದೇವನ ಮನೆಯಲ್ಲಿ ಹುಟ್ಟಿದ್ದನು. ಅದಕ್ಕಾಗಿ ಈ ರಹಸ್ಯವನ್ನು ಅರಿತಿರುವವರು ಇವನ ಹೆಸರು 'ಶ್ರೀಮಾನ್ ವಾಸುದೇವ' ಎಂದು ಹೇಳುತ್ತಾರೆ. ॥ ೧೭ ॥ ನಿನ್ನ ಪುತ್ರನಿಗೆ ಗುಣ ಮತ್ತು ಕರ್ಮಗಳನುಸಾರವಾಗಿ ಬಹಳಷ್ಟು ಹೆಸರುಗಳಿವೆ ಹಾಗೂ ಅನೇಕ ರೂಪಗಳೂ ಇವೆ. ನಾನಾದರೋ ಆ ನಾಮಗಳನ್ನು ಬಲ್ಲೆನು, ಆದರೆ ಪ್ರಪಂಚದ ಸಾಮಾನ್ಯ ಜನರು ತಿಳಿಯಲಾರರು. ॥ ೧೮ ॥ ಸಮಸ್ತ ಗೋಪಾಲಕರಿಗೂ, ಗೋವುಗಳಿಗೂ ಆನಂದವನ್ನುಂಟುಮಾಡುವ ಈ ನಿನ್ನ ಮಗನು ನಿಮಗೆ ಪರಮಕಲ್ಯಾಣಕರನಾಗುತ್ತಾನೆ. ಇವನ ಸಹಾಯದಿಂದ ನೀವು ದೊಡ್ಡ-ದೊಡ್ಡ ವಿಪತ್ತುಗಳಿಂದ ಬಹಳ ಸುಲಭವಾಗಿ ಪಾರಾಗುವಿರಿ. ॥ ೧೯ ॥ ವ್ರಜರಾಜನೇ! ಹಿಂದೊಮ್ಮೆ ಭೂಮಂಡಲದಲ್ಲಿ ಯಾವ ರಾಜನು ಇರಲಿಲ್ಲ, ದರೋಡೆಕೋರರ ಉಪಟಳವು ಎಲ್ಲೆಡೆ ಹೆಚ್ಚಾಗಿತ್ತು. ಸತ್ಪುರುಷರನ್ನು ಬಹಳವಾಗಿ ಪೀಡಿಸುತ್ತಿದ್ದರು. ಆಗ ನಿನ್ನ ಈ ಪುತ್ರನೇ ಸಜ್ಜನರನ್ನು ಕಾಪಾಡಿದನು ಮತ್ತು ಅವನಿಂದ ಬಲವನ್ನು ಪಡೆದು ಜನರು ದರೋಡೆಕೋರರ ಮೇಲೆ ವಿಜಯವನ್ನು ಪಡೆದರು. ॥ ೨೦ ॥

ಯ ಏತಸ್ಮಿನ್ಮಹಾಭಾಗಾಃ ಪ್ರೀತಿಂ ಕುರ್ವಂತಿ ಮಾನವಾಃ ।
ನಾರಯೋಽಭಿಭವಂತ್ಯೇತಾನ್ ವಿಷ್ಣುಪಕ್ಷಾನಿವಾಸುರಾಃ
॥ ೨೧ ॥

ನಂದರಾಜನೇ! ನಿನ್ನ ಈ ಶ್ಯಾಮಲ ಮುದ್ದುಮಗನನ್ನು ಪ್ರೇಮಿಸುವವರು ಮಹಾಭಾಗ್ಯಶಾಲಿಗಳೇ ಸರಿ. ಭಗವಾನ್ ಮಹಾವಿಷ್ಣುವಿನ ಕರಕಮಲಗಳ ಛತ್ರಛಾಯೆಯಲ್ಲಿರುವ ದೇವತೆಗಳನ್ನು ಅಸುರರು ಗೆಲ್ಲಲಾರದೆ ಹೋದರು. ಹಾಗೆಯೇ ಇವನನ್ನು ಪ್ರೇಮಿಸುವವರನ್ನು ಒಳಗಿನ-ಹೊರಗಿನ ಯಾವ ಶತ್ರುಗಳು ಗೆಲ್ಲಲಾರವು. ॥ ೨೧ ॥ ನಂದಗೋಪನೇ! ಯಾವುದೇ ದೃಷ್ಟಿಯಿಂದ ನೋಡಿದರೂ ನಿಮ್ಮ ಮಗನು ಗುಣಗಳಿಂದ, ಐಶ್ವರ್ಯದಿಂದ, ಸೌಂದರ್ಯದಿಂದ, ಕೀರ್ತಿ ಮತ್ತು ಪ್ರಭಾವದಿಂದ ಸಾಕ್ಷಾತ್ ನಾರಾಯಣನಿಗೇ ಸಮನಾಗಿದ್ದಾನೆ. ಆದ್ದರಿಂದ ಈ ಬಾಲಕನ ಅಲೌಕಿಕ ಕಾರ್ಯಗಳನ್ನು ನೋಡಿ ಆಶ್ಚರ್ಯಪಡಬಾರದು." ॥ ೨೨ ॥

ತಸ್ಮಾನ್ನಂದ ಕುಮಾರೋಽಯಂ ನಾರಾಯಣಸಮೋ ಗುಣೈಃ ।
ಶ್ರಿಯಾ ಕೀರ್ತ್ಯಾನುಭಾವೇನ ತತ್ಕರ್ಮಸು ನ ವಿಸ್ಮಯಃ
॥ ೨೨ ॥

ಗೋಪಾಲಕರೇ! ಸ್ವತಃ ಗರ್ಗಾಚಾರ್ಯರೇ ನನಗೆ ಹೀಗೆ ಆದೇಶವನ್ನಿತ್ತು ಹೊರಟು ಹೋದರು. ಅಂದಿನಿಂದ ನಾನು ಅಲೌಕಿಕ ಮತ್ತು ಪರಮ ಸುಖಮಯ ಕರ್ಮಗಳನ್ನು ಮಾಡುವ ಈ ಬಾಲಕನನ್ನು ಭಗವಾನ್ ನಾರಾಯಣನ ಅಂಶವೆಂದೇ ಭಾವಿಸುತ್ತಿರುವೆನು. ॥ ೨೩ ॥ ವ್ರಜವಾಸಿಗಳು ನಂದಗೋಪನ ಬಾಯಿಂದ ಗರ್ಗಾಚಾರ್ಯರ ಮಾತನ್ನು ಕೇಳಿದಾಗ ಅವರ ವಿಸ್ಮಯವು ಉಳಿಯಲಿಲ್ಲ, ಏಕೆಂದರೆ, ಈಗ ಅವರು ಅಮಿತ ತೇಜಸ್ವಿಯಾದ ಶ್ರೀಕೃಷ್ಣನ ಪ್ರಭಾವವನ್ನು ನೋಡಿ, ಕೇಳಿಬಿಟ್ಟಿದ್ದರು. ಆನಂದತುಂದಿಲರಾಗಿ ಅವರು ನಂದಗೋಪನನ್ನು ಮತ್ತು ಶ್ರೀಕೃಷ್ಣನನ್ನು ಬಹಳವಾಗಿ ಪ್ರಶಂಸಿಸಿದರು. ॥ ೨೪ ॥

ಇತ್ಯದ್ಧಾ ಮಾಂ ಸಮಾದಿಶ್ಯ ಗರ್ಗೇ ಚ ಸ್ವಗೃಹಂ ಗತೇ ।
ಮನ್ಯೇ ನಾರಾಯಣಸ್ಯಾಂಶಂ ಕೃಷ್ಣಮಕ್ಲಿಷ್ಟಕಾರಿಣಮ್
॥ ೨೩ ॥

ತನ್ನ ಸಲುವಾಗಿ ಮಾಡಬೇಕಾಗಿದ್ದ ಯಜ್ಞವು ಭಂಗವಾಯಿತು ಎಂದು ತಿಳಿದೊಡನೆಯೇ ಇಂದ್ರನು ಕೋಪದಿಂದ ಕಿಡಿ-ಕಿಡಿಯಾದನು. ಆ ಗೋವಳರಿಗೆ ಪ್ರತೀಕಾರವನ್ನು ಮಾಡಬೇಕೆಂದು ಒನಕೆ ಗಾತ್ರದ ಧಾರೆಯಿಂದ ಮಳೆಯನ್ನು ಸುರಿಸತೊಡಗಿದನು. ಜೊತೆಯಲ್ಲಿ ಬಿರುಗಾಳಿಯೂ, ಕಲ್ಲು ಮಳೆಯೂ, ಸಿಡಿಲು ಗುಡುಗುಗಳೂ ಬಂದು ವ್ರಜವಾಸಿಗಳನ್ನು ಪೀಡಿಸತೊಡಗಿದವು. ಆಗ ಶರಣಾಗತರಾಗಿ ಬಂದ ಗೋಪ-ಗೋಪಿಯರನ್ನು ನೋಡಿ ಶ್ರೀಕೃಷ್ಣನ ಹೃದಯವು ಕರುಣಾರಸದಿಂದ ತುಂಬಿಹೋಯಿತು. ಆತನು ನೂತನವಾದೊಂದು ಲೀಲೆಯನ್ನು ತೋರಿಸಲು ನಿಶ್ಚಯಿಸಿ ನಸುನಕ್ಕನು. ಬಲಹೀನನಾದ ಬಾಲಕನೊಬ್ಬನು ನಾಯಿಕೊಡೆಯನ್ನು ಎತ್ತಿಹಿಡಿಯುವಷ್ಟು ಸುಲಭವಾಗಿ ಭಗವಾನ್ ಶ್ರೀಕೃಷ್ಣನು ಗೋವರ್ಧನ ಗಿರಿಯನ್ನೆತ್ತಿ ಹಿಡಿದು ಗೋಕುಲವನ್ನು ಕಾಪಾಡಿದನು. ಜೊತೆಯಲ್ಲೇ ಇಂದ್ರನ ಗರ್ವಭಂಗವೂ ಆಯಿತು. ಅಂತಹ ಪರಾತ್ಪರನಾದ, ಕರುಣಾಮಯನಾದ, ಗೋವಿಂದನು ಸುಪ್ರೀತನಾಗಲೀ. ॥ ೨೫ ॥

ಇತಿ ನಂದವಚಃ ಶ್ರುತ್ವಾ ಗರ್ಗಗೀತಂ ವ್ರಜೌಕಸಃ ।
ದೃಷ್ಟಶ್ರುತಾನುಭಾವಾಸ್ತೇ ಕೃಷ್ಣಸ್ಯಾಮಿತತೇಜಸಃ ।
ಮುದಿತಾ ನಂದಮಾನರ್ಚುಃ ಕೃಷ್ಣಂ ಚ ಗತವಿಸ್ಮಯಾಃ
॥ ೨೪ ॥

ದೇವೇ ವರ್ಷತಿ ಯಜ್ಞವಿಪ್ಲವರುಷಾ
ವಜ್ರಾಶ್ಮಪರ್ಷಾನಿಲೈಃ
ಸೀದತ್ಪಾಲಪಶುಸ್ತ್ರಿ ಆತ್ಮಶರಣಂ
ದೃಷ್ಟ್ವಾನುಕಂಪ್ಯುತ್ಸ್ಮಯನ್ ।
ಉತ್ಪಾಟ್ಯೈಕಕರೇಣ ಶೈಲಮಬಲೋ
ಲೀಲೋಚ್ಛಿಲೀಂಧ್ರಂ ಯಥಾ
ಬಿಭ್ರದ್ಗೋಷ್ಠಮಪಾನ್ಮಹೇಂದ್ರಮದಭಿತ್
ಪ್ರೀಯಾನ್ನ ಇಂದ್ರೋ ಗವಾಮ್ ॥ ೨೫ ॥

*ಇಪ್ಪತ್ತಾರನೆಯ ಅಧ್ಯಾಯವು ಮುಗಿಯಿತು. ॥ ೨೬ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಷಡ್ವಿಂಶೋಽಧ್ಯಾಯಃ ॥ ೨೬ ॥

# ಇಪ್ಪತ್ತೇಳನೆಯ ಅಧ್ಯಾಯ

## ಗೋವಿಂದ ಅಭಿಷೇಕ

ಶ್ರೀಶುಕ ಉವಾಚ

ಗೋವರ್ಧನೇ ಧೃತೇ ಶೈಲ ಆಸಾರಾದ್ರಕ್ಷಿತೇ ವ್ರಜೇ ।
ಗೋಲೋಕಾದಾವ್ರಜತ್ ಕೃಷ್ಣಂ ಸುರಭಿಃ ಶಕ್ರ ಏವ ಚ ॥ ೧ ॥

ವಿವಿಕ್ತ ಉಪಸಂಗಮ್ಯ ವ್ರೀಡಿತಃ ಕೃತಹೇಲನಃ ।
ಪಸ್ಪರ್ಶ ಪಾದಯೋರೇನಂ ಕಿರೀಟೇನಾರ್ಕವರ್ಚಸಾ ॥ ೨ ॥

ದೃಷ್ಟಶ್ರುತಾನುಭಾವೋಽಸ್ಯ ಕೃಷ್ಣಸ್ಯಾಮಿತತೇಜಸಃ ।
ನಷ್ಟತ್ರಿಲೋಕೇಶಮದ ಇಂದ್ರ ಆಹ ಕೃತಾಂಜಲಿಃ ॥ ೩ ॥

ಇಂದ್ರ ಉವಾಚ

ವಿಶುದ್ಧಸತ್ತ್ವಂ ತವ ಧಾಮ ಶಾಂತಂ
ತಪೋಮಯಂ ಧ್ವಸ್ತರಜಸ್ತಮಸ್ಕಮ್ ।
ಮಾಯಾಮಯೋಽಯಂ ಗುಣಸಂಪ್ರವಾಹೋ
ನ ವಿದ್ಯತೇ ತೇಽಗ್ರಹಣಾನುಬಂಧಃ ॥ ೪ ॥

ಕುತೋ ನು ತದ್ಧೇತವ ಈಶ ತತ್ಕೃತಾ
ಲೋಭಾದಯೋ ಯೇಽಬುಧಲಿಂಗಭಾವಾಃ ।
ತಥಾಪಿ ದಂಡಂ ಭಗವಾನ್ ಬಿಭರ್ತಿ
ಧರ್ಮಸ್ಯ ಗುಪ್ತ್ಯೈ ಖಲನಿಗ್ರಹಾಯ ॥ ೫ ॥

ಪಿತಾ ಗುರುಸ್ತ್ವಂ ಜಗತಾಮಧೀಶೋ
ದುರತ್ಯಯಃ ಕಾಲ ಉಪಾತ್ತದಂಡಃ ।
ಹಿತಾಯ ಸ್ವೇಚ್ಛಾತನುಭಿಃ ಸಮೀಹಸೇ
ಮಾನಂ ವಿಧುನ್ವನ್ ಜಗದೀಶಮಾನಿನಾಮ್ ॥ ೬ ॥

ಯೇ ಮದ್ವಿಧಾಜ್ಞಾ ಜಗದೀಶಮಾನಿನಃ
ತ್ವಾಂ ವೀಕ್ಷ್ಯ ಕಾಲೇಽಭಯಮಾಶು ತನ್ಮದಮ್ ।
ಹಿತ್ವಾಽಽರ್ಯಮಾರ್ಗಂ ಪ್ರಭಜಂತ್ಯಪಸ್ಮಯಾ
ಈಹಾ ಖಲಾನಾಮಪಿ ತೇಽನುಶಾಸನಮ್ ॥ ೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಗಿರಿರಾಜ ಗೋವರ್ಧನವನ್ನು ಎತ್ತಿ ಹಿಡಿದು ಮುಸಲಧಾರಾವರ್ಷದಿಂದ ವ್ರಜವನ್ನು ಕಾಪಾಡಿದಾಗ ಗೋಲೋಕದಿಂದ ಕಾಮಧೇನುವು ಅವನನ್ನು ಅಭಿನಂದಿಸಲಿಕ್ಕಾಗಿ ಮತ್ತು ಸ್ವರ್ಗಲೋಕದಿಂದ ದೇವೇಂದ್ರನು ಕ್ಷಮಾಪಣೆಯನ್ನು ಯಾಚಿಸಲು ಶ್ರೀಕೃಷ್ಣನ ಬಳಿಗೆ ಬಂದರು. ॥ ೧ ॥ ಭಗವಂತನನ್ನು ತಿರಸ್ಕರಿಸಿದ್ದರಿಂದ ಇಂದ್ರನು ಬಹಳ ಲಜ್ಜಿತನಾಗಿದ್ದನು. ಆದಕ್ಕಾಗಿ ಅವನು ಏಕಾಂತದಲ್ಲಿ ಭಗವಂತನ ಬಳಿಗೆ ಹೋಗಿ, ಸೂರ್ಯನಂತೆ ತೇಜಸ್ವಿಯಾದ ತನ್ನ ಮುಕುಟದಿಂದ ಅವನ ಚರಣಗಳನ್ನು ಸ್ಪರ್ಶಿಸಿದನು. ॥ ೨ ॥ ಪರಮ ತೇಜಸ್ವೀ ಭಗವಾನ್ ಶ್ರೀಕೃಷ್ಣನ ಪ್ರಭಾವವನ್ನು ನೋಡಿ-ಕೇಳಿ 'ತಾನು ಮೂರು ಲೋಕಗಳಿಗೆ ಒಡೆಯನಾಗಿದ್ದೇನೆ' ಎಂಬ ಇಂದ್ರನ ಗರ್ವವು ಉಡುಗಿ ಹೋಯಿತು. ಈಗ ಅವನು ಕೈಜೋಡಿಸಿಕೊಂಡು ಅವನನ್ನು ಸ್ತುತಿಸತೊಡಗಿದನು. ॥ ೩ ॥

**ಇಂದ್ರನು ಹೇಳಿದನು** – ''ಓ ಭಗವಂತಾ! ನಿನ್ನ ಸ್ವರೂಪವು ಪರಮಶಾಂತವೂ, ಜ್ಞಾನಮಯವೂ, ರಜೋಗುಣ-ತಮೋಗುಣಗಳಿಂದ ರಹಿತವೂ, ವಿಶುದ್ಧವೂ, ಅಪ್ರಾಕೃತವೂ, ಸತ್ತ್ವಮಯವೂ ಆಗಿದೆ. ಗುಣಗಳ ಪ್ರವಾಹರೂಪವಾಗಿ ಕಂಡುಬರುವ ಈ ಪ್ರಪಂಚವು ಕೇವಲ ಮಾಯಾಮಯವಾಗಿದೆ. ಏಕೆಂದರೆ, ನಿನ್ನ ಸ್ವರೂಪವನ್ನು ತಿಳಿಯದ ಕಾರಣದಿಂದಲೇ ನಿನ್ನಲ್ಲಿ ಇದು ಕಂಡುಬರುತ್ತಿದೆ. ॥ ೪ ॥ ಅವಿದ್ಯಾ ಪ್ರಚುರವಾದ ಮಾಯಾಮಯ ಸಂಸಾರವೇ ನಿನಗಿಲ್ಲವೆಂದ ಮೇಲೆ ದೇಹಸಂಬಂಧದಿಂದ ಉಂಟಾಗುವ ಜನ್ಮಾಂತರಗಳು ಹೇಗೆ ತಾನೇ ನಿನಗೆ ಉಂಟಾಗಬಲ್ಲವು? ಹಾಗೆಯೇ ಅಜ್ಞಾನಿಗಳ ಲಕ್ಷಣವಾದ ಲೋಭ-ಮೋಹಗಳೂ ನಿನಗಿಲ್ಲ. ಆದರೂ ಮಹಾಮಹಿಮನಾದ ನೀನು ಅವತಾರಗಳನ್ನು ಮಾಡಿ ಧರ್ಮದ ರಕ್ಷಣೆಗಾಗಿಯೂ, ದುಷ್ಟನಿಗ್ರಹಕ್ಕಾಗಿಯೂ ದಂಡವನ್ನು ಧರಿಸುವೆ. ॥ ೫ ॥ ನೀನು ಜಗತ್ತಿಗೆ ತಂದೆಯೂ, ಗುರುವೂ, ಒಡೆಯನೂ ಆಗಿರುವೆ. ನೀನು ಜಗತ್ತನ್ನು ನಿಯಂತ್ರಿಸಲು ದಂಡವನ್ನು ಧರಿಸಿದ ದುಸ್ತರವಾದ ಕಾಲರೂಪಿಯೂ ಆಗಿರುವೆ. ನೀನು ನಿನ್ನ ಭಕ್ತರ ಆಸೆಗಳನ್ನು ಈಡೇರಿಸಲು ಸ್ವೇಚ್ಛೆಯಿಂದ ಲೀಲಾ ಶರೀರವನ್ನು ಪ್ರಕಟಗೊಳಿಸುವೆ. ತ್ರೈಲೋಕ್ಯಾಧಿಪತಿಯೆಂಬ ಅಹಂಕಾರದಿಂದ ಕೂಡಿರುವ ನನ್ನಂಥವರ ಅಭಿಮಾನವನ್ನು ಮುರಿದು ನಮ್ಮಗಳಿಗೆ ಹಿತವನ್ನೇ ಉಂಟು ಮಾಡುವೆ. ॥ ೬ ॥ ನನ್ನಂತಹವರು ಮತ್ತು ತನ್ನನ್ನೇ ಜಗತ್ತಿನ ಸ್ವಾಮಿ ಯೆಂದು ಭಾವಿಸುವವರನ್ನು ನೋಡಿಯೂ, ಮಹಾಭಯದ ಅವಕಾಶದಲ್ಲಿಯೂ ನೀನು ನಿರ್ಭಯನಾಗಿರುವೆ. ಆಗ ಅವರು ಉದ್ಧಟತನವನ್ನು ಬಿಟ್ಟು ಗರ್ವರಹಿತರಾಗಿ ಸತ್ಪುರುಷರಿಂದ ಸೇವಿಸಲ್ಪಟ್ಟ ಭಕ್ತಿಮಾರ್ಗವನ್ನು ಆಶ್ರಯಿಸಿ ನಿನ್ನನ್ನು ಭಜಿಸುತ್ತಾರೆ. ಪ್ರಭೋ! ನಿನ್ನ ಒಂದೊಂದು ಚೇಷ್ಟೆಯೂ ದುಷ್ಟರ ದಂಡನೆಗಾಗಿಯೇ ಇದೆ. ॥ ೭ ॥

ಸ ತ್ವಂ ಮಮೈಶ್ವರ್ಯಮದಪ್ಲುತಸ್ಯ
ಕೃತಾಗಸಸ್ತೇಽವಿದುಷಃ ಪ್ರಭಾವಮ್ ।
ಕ್ಷಂತುಂ ಪ್ರಭೋಽಥಾರ್ಹಸಿ ಮೂಢಚೇತಸೋ
ಮೈವಂ ಪುನರ್ಭೂನ್ಮತಿರೀಶ ಮೇಽಸತೀ ॥ ೮ ॥

ತವಾವತಾರೋಽಯಮಧೋಕ್ಷಜೇಹ
ಸ್ವಯಂಭರಾಣಾಮುರುಭಾರಜನ್ಮನಾಮ್ ।
ಚಮೂಪತೀನಾಮಭವಾಯ ದೇವ
ಭವಾಯ ಯುಷ್ಮಚ್ಚರಣಾನುವರ್ತಿನಾಮ್ ॥ ೯ ॥

ನಮಸ್ತುಭ್ಯಂ ಭಗವತೇ ಪುರುಷಾಯ ಮಹಾತ್ಮನೇ ।
ವಾಸುದೇವಾಯ ಕೃಷ್ಣಾಯ ಸಾತ್ವತಾಂ ಪತಯೇ ನಮಃ ॥ ೧೦ ॥

ಸ್ವಚ್ಛಂದೋಪಾತ್ತದೇಹಾಯ ವಿಶುದ್ಧಜ್ಞಾನಮೂರ್ತಯೇ ।
ಸರ್ವಸ್ಮೈ ಸರ್ವಬೀಜಾಯ ಸರ್ವಭೂತಾತ್ಮನೇ ನಮಃ ॥ ೧೧ ॥

ಮಯೇದಂ ಭಗವನ್ ಗೋಷ್ಠನಾಶಾಯಾಸಾರವಾಯುಭಿಃ ।
ಚೇಷ್ಟಿತಂ ವಿಹತೇ ಯಜ್ಞೇ ಮಾನಿನಾ ತೀವ್ರಮನ್ಯುನಾ ॥ ೧೨ ॥

ತ್ವಯೇಶಾನುಗೃಹೀತೋಽಸ್ಮಿ ಧ್ವಸ್ತಸ್ತಂಭೋ ವೃಥೋದ್ಯಮಃ ।
ಈಶ್ವರಂ ಗುರುಮಾತ್ಮಾನಂ ತ್ವಾಮಹಂ ಶರಣಂ ಗತಃ ॥ ೧೩ ॥

*ಶ್ರೀಶುಕ ಉವಾಚ*

ಏವಂ ಸಂಕೀರ್ತಿತಃ ಕೃಷ್ಣೋ ಮಘೋನಾ ಭಗವಾನಮುಮ್ ।
ಮೇಘಗಂಭೀರಯಾ ವಾಚಾ ಪ್ರಹಸನ್ನಿದಮಬ್ರವೀತ್ ॥ ೧೪ ॥

*ಶ್ರೀಭಗವಾನುವಾಚ*

ಮಯಾ ತೇಽಕಾರಿ ಮಘವನ್ ಮಖಭಂಗೋಽನುಗೃಹ್ಣತಾ ।
ಮದನುಸ್ಮೃತಯೇ ನಿತ್ಯಂ ಮತ್ತಸ್ಯೇಂದ್ರಶ್ರಿಯಾ ಭೃಶಮ್ ॥ ೧೫ ॥

ಸ್ವಾಮಿ ! ನಾನು ಐಶ್ವರ್ಯಮದದಿಂದ ಉನ್ಮತ್ತನಾಗಿ ನಿನಗೆ ಅಪರಾಧವನ್ನು ಎಸಗಿರುವೆನು. ಏಕೆಂದರೆ, ನಾನು ನಿನ್ನ ಶಕ್ತಿ ಮತ್ತು ಪ್ರಭಾವದ ಕುರಿತು ಪೂರ್ಣವಾಗಿ ಅಜ್ಞಾನಿಯಾಗಿದ್ದೆ. ಪರಮ ಈಶ್ವರನೇ ! ನೀನು ದಯಮಾಡಿ ಮೂರ್ಖನಾದ ನನ್ನ ಅಪರಾಧ ವನ್ನು ಕ್ಷಮಿಸಿ, ಮುಂದೆ ನಾನು ಎಂದೆಂದಿಗೂ ಅಜ್ಞಾನಕ್ಕೆ ವಶನಾಗ ದಂತೆ ಕೃಪೆ ಮಾಡು. ॥ ೮ ॥ ಸ್ವಯಂ ಪ್ರಕಾಶನಾದ ಇಂದ್ರಿಯಾತೀತ ಪರಮಾತ್ಮನೇ ! ಅಸುರರಾದ ಸೇನಾಪತಿಗಳು ಕೇವಲ ತಮ್ಮ ಹೊಟ್ಟೆಯನ್ನು ಹೊರೆಯುವುದರಲ್ಲೇ ಮಗ್ನರಾಗಿ ಇರುತ್ತಾರೆ. ಭೂ ಭಾರಕ್ಕೆ ಕಾರಣರಾದವರನ್ನು ವಧಿಸಿ ಅವರಿಗೆ ಮೋಕ್ಷವನ್ನು ದಯಪಾಲಿಸುವೆ. ನಿನ್ನ ಚರಣ ಸೇವಕರಾಗಿ ನಿನ್ನ ಆಜ್ಞೆಯನ್ನು ಪಾಲಿಸುವ ಭಕ್ತಜನರಿಗೆ ಅಭ್ಯುದಯವನ್ನು ಕರುಣಿಸಲು, ಅವರನ್ನು ರಕ್ಷಿಸಲಿಕ್ಕಾಗಿಯೇ ನಿನ್ನ ಈ ಅವತಾರ ವಾಗಿದೆ. ॥ ೯ ॥ ಭಗವಂತನೇ ! ನಾನು ನಿನಗೆ ನಮಸ್ಕರಿಸುತ್ತೇನೆ. ನೀನು ಸರ್ವಾಂತರ್ಯಾಮಿ ಪುರುಷೋತ್ತಮನೂ, ಸರ್ವಾತ್ಮಾ ವಾಸುದೇವನೂ ಆಗಿರುವೆ. ನೀನು ಯದುವಂಶಿಯರ ಏಕಮಾತ್ರ ಸ್ವಾಮಿಯಾಗಿರುವೆ. ಭಕ್ತವತ್ಸಲನೂ, ಸರ್ವರ ಚಿತ್ತಗಳನ್ನು ಆಕರ್ಷಿಸುವವನಾಗಿರುವೆ. ಅಂತಹ ನಿನಗೆ ನಾನು ಪದೇ ಪದೇ ವಂದಿಸುತ್ತೇನೆ. ॥ ೧೦ ॥ ಜೀವರಂತೆ ನೀನು ಕರ್ಮವಶನಲ್ಲ ದಿದ್ದರೂ ಭಕ್ತರ ಹಾಗೂ ನಿನ್ನ ಇಚ್ಛೆಯಿಂದ ಬೇಕು-ಬೇಕಾದ ಶರೀರಗಳನ್ನು ಧರಿಸುವೆ. ನಿನ್ನ ಈ ಶರೀರವು ವಿಶುದ್ಧ ಜ್ಞಾನಸ್ವರೂಪ ವಾಗಿದೆ. ಸರ್ವಸ್ವವೂ ನೀನೇ. ಸಮಸ್ತಕ್ಕೂ ಕಾರಣನೂ, ಎಲ್ಲರ ಆತ್ಮಸ್ವರೂಪನೂ ಆಗಿರುವೆ. ಅಂತಹ ನಿನಗೆ ನಮಸ್ಕರಿ ಸುತ್ತೇನೆ. ॥ ೧೧ ॥ ಭಗವಂತನೇ ! ನಾನು ಮಹಾಮಾನಿಷ್ಠನು, ಅತ್ಯಂತ ಕೋಪಿಷ್ಠನು. ನನ್ನ ಸಲುವಾಗಿ ಮಾಡುತ್ತಿದ್ದ ಯಜ್ಞವು ನಿಂತು ಹೋಯಿತೆಂದು ತಿಳಿದಾಗ ನಾನು ಮುಸಲಧಾರೆಯಿಂದ ಕೂಡಿದ ಮಳೆಯಿಂದಲೂ, ಬಿರುಗಾಳಿಯಿಂದಲೂ ವ್ರಜಭೂಮಿ ಯನ್ನೇ ಪೂರ್ಣವಾಗಿ ನಾಶಮಾಡಲು ಪ್ರಯತ್ನಿಸಿದೆ. ॥ ೧೨ ॥ ಸ್ವಾಮಿಯೇ ! ನೀನು ನನ್ನ ಮೇಲೆ ಪರಮಾನುಗ್ರಹವನ್ನು ತೋರಿಸಿ ರುವೆ. ನನ್ನ ಕಾರ್ಯವನ್ನು ವ್ಯರ್ಥಗೊಳಿಸಿ ನನ್ನ ಅಹಂಕಾರವನ್ನು ಮುರಿದಿರುವೆ. ನನ್ನ ಅಜ್ಞಾನವನ್ನು ಹೋಗಲಾಡಿಸಿರುವೆ. ಆದುದ ರಿಂದ ನೀನೇ ಸ್ವಾಮಿಯೂ, ಗುರುವೂ, ಆತ್ಮನೂ ಆಗಿರುವೆ. ನಿನಗೆ ನಾನು ಶರಣಾಗಿದ್ದೇನೆ." ॥ ೧೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ ! ದೇವೇಂದ್ರನು ಭಗವಾನ್ ಶ್ರೀಕೃಷ್ಣನನ್ನು ಹೀಗೆ ಸ್ತುತಿಸಿದಾಗ ಅವನು ಮುಗುಳ್ನಕ್ಕು ಮೇಘ ಗಂಭೀರ ಧ್ವನಿಯಿಂದ ಇಂದ್ರನನ್ನು ಸಂಬೋಧಿಸಿ ಇಂತೆಂದನು - ॥ ೧೪ ॥

**ಶ್ರೀಭಗವಂತನು ಹೇಳಿದನು** - ಇಂದ್ರನೇ ! ನೀನು ಐಶ್ವರ್ಯ-ಧನಸಂಪತ್ತಿನ ಮದದಿಂದ ಉನ್ಮತ್ತನಾಗಿದ್ದೆ. ಅದಕ್ಕಾ ಗಿಯೇ ನಿನ್ನ ಮೇಲೆ ಅನುಗ್ರಹವನ್ನು ಮಾಡಲೆಂದೇ ನಿನ್ನ ಯಜ್ಞ ವನ್ನು ಭಂಗಗೊಳಿಸಿದೆ. ಏಕೆಂದರೆ, ಇನ್ನು ನೀನು ನನ್ನನ್ನು ನಿತ್ಯ ನಿರಂತರ ಸ್ಮರಿಸುವಂತಾಗಲಿ. ॥ ೧೫ ॥

ಮಾಮೈಶ್ವರ್ಯಶ್ರೀಮದಾಂಧೋ ದಂಡಪಾಣಿಂ ನ ಪಶ್ಯತಿ ।
ತಂ ಭ್ರಂಶಯಾಮಿ ಸಂಪದ್ಭ್ಯೋ ಯಸ್ಯ ಚೇಚ್ಛಾಮ್ಯನುಗ್ರಹಮ್ ॥ ೧೬ ॥

ಗಮ್ಯತಾಂ ಶಕ್ರ ಭದ್ರಂ ವಃ ಕ್ರಿಯತಾಂ ಮೇಽನುಶಾಸನಮ್ ।
ಸ್ಥೀಯತಾಂ ಸ್ವಾಧಿಕಾರೇಷು ಯುಕ್ತೈರ್ವಃ ಸ್ತಂಭವರ್ಜಿತೈಃ ॥ ೧೭ ॥

ಅಥಾಹ ಸುರಭಿಃ ಕೃಷ್ಣಮಭಿವಂದ್ಯ ಮನಸ್ವಿನೀ ।
ಸ್ವಸಂತಾನೈರುಪಾಮಂತ್ರ್ಯ ಗೋಪರೂಪಿಣಮೀಶ್ವರಮ್ ॥ ೧೮ ॥

*ಸುರಭಿರುವಾಚ*

ಕೃಷ್ಣ ಕೃಷ್ಣ ಮಹಾಯೋಗಿನ್ ವಿಶ್ವಾತ್ಮನ್ ವಿಶ್ವಸಂಭವ ।
ಭವತಾ ಲೋಕನಾಥೇನ ಸನಾಥಾ ವಯಮಚ್ಯುತ ॥ ೧೯ ॥

ತ್ವಂ ನಃ ಪರಮಕಂ ದೈವಂ ತ್ವಂ ನ ಇಂದ್ರೋ ಜಗತ್ಪತೇ ।
ಭವಾಯ ಭವ ಗೋವಿಪ್ರದೇವಾನಾಂ ಯೇ ಚ ಸಾಧವಃ ॥ ೨೦ ॥

ಇಂದ್ರಂ ನಸ್ತ್ವಾಭಿಷೇಕ್ಷ್ಯಾಮೋ ಬ್ರಹ್ಮಣಾ ನೋದಿತಾ ವಯಮ್ ।
ಅವತೀರ್ಣೋಽಸಿ ವಿಶ್ವಾತ್ಮನ್ ಭೂಮೇರ್ಭಾರಾಪನುತ್ತಯೇ ॥ ೨೧ ॥

*ಶ್ರೀಶುಕ ಉವಾಚ*

ಏವಂ ಕೃಷ್ಣಮುಪಾಮಂತ್ರ್ಯ ಸುರಭಿಃ ಪಯಸಾಽಽತ್ಮನಃ ।
ಜಲೈರಾಕಾಶಗಂಗಾಯಾ ಐರಾವತಕರೋದ್ಧೃತೈಃ ॥ ೨೨ ॥

ಇಂದ್ರಃ ಸುರರ್ಷಿಭಿಃ ಸಾಕಂ ನೋದಿತೋ ದೇವಮಾತೃಭಿಃ ।
ಅಭ್ಯಷಿಂಚತ ದಾಶಾರ್ಹಂ ಗೋವಿಂದ ಇತಿ ಚಾಭ್ಯಧಾತ್ ॥ ೨೩ ॥

ತತ್ರಾಗತಾಸ್ತುಂಬುರುನಾರದಾದಯೋ
ಗಂಧರ್ವವಿದ್ಯಾಧರಸಿದ್ಧಚಾರಣಾಃ ।
ಜಗುರ್ಯಶೋ ಲೋಕಮಲಾಪಹಂ ಹರೇಃ
ಸುರಾಂಗನಾಃ ಸಂನನೃತುರ್ಮುದಾನ್ವಿತಾಃ ॥ ೨೪ ॥

ಐಶ್ವರ್ಯ ಮತ್ತು ಧನ ಮದದಿಂದ ಕುರುಡಾದವನು – ಕಾಲ ರೂಪಿಯಾದ ಪರಮೇಶ್ವರನಾದ ನಾನು ಕೈಯಲ್ಲಿ ದಂಡವನ್ನು ಧರಿಸಿ ಅವನ ತಲೆಯ ಮೇಲೆ ಕುಳಿತಿರುವೆನೆಂಬುದನ್ನು ತಿಳಿಯುವುದಿಲ್ಲ. ನಾನು ಯಾರ ಮೇಲೆ ಅನುಗ್ರಹ ತೋರಬೇಕೆಂದು ಬಯಸುವೆನೋ ಅವನನ್ನು ಐಶ್ವರ್ಯ ಭ್ರಷ್ಟನನ್ನಾಗಿ ಮಾಡಿಬಿಡುತ್ತೇನೆ. ॥ ೧೬ ॥ ಇಂದ್ರನೇ! ನಿನಗೆ ಮಂಗಳವಾಗಲಿ. ಇನ್ನು ನೀನು ನಿನ್ನರಾಜಧಾನಿ ಅಮರಾವತಿಗೆ ಹೋಗಿ ನನ್ನ ಆಜ್ಞೆಯನ್ನು ಪಾಲಿಸುತ್ತಾ ಇರು. ಮುಂದೆ ಎಂದೂ ಗರ್ವಪಡಬೇಡ. ನಿನ್ನ ಅಧಿಕಾರಕ್ಕೆ ಅನುಸಾರವಾಗಿ ಉಚಿತವಾದ ರೀತಿಯಲ್ಲಿ ಮರ್ಯಾದೆಯನ್ನು ಮೀರದೇ, ನನ್ನ ಸನ್ನಿಧಿಯನ್ನು, ನನ್ನ ಸಂಯೋಗವನ್ನು ಅನುಭವಿಸುತ್ತಾ ಮೂರು ಲೋಕಗಳನ್ನು ಪಾಲಿಸುತ್ತಾ ಇರು. ॥ ೧೭ ॥

ಪರೀಕ್ಷಿತನೇ! ಭಗವಂತನು ಹೀಗೆ ಆಜ್ಞೆಕೊಡುತ್ತಿರುವಾಗಲೇ ಪ್ರಶಸ್ತವಾದ ಮನಸ್ಸುಳ್ಳ ಕಾಮಧೇನುವು ತನ್ನ ಸಂತಾನದೊಡನೆ ಗೋಪವೇಷಧಾರಿಯಾದ ಪರಮೇಶ್ವರ ಶ್ರೀಕೃಷ್ಣನ ಬಳಿಗೆ ಬಂದು ಅವನಿಗೆ ತಲೆಬಾಗಿ ನಮಸ್ಕರಿಸಿ ಹೇಳಿದಳು. ॥ ೧೮ ॥

**ಕಾಮಧೇನುವು ಹೇಳಿತು** – ಸಚ್ಚಿದಾನಂದ ಸ್ವರೂಪನಾದ ಶ್ರೀಕೃಷ್ಣನೇ! ನೀನು ಮಹಾಯೋಗೇಶ್ವರನಾಗಿರುವೆ. ಸಾಕ್ಷಾತ್ ವಿಶ್ವವೇ ಆಗಿರುವೆ. ವಿಶ್ವದ ಪರಮ ಕಾರಣನೂ, ಅಚ್ಯುತನೂ ಆಗಿರುವೆ. ಸಮಸ್ತ ವಿಶ್ವಕ್ಕೆ ಸ್ವಾಮಿಯಾಗಿರುವ ನಿನ್ನನ್ನು ನಾಥನನ್ನಾಗಿ ಪಡೆದು ನಾವು ಸನಾಥರಾಗಿದ್ದೇವೆ. ॥ ೧೯ ॥ ನೀನು ಜಗತ್ತಿನ ಸ್ವಾಮಿಯಾಗಿರುವೆ. ಆದರೆ ನಮಗಾದರೋ ಪರಮಪೂಜ್ಯ ಆರಾಧ್ಯಸ್ವಾಮಿಯಾಗಿರುವೆ. ಪ್ರಭೋ! ದೇವೇಂದ್ರನು ಮೂರು ಲೋಕಗಳಿಗೆ ಇಂದ್ರನಿರಬಹುದು, ಆದರೆ ನಮಗೆ ಇಂದ್ರನು ನೀನೇ ಆಗಿರುವೆ. ಆದ್ದರಿಂದ ನೀನೇ ಗೋವು, ಬ್ರಾಹ್ಮಣರು, ದೇವತೆಗಳು, ಸಾಧುಜನರು – ಇವರ ರಕ್ಷಣೆಗಾಗಿ ನಮ್ಮ ಇಂದ್ರನಾಗು. ॥ ೨೦ ॥ ಗೋವುಗಳಾದ ನಾವು ಬ್ರಹ್ಮದೇವರ ಪ್ರೇರಣೆಯಿಂದ ನಿನ್ನನ್ನು ನಮ್ಮ ಇಂದ್ರನೆಂದು ಭಾವಿಸಿ ಅಭಿಷೇಕ ಮಾಡುವೆವು. ವಿಶ್ವಾತ್ಮನೇ! ನೀನು ಭೂ ಭಾರವನ್ನು ಇಳುಹಲೆಂದೇ ಅವತರಿಸಿರುವೆ. ॥ ೨೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನಲ್ಲಿ ಹೀಗೆ ಹೇಳಿ ಕಾಮಧೇನುವು ತನ್ನ ಹಾಲಿನಿಂದಲೆ ಅವನಿಗೆ ಅಭಿಷೇಕ ಮಾಡಿತು. ದೇವತೆಗಳ ಪ್ರೇರಣೆಯಿಂದ ದೇವೇಂದ್ರನು ಐರಾವತವು ತನ್ನ ಸೊಂಡಿಲಿನಿಂದ ತಂದಿರುವ ಆಕಾಶಗಂಗೆಯ ಜಲದಿಂದ ದೇವರ್ಷಿಗಳೊಡನೆ ಯದುನಾಥನಾದ ಶ್ರೀಕೃಷ್ಣನಿಗೆ ಅಭಿಷೇಕ ಮಾಡಿ, ಅವನನ್ನು 'ಗೋವಿಂದ'ನೆಂದು ಸಂಬೋಧಿಸಿದನು. ॥ ೨೨-೨೩ ॥ ಆ ಸಮಯದಲ್ಲಿ ನಾರದ, ತುಂಬುರು ಮೊದಲಾದ ಗಂಧರ್ವರು, ವಿದ್ಯಾಧರರು, ಸಿದ್ಧರು, ಚಾರಣರು ಮೊದಲೇ ಅಲ್ಲಿಗೆ ಬಂದಿದ್ದರು. ಅವರೆಲ್ಲರೂ ಪ್ರಪಂಚದ ತಾಪ-ಪಾಪಗಳನ್ನು ಹೋಗಲಾಡಿಸುವ ಶ್ರೀಕೃಷ್ಣನ ಯಶಸ್ಸನ್ನು ಕೀರ್ತಿಸತೊಡಗಿದರು. ಅಪ್ಸರೆಯರು ಆನಂದತುಂಬಿ ನೃತ್ಯಮಾಡತೊಡಗಿದರು. ॥ ೨೪ ॥

ತಂ ತುಷ್ಟುವುರ್ದೇವನಿಕಾಯಕೇತವೋ
ವ್ಯವಾಕಿರಂಶ್ಚಾದ್ಭುತಪುಷ್ಪವೃಷ್ಟಿಭಿಃ ।
ಲೋಕಾಃ ಪರಾಂ ನಿರ್ವೃತಿಮಾಪ್ನುವಂಸ್ತ್ರಯೋ
ಗಾವಸ್ತದಾ ಗಾಮನಯನ್ ಪಯೋದ್ರುತಾಮ್ ॥ ೨೫ ॥

ಪ್ರಧಾನ ದೇವತೆಗಳು ಭಗವಂತನನ್ನು ಸ್ತುತಿಸುತ್ತಾ ಅವನ ಮೇಲೆ ನಂದನವನದ ದಿವ್ಯ ಪುಷ್ಪಗಳ ಮಳೆಗರೆಯ ತೊಡಗಿದರು. ಮೂರು ಲೋಕಗಳೂ ಪರಮಾನಂದದಲ್ಲಿ ಮುಳುಗಿ ಹೋದುವು. ಗೋವುಗಳ ಕೆಚ್ಚಲುಗಳಿಂದ ತಾನಾಗಿಯೇ ಹಾಲು ಸುರಿದು ಪೃಥ್ವಿಯು ನೆನೆದು ಹೋಯಿತು. ॥ ೨೫ ॥ ನದಿಗಳು ನಾನಾ ವಿಧದ ರಸಗಳಿಂದ ತುಂಬಿ ಹರಿಯತೊಡಗಿದವು. ಮರ ಗಿಡ-ಬಳ್ಳಿಗಳಿಂದ, ಪುಷ್ಪಗಳಿಂದ ಮಧುವು ಸುರಿಯುತ್ತಿತ್ತು. ಉಳದೆಯೇ ಪೃಥ್ವಿಯು ಅನೇಕ ವಿಧವಾದ ಔಷಧಿಗಳನ್ನು, ಅನ್ನವನ್ನು ನೀಡುತ್ತಿತ್ತು. ಪರ್ವತಗಳಲ್ಲಿ ಅಡಗಿದ್ದ ನವರತ್ನಗಳು ತಾನಾಗಿ ಹೊರಗೆ ಕಾಣಿಸಿಕೊಂಡವು. ॥ ೨೬ ॥ ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನ ಅಭಿಷೇಕವಾದ ಮೇಲೆ ಸ್ವಭಾವತಃ ಕ್ರೂರವಾಗಿದ್ದ ಜೀವಿಗಳೂ ಕೂಡ ವೈರಹೀನವಾದುವು. ಅವುಗಳು ಪರಸ್ಪರ ಮೈತ್ರಿಯಿಂದ ಇರತೊಡಗಿದವು. ॥ ೨೭ ॥ ಇಂದ್ರನು ಈ ಪ್ರಕಾರವಾಗಿ ಗೋವುಗಳ ಮತ್ತು ಗೋಕುಲದ ಸ್ವಾಮಿಯಾದ ಗೋವಿಂದನಿಗೆ ಅಭಿಷೇಕ ಮಾಡಿ, ಅವನಿಂದ ಬೀಳ್ಕೊಂಡು ಗಂಧರ್ವರು, ದೇವತೆಗಳೊಂದಿಗೆ ಅಮರಾವತಿಗೆ ತೆರಳಿದನು. ॥ ೨೮ ॥

ನಾನಾರಸೌಘಾಃ ಸರಿತೋ ವೃಕ್ಷಾ ಆಸನ್ ಮಧುಸ್ರವಾಃ ।
ಅಕೃಷ್ಟಪಚ್ಯೌಷಧಯೋ ಗಿರಯೋಽಬಿಭ್ರದುನ್ಮಣೀನ್ ॥ ೨೬ ॥

ಕೃಷ್ಣೇಽಭಿಷಿಕ್ತ ಏತಾನಿ ಸತ್ತ್ವಾನಿ ಕುರುನಂದನ ।
ನಿರ್ವೈರಾಣ್ಯಭವಂಸ್ತಾತ ಕ್ರೂರಾಣ್ಯಪಿ ನಿಸರ್ಗತಃ ॥ ೨೭ ॥

ಇತಿ ಗೋಗೋಕುಲಪತಿಂ ಗೋವಿಂದಮಭಿಷಿಚ್ಯ ಸಃ ।
ಅನುಜ್ಞಾತೋ ಯಯೌ ಶಕ್ರೋ ವೃತೋ ದೇವಾದಿಭಿರ್ದಿವಮ್ ॥ ೨೮ ॥

ಇಪ್ಪತ್ತೇಳನೆಯ ಅಧ್ಯಾಯವು ಮುಗಿಯಿತು. ॥ ೨೭ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಇಂದ್ರಸ್ತುತಿರ್ನಾಮ ಸಪ್ತವಿಂಶೋಽಧ್ಯಾಯಃ ॥ ೨೭ ॥

# ಇಪ್ಪತ್ತೆಂಟನೆಯ ಅಧ್ಯಾಯ

## ಶ್ರೀಕೃಷ್ಣನು ವರುಣಲೋಕದಿಂದ ನಂದಗೋಪನನ್ನು ಬಿಡಿಸಿ ತಂದುದು

ಶ್ರೀಶುಕ ಉವಾಚ

ಏಕಾದಶ್ಯಾಂ ನಿರಾಹಾರಃ ಸಮಭ್ಯರ್ಚ್ಯ ಜನಾರ್ದನಮ್ ।
ಸ್ನಾತುಂ ನಂದಸ್ತು ಕಾಲಿಂದ್ಯಾ ದ್ವಾದಶ್ಯಾಂ ಜಲಮಾವಿಶತ್ ॥ ೧ ॥

ತಂ ಗೃಹೀತ್ವಾನಯದ್ಭೃತ್ಯೋ ವರುಣಸ್ಯಾಸುರೋಽಂತಿಕಮ್ ।
ಅವಿಜ್ಞಾಯಾಸುರೀಂ ವೇಲಾಂ ಪ್ರವಿಷ್ಟಮುದಕಂ ನಿಶಿ ॥ ೨ ॥

ಚುಕ್ರುಶುಸ್ತಮಪಶ್ಯಂತಃ ಕೃಷ್ಣ ರಾಮೇತಿ ಗೋಪಕಾಃ ।
ಭಗವಾಂಸ್ತದುಪಶ್ರುತ್ಯ ಪಿತರಂ ವರುಣಾಹೃತಮ್ ।
ತದಂತಿಕಮ್ ಗತೋ ರಾಜನ್ ಸ್ವಾನಾಮಭಯದೋ ವಿಭುಃ ॥ ೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ ! ನಂದಗೋಪನು ಕಾರ್ತೀಕ ಶುಕ್ಲ ಏಕಾದಶಿಯ ದಿನ ಉಪವಾಸ ಮಾಡಿ ಭಗವಂತನಾದ ಜನಾರ್ದನನನ್ನು ಪೂಜಿಸಿ, ರಾತ್ರಿಯಲ್ಲಿ ದ್ವಾದಶಿಯು ಪ್ರಾರಂಭವಾಗುತ್ತಲೇ ಸ್ನಾನಮಾಡಲು ಯಮುನಾ ನದಿಯಲ್ಲಿ ಪ್ರವೇಶಿಸಿದನು. ॥ ೧ ॥ ಇದು ಅಸುರರ ಕಾಲವೆಂದು ನಂದಗೋಪನಿಗೆ ತಿಳಿದಿರಲಿಲ್ಲ, ಆದಕ್ಕಾಗಿ ಅವನು ರಾತ್ರಿಯೇ ಯಮುನಾನದಿಗೆ ಇಳಿದಿದ್ದನು. ಆಗ ವರುಣನ ಸೇವಕನಾದ ಓರ್ವ ಅಸುರನು ನಂದಗೋಪನನ್ನು ಹಿಡಿದುಕೊಂಡು ತನ್ನ ಒಡೆಯನ ಬಳಿಗೆ ಒಯ್ದನು. ॥ ೨ ॥ ನಂದಗೋಪನನ್ನು ಕಾಣದೆ ಗೋಪಾಲರೆಲ್ಲರೂ ಗಟ್ಟಿಯಾಗಿ ಕೂಗಿಕೊಂಡರು. ಕೃಷ್ಣ! ಬಲರಾಮ ! ನಮ್ಮ ರಾಜನಾದ ನಂದಗೋಪನೇ ಕಾಣೆಯಾಗಿದ್ದಾನೆ. ನೀವೇ ನಮಗೆ ಪರಮಾಶ್ರಯರು. ನಂದಗೋಪನನ್ನು ಬೇಗನೇ ಹುಡುಕಿ ತನ್ನಿರಿ, ಎಂದು ಗೋಳಾಡಿದರು. ಗೋಪಾಲಕರ ಮಾತನ್ನು ಕೇಳಿದ ಭಕ್ತಭಯಾಪಹನಾದ, ಸರ್ವಜ್ಞನಾದ ನಂದಕುಮಾರನು ತನ್ನ ತಂದೆಯನ್ನು ವರುಣನ ಸೇವಕನಾರೋ ಕರೆದೊಯ್ದಿರಬಹುದೆಂದು ತಿಳಿದು ಒಡಯನೇ ವರುಣ ಬಳಿಗೆ ಹೋದನು. ॥ ೩ ॥

ಪ್ರಾಪ್ತಂ ವೀಕ್ಷ್ಯ ಹೃಷೀಕೇಶಂ ಲೋಕಪಾಲಃ ಸಪರ್ಯಯಾ ।
ಮಹತ್ಯಾ ಪೂಜಯಿತ್ವಾಽಽಹ ತದ್ದರ್ಶನಮಹೋತ್ಸವಃ ॥ ೪ ॥

ಅಂತರಿಂದ್ರಿಯ-ಬಹಿರಿಂದ್ರಿಯಗಳ ಪ್ರವರ್ತಕನಾದ ಭಗವಾನ್ ಶ್ರೀಕೃಷ್ಣನೇ ತನ್ನ ಲೋಕಕ್ಕೆ ಬಂದಿರುವನೆಂದು ನೋಡಿ ವರುಣನು ಶ್ರೀಕೃಷ್ಣನಿಗೆ ಮಹಾಪೂಜೆಯನ್ನು ಸಲ್ಲಿಸಿದನು. ಭಗವಂತನ ದರ್ಶನದಿಂದ ಆನಂದ ಭರಿತನಾಗಿ ಕೈಗಳನ್ನು ಜೋಡಿಸಿಕೊಂಡು ಭಗವಂತನಲ್ಲಿ ನಿವೇದಿಸಿಕೊಂಡನು. ॥ ೪ ॥

*ವರುಣ ಉವಾಚ*

ಅದ್ಯ ಮೇ ನಿಭೃತೋ ದೇಹೋಽದ್ಯೈವಾರ್ಥೋಽಧಿಗತಃ ಪ್ರಭೋ ।
ತ್ವತ್ಪಾದಭಾಜೋ ಭಗವನ್ನವಾಪುಃ ಪಾರಮಧ್ವನಃ ॥ ೫ ॥

ನಮಸ್ತುಭ್ಯಂ ಭಗವತೇ ಬ್ರಹ್ಮಣೇ ಪರಮಾತ್ಮನೇ ।
ನ ಯತ್ರ ಶ್ರೂಯತೇ ಮಾಯಾ ಲೋಕಸೃಷ್ಟಿವಿಕಲ್ಪನಾ ॥ ೬ ॥

ಅಜಾನತಾ ಮಾಮಕೇನ ಮೂಢೇನಾಕಾರ್ಯವೇದಿನಾ ।
ಆನೀತೋಽಯಂ ತವ ಪಿತಾ ತದ್ಭವಾನ್ ಕ್ಷಂತುಮರ್ಹತಿ ॥ ೭ ॥

ಮಮಾಪ್ಯನುಗ್ರಹಂ ಕೃಷ್ಣ ಕರ್ತುಮರ್ಹಸ್ಯಶೇಷದೃಕ್ ।
ಗೋವಿಂದ ನೀಯತಾಮೇಷ ಪಿತಾ ತೇ ಪಿತೃವತ್ಸಲ ॥ ೮ ॥

**ವರುಣನು ಹೇಳಿದನು** – ಪ್ರಭು! ನಿನ್ನ ದಿವ್ಯದರ್ಶನದಿಂದ ನನ್ನ ಜನ್ಮವು ಸಾರ್ಥಕವಾಯಿತು. ಪುರುಷಾರ್ಥವು ಈಡೇರಿತು. ಇಂದು ನನಗೆ ನಿನ್ನ ಚರಣಕಮಲಗಳ ಸೇವೆ ಮಾಡುವ ಶುಭಾವಕಾಶವು ದೊರೆಯಿತು. ನಿನ್ನ ಚರಣಕಮಲಗಳನ್ನು ಆಶ್ರಯಿಸಿದವರು ಭವಸಾಗರದಿಂದ ಪಾರಾಗಿಹೋಗುತ್ತಾರೆ. ॥ ೫ ॥ ನೀನು ಭಕ್ತರಿಗೆ ಭಗವಂತನೂ, ವೇದಾಂತಿಗಳ ಬ್ರಹ್ಮನೂ, ಯೋಗಿಗಳ ಪರಮಾತ್ಮನೂ ಆಗಿರುವೆ. ವಿಭಿನ್ನ ಲೋಕಗಳನ್ನು ಸೃಷ್ಟಿಸುವ ಮಾಯೆಯು ನಿನ್ನ ಸ್ವರೂಪದಲ್ಲಿ ಇಲ್ಲವೆಂದು ಶ್ರುತಿಗಳು ಹೇಳುತ್ತವೆ. ಅಂತಹ ನಿನಗೆ ನಾನು ನಮಸ್ಕರಿಸುತ್ತಿದ್ದೇನೆ. ॥ ೬ ॥ ಸ್ವಾಮಿ! ನನ್ನ ಈ ಮೂರ್ಖನಾದ ಸೇವಕನು ತನ್ನ ಕರ್ತವ್ಯವೇನೆಂಬುದನ್ನು ಅರಿಯದೆ ನಿನ್ನ ತಂದೆಯನ್ನು ಇಲ್ಲಿಗೆ ಕರೆತಂದಿರುವನು. ಅವನ ಈ ಅಪರಾಧವನ್ನು ದಯಮಾಡಿ ಕ್ಷಮಿಸಿಬಿಡು. ॥ ೭ ॥ ಗೋವಿಂದ! ನೀನು ನಿನ್ನ ತಂದೆಯನ್ನು ಬಹಳವಾಗಿ ಪ್ರೀತಿಸುತ್ತಿರುವೆ ಎಂಬುದನ್ನು ನಾನು ಬಲ್ಲೆನು. ಇದೋ ನಿನ್ನ ತಂದೆಯು ಇಲ್ಲಿರುವನು. ಇವನನ್ನು ನೀನು ಕೊಂಡುಹೋಗು. ಭಗವಂತ! ನೀನು ಸರ್ವಾಂತರ್ಯಾಮಿಯೂ, ಸರ್ವಸಾಕ್ಷಿಯೂ ಆಗಿರುವೆ. ವಿಶ್ವಮೋಹನ ಕೃಷ್ಣಾ! ಆದಕ್ಕಾಗಿ ನೀನು ದಾಸನಾದ ನನ್ನ ಮೇಲೆ ಕೃಪೆದೋರು. ॥ ೮ ॥

*ಶ್ರೀಶುಕ ಉವಾಚ*

ಏವಂ ಪ್ರಸಾದಿತಃ ಕೃಷ್ಣೋ ಭಗವಾನೀಶ್ವರೇಶ್ವರಃ ।
ಆದಾಯಾಗಾತ್ ಸ್ವಪಿತರಂ ಬಂಧೂನಾಂ ಚಾವಹನ್ಮುದಮ್ ॥ ೯ ॥

ನಂದಸ್ತ್ವತೀಂದ್ರಿಯಂ ದೃಷ್ಟ್ವಾ ಲೋಕಪಾಲಮಹೋದಯಮ್ ।
ಕೃಷ್ಣೇ ಚ ಸನ್ನತಿಂ ತೇಷಾಂ ಜ್ಞಾತಿಭ್ಯೋ ವಿಸ್ಮಿತೋಽಬ್ರವೀತ್ ॥ ೧೦ ॥

ತೇ ತ್ವೌತ್ಸುಕ್ಯಧಿಯೋ ರಾಜನ್ಮತ್ವಾ ಗೋಪಾಸ್ತಮೀಶ್ವರಮ್ ।
ಅಪಿ ನಃ ಸ್ವಗತಿಂ ಸೂಕ್ಷ್ಮಾಮುಪಾಧಾಸ್ಯದಧೀಶ್ವರಃ ॥ ೧೧ ॥

ಇತಿ ಸ್ವಾನಾಂ ಸ ಭಗವಾನ್ವಿಜ್ಞಾಯಾಖಿಲದೃಕ್ ಸ್ವಯಮ್ ।
ಸಂಕಲ್ಪಸಿದ್ಧಯೇ ತೇಷಾಂ ಕೃಪಯೈತದಚಿಂತಯತ್ ॥ ೧೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಬ್ರಹ್ಮಾದಿಗಳಿಗೂ ಈಶ್ವರನಾದ ಭಗವಾನ್ ಶ್ರೀಕೃಷ್ಣನನ್ನು ಲೋಕಪಾಲ ವರುಣನು ಹೀಗೆ ಸ್ತುತಿಸಿ ಪ್ರಸನ್ನಗೊಳಿಸಿದನು. ಆನಂತರ ಭಗವಂತನು ತನ್ನ ತಂದೆಯಾದ ನಂದರಾಜನನ್ನು ಕರೆದುಕೊಂಡು ವ್ರಜಕ್ಕೆ ಬಂದು ಬಂಧುಗಳೆಲ್ಲರನ್ನು ಆನಂದಗೊಳಿಸಿದನು. ॥ ೯ ॥ ಲೋಕಪಾಲಕನಾದ ವರುಣನ ಇಂದ್ರಿಯಾತೀತವಾದ ಐಶ್ವರ್ಯವನ್ನೂ, ಸುಖಸಂಪತ್ತುಗಳನ್ನೂ, ತನ್ನ ಮಗನಾದ ಶ್ರೀಕೃಷ್ಣನಿಗೆ ಅಲ್ಲಿಯ ನಿವಾಸಿಗಳು ನಮಸ್ಕರಿಸಿದ್ದನ್ನೂ ಕಂಡ ನಂದಗೋಪನು ಆಶ್ಚರ್ಯಚಕಿತನಾಗಿ, ತನ್ನ ಬಂಧುಗಳಿಗೆ ತಾನು ಕಂಡದ್ದನ್ನು ವಿವರಿಸಿ ಹೇಳಿದನು. ॥ ೧೦ ॥ ಪರೀಕ್ಷಿತನೇ! ಇದನ್ನು ಕೇಳಿದ ಗೋಪರು ಶ್ರೀಕೃಷ್ಣನನ್ನು ಸರ್ವೇಶ್ವರನೆಂದೇ ನಿಶ್ಚಯಿಸಿದರು. ತಮಗೂ ಕೂಡ ಭಕ್ತಿಪ್ರೇಮಿಯಾದ, ಜಗದೀಶ್ವರನಾದ ಶ್ರೀಕೃಷ್ಣನು ಅವನ ಅನನ್ಯ ಭಕ್ತರಿಗೆ ಮಾತ್ರವೇ ಪ್ರವೇಶಿಸಲು ಸಾಧ್ಯವಾದ ಮಾಯಾತೀತವಾದ ತನ್ನ ಪರಮಧಾಮವನ್ನು ತೋರಿಸಿಯಾನೆಂಬ ಉತ್ಸುಕತೆ ಉಂಟಾಯಿತು. ॥ ೧೧ ॥ ಪರೀಕ್ಷಿತನೇ! ಸರ್ವದರ್ಶಿಯಾದ ಭಗವಾನ್ ಶ್ರೀಕೃಷ್ಣನಿಗೆ ಗೋಪಾಲಕರ ಆಶಯವು ತಿಳಿದುಹೋಯಿತು. ದಯಾಮಯನಾದ ಶ್ರೀಕೃಷ್ಣನು ತನ್ನ ಪ್ರಿಯಭಕ್ತರ ಸಂಕಲ್ಪವನ್ನು ಹೇಗೆ ಈಡೇರಿಸುವುದೆಂದು ಯೋಚಿಸತೊಡಗಿದನು. ॥ ೧೨ ॥

**ಜನೋ ವೈ ಲೋಕ ಏತಸ್ಮಿನ್ನವಿದ್ಯಾಕಾಮಕರ್ಮಭಿಃ ।**
**ಉಚ್ಚಾವಚಾಸು ಗತಿಷು ನ ವೇದ ಸ್ವಾಂ ಗತಿಂ ಭ್ರಮನ್ ॥ ೧೩ ॥**

ಈ ಪ್ರಪಂಚದಲ್ಲಿ ಜೀವರು ಅಜ್ಞಾನವಶದಿಂದ ದೇಹವನ್ನೇ ಆತ್ಮನೆಂದು ಭಾವಿಸಿಕೊಂಡು ಬಗೆ-ಬಗೆಯ ಕಾಮನೆಗಳನ್ನಿಟ್ಟು ಕೊಂಡು ಅವುಗಳ ಪ್ರಾಪ್ತಿಗಾಗಿ ನಾನಾ ವಿಧವಾದ ಕರ್ಮಗಳನ್ನು ಮಾಡುತ್ತಾ ಇರುತ್ತಾರೆ. ಆ ಕರ್ಮಗಳ ಫಲರೂಪವಾಗಿ ದೇವ ಮನುಷ್ಯ-ಪಶು-ಪಕ್ಷಿ ಮೊದಲಾದ ಉಚ್ಚ-ನೀಚ ಯೋನಿಗಳಲ್ಲಿ ಅಲೆಯುತ್ತಾ, ತಮ್ಮ ನಿಜವಾದ ಆತ್ಮಸ್ವರೂಪದ ಗತಿಯನ್ನು ತಿಳಿಯುವುದೇ ಇಲ್ಲ. ॥ ೧೩ ॥

**ಇತಿ ಸಂಚಿಂತ್ಯ ಭಗವಾನ್ಮಹಾಕಾರುಣಿಕೋ ಹರಿಃ ।**
**ದರ್ಶಯಾಮಾಸ ಲೋಕಂ ಸ್ವಂ ಗೋಪಾನಾಂ ತಮಸಃ ಪರಮ್ ॥ ೧೪ ॥**

ಹೀಗೆ ಯೋಚಿಸಿದ ಪರಮ ಕಾರುಣಿಕನಾದ ಶ್ರೀಹರಿಯು ತನ್ನ ಪ್ರಿಯಭಕ್ತರಾದ ಗೋಪರಿಗೆ ಮಾಯಾಂಧಕಾರದಿಂದ ಅತೀತವಾದ ತನ್ನ ದಿವ್ಯ ಪರಂಧಾಮವನ್ನು ತೋರಿಸಿದನು. ॥ ೧೪ ॥

**ಸತ್ಯಂ ಜ್ಞಾನಮನಂತಂ ಯದ್ಬ್ರಹ್ಮ ಜ್ಯೋತಿಃ ಸನಾತನಮ್ ।**
**ಯದ್ಧಿ ಪಶ್ಯಂತಿ ಮುನಯೋ ಗುಣಾಪಾಯೇ ಸಮಾಹಿತಾಃ ॥ ೧೫ ॥**

ಭಗವಂತನು ಮೊಟ್ಟಮೊದಲಿಗೆ ಸಮಾಧಿನಿಷ್ಠರಾದ, ಗುಣಾತೀತರಾದ ಮಹಾಯೋಗಿಗಳು ತಮ್ಮ ಹೃತ್ಕಮಲದಲ್ಲಿ ಸತ್ಯಸ್ವರೂಪನೂ, ಜ್ಞಾನಸ್ವರೂಪನೂ, ಅನಂತನೂ, ಸನಾತನನೂ ಆದ ಪರಂಜ್ಯೋತಿಯನ್ನು ಕಂಡುಕೊಳ್ಳುವರೋ, ಅಂತಹ ದಿವ್ಯ ಜ್ಯೋತಿಸ್ಸ್ವರೂಪನಾದ ಬ್ರಹ್ಮನ ಸಾಕ್ಷಾತ್ಕಾರವನ್ನು ಗೋಪರಿಗೆ ಮಾಡಿಸಿದನು. ॥ ೧೫ ॥

**ತೇ ತು ಬ್ರಹ್ಮಹ್ರದಂ ನೀತಾ ಮಗ್ನಾಃ ಕೃಷ್ಣೇನ ಚೋದ್ಧೃತಾಃ ।**
**ದದೃಶುರ್ಬ್ರಹ್ಮಣೋ ಲೋಕಂ ಯತ್ರಾಕ್ರೂರೋಽಧ್ಯಗಾತ್ಪುರಾ ॥ ೧೬ ॥**

ತಾನು ಮುಂದೆ ಅಕ್ರೂರನಿಗೆ ತನ್ನ ನಿಜರೂಪವನ್ನು ತೋರಿಸಲಿರುವ ಬ್ರಹ್ಮಹ್ರದವೆಂಬ ದಿವ್ಯ ಜಲಾಶಯಕ್ಕೆ ಶ್ರೀಕೃಷ್ಣನು ಗೋಪರೆಲ್ಲರನ್ನು ಕರೆದೊಯ್ದು ಅವರೆಲ್ಲರನ್ನೂ ಅಲ್ಲಿ ಮುಳುಗಿಸಿ ಅವರೆಲ್ಲರೂ ಬ್ರಹ್ಮಾನಂದದಲ್ಲಿ ಮೈಮರೆತು ಹೋಗಲು, ಅವರನ್ನು ಹೊರಕ್ಕೆ ತಂದು ಎಚ್ಚರಿಸಿ ಭಗವಂತನು ತನ್ನ ಪರಮಧಾಮದ ದರ್ಶನವನ್ನು ಮಾಡಿಸಿದನು. ॥ ೧೬ ॥

**ನಂದಾದಯಸ್ತು ತಂ ದೃಷ್ಟ್ವಾ ಪರಮಾನಂದನಿರ್ವೃತಾಃ ।**
**ಕೃಷ್ಣಂ ಚ ತತ್ರಚ್ಛಂದೋಭಿಃ ಸ್ತೂಯಮಾನಂ ಸುವಿಸ್ಮಿತಾಃ ॥ ೧೭ ॥**

ಭಗವತ್ಸ್ವರೂಪ ಆ ದಿವ್ಯಲೋಕವನ್ನು ನೋಡಿ ನಂದಗೋಪನೇ ಮುಂತಾದ ಗೋಪರು ಪರಮಾನಂದ ಭರಿತರಾದರು. ಅಲ್ಲಿ ಸಕಲ ವೇದಗಳು ಮೂರ್ತಿಮಂತರಾಗಿ ಭಗವಾನ್ ಶ್ರೀಕೃಷ್ಣನನ್ನು ಸ್ತುತಿಸುತ್ತಿರುವುದನ್ನು ನೋಡಿ ಅವರೆಲ್ಲರೂ ಪರಮವಿಸ್ಮಿತರಾದರು. ॥ ೧೭ ॥

ಇಪ್ಪತ್ತೆಂಟನೆಯ ಅಧ್ಯಾಯವು ಮುಗಿಯಿತು. ॥ ೨೮ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇಽಷ್ಟಾವಿಂಶೋಽಧ್ಯಾಯಃ ॥ ೨೮ ॥

# ಇಪ್ಪತ್ತೊಂಭತ್ತನೆಯ ಅಧ್ಯಾಯ

## ರಾಸಲೀಲೆಯ ಪ್ರಾರಂಭ

*ಶ್ರೀಶುಕ ಉವಾಚ*

**ಭಗವಾನಪಿ ತಾ ರಾತ್ರೀಃ ಶರದೋತ್ಫುಲ್ಲಮಲ್ಲಿಕಾಃ ।**
**ವೀಕ್ಷ್ಯ ರಂತುಂ ಮನಶ್ಚಕ್ರೇ ಯೋಗಮಾಯಾಮುಪಾಶ್ರಿತಃ ॥ ೧ ॥**

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಎಲೈ ಪರೀಕ್ಷಿತನೇ! ಶ್ರೀಕೃಷ್ಣನು ಭಗವಂತನೇ ಆಗಿದ್ದರೂ ಅರಳಿದ ಮಲ್ಲಿಗೆಯ ಹೂವುಗಳಿಂದ ಘಮ-ಘಮಿಸುತ್ತಿದ್ದ ಶರತ್ಕಾಲದ ರಾತ್ರಿಯನ್ನು ಕಂಡು ಯೋಗಮಾಯೆಯನ್ನು ಆಶ್ರಯಿಸಿ ಗೋಪಿಕೆಯರೊಡನೆ ರಸಮಯ ರಾಸಕ್ರೀಡೆಯನ್ನಾಡಲು ಬಯಸಿದನು. ॥ ೧ ॥

ತದೋಡುರಾಜಃ ಕಕುಭಃ ಕರೈರ್ಮುಖಂ
ಪ್ರಾಚ್ಯಾ ವಿಲಿಂಪನ್ನರುಣೇನ ಶಂತಮೈಃ ।
ಸ ಚರ್ಷಣೀನಾಮುದಗಾಚ್ಛುಚೋ ಮೃಜನ್
ಪ್ರಿಯಃ ಪ್ರಿಯಾಯಾ ಇವ ದೀರ್ಘದರ್ಶನಃ ॥ ೨ ॥

ಬಹು ಕಾಲಾನಂತರ ಆಗಮಿಸಿದ ಪತಿಯು ತನ್ನ ಪತ್ನಿಯ ಸುಂದರವಾದ ಮುಖವನ್ನು ಕುಂಕುಮ ಕೇಸರಿಯಿಂದ ಅಲಂಕರಿಸುವಂತೆ – ಶ್ರೀಕೃಷ್ಣನು ರಾಸಕ್ರೀಡೆಯನ್ನು ಆಡಬೇಕೆಂದು ಸಂಕಲ್ಪಿಸಿದೊಡನೆಯೇ, ಚಂದ್ರನು ತನ್ನ ಸುಖಕರವಾದ ಕಿರಣಗಳ ರೂಪವಾದ ಕೈಗಳಿಂದ ಪೂರ್ವದಿಕ್ಕೆಂಬ ಪ್ರೇಯಸಿಯ ಮುಖ ಮಂಡಲವನ್ನು ಕೆಂಪುಬಣ್ಣವೆಂಬ ಕುಂಕುಮಕೇಸರಿಯಿಂದ ಲೇಪಿಸುತ್ತಾ ಹಗಲಿನ ಬಿಸಿಲಿನಿಂದ ಸೊರಗಿಹೋಗಿದ್ದ ಸಮಸ್ತ ಚರಾಚರ ಪ್ರಾಣಿಗಳ ಸಂತಾಪವನ್ನು ದೂರಗೊಳಿಸಿದನು. ॥ ೨ ॥

ದೃಷ್ಟ್ವಾ ಕುಮುದ್ವಂತಮಖಂಡಮಂಡಲಂ
ರಮಾನನಾಭಂ ನವಕುಂಕುಮಾರುಣಮ್ ।
ವನಂ ಚ ತತ್ಕೋಮಲಗೋಭಿರಂಜಿತಂ
ಜಗೌ ಕಲಂ ವಾಮದೃಶಾಂ ಮನೋಹರಮ್ ॥ ೩ ॥

ಮನಸ್ಸಿಗೆ ಆಹ್ಲಾದವನ್ನುಂಟುಮಾಡುವ ಚಂದ್ರನು ಮೂಡಲ ದಿಕ್ಕಿನಲ್ಲಿ ಮೂಡಿಬಂದ ನಂತರ ಕುಂಕುಮ ಕೇಸರಿಯ ಲೇಪನ ದಿಂದ ಕೆಂಪಾದ ರಮಾದೇವಿಯ ಮುಖಮಂಡಲದಂತೆ ಎಣ್ಣೆಗೆಂಪಾಗಿದ್ದ ಚಂದ್ರಮಂಡಲವನ್ನೂ, ಆ ಶರಚ್ಚಂದ್ರನ ಕಿರಣ ಗಳಿಂದ ನಯನಾಭಿರಾಮನಾಗಿ ಬೆಳಗುತ್ತಿದ್ದ ವೃಂದಾವನವನ್ನು ನೋಡಿದ ಶ್ರೀಕೃಷ್ಣನು ಗೋಪಿಯರ ಮನಸ್ಸನ್ನು ಅಪಹರಿಸುವ ಸುಮಧುರವಾದ ವೇಣುಗಾನವನ್ನು ನುಡಿಸಿದನು. ॥ ೩ ॥

ನಿಶಮ್ಯ ಗೀತಂ ತದನಂಗವರ್ಧನಂ
ವ್ರಜಸ್ತ್ರಿಯಃ ಕೃಷ್ಣಗೃಹೀತಮಾನಸಾಃ ।
ಆಜಗ್ಮುರನ್ಯೋನ್ಯಮಲಕ್ಷಿತೋದ್ಯಮಾಃ
ಸ ಯತ್ರ ಕಾಂತೋ ಜವಲೋಲಕುಂಡಲಾಃ ॥ ೪ ॥

ಭಗವಂತನ ಈ ವೇಣುಗಾನವು ಭಗವತ್ ಪ್ರೇಮವನ್ನು, ಅವನನ್ನು ಸೇರುವ ಅಭಿಲಾಷೆಯನ್ನು ಅತ್ಯಂತ ಹೆಚ್ಚಿಸುವುದಾಗಿದೆ. ಶ್ಯಾಮ ಸುಂದರನು ಮೊದಲಿಂದಲೇ ಗೋಪಿಯರ ಮನಸ್ಸನ್ನು ತನ್ನ ವಶವಾಗಿಸಿಕೊಂಡಿದ್ದನು. ಈಗಲಾದರೋ ಅವರ ಮನಸ್ಸಿನ ಸಮಸ್ತ ವಸ್ತುಗಳನ್ನು – ಭಯ, ಸಂಕೋಚ, ಧೈರ್ಯ, ಮರ್ಯಾದೆ ಮುಂತಾದ ವೃತ್ತಿಗಳನ್ನು ಕಸಿದುಕೊಂಡಿದ್ದನು. ವೇಣುಗಾನವನ್ನು ಕೇಳುತ್ತಲೇ ಅವರ ಸ್ಥಿತಿ ವಿಚಿತ್ರವಾಗಿತ್ತು. ಶ್ರೀಕೃಷ್ಣನನ್ನು ಪತಿರೂಪ ದಿಂದ ಪಡೆಯಲು ಎಲ್ಲರೂ ಸೇರಿ ಸಾಧನೆ ಮಾಡಿದ್ದ ಗೋಪಿ ಯರು ಈಗ ಒಬ್ಬಳು ಮತ್ತೊಬ್ಬಳಿಗೆ ತಿಳಿಸದೆಯೇ, ಶ್ರೀಕೃಷ್ಣನ ಬಳಿಗೆ ಧಾವಿಸಿದರು. ಪರೀಕ್ಷಿತನೇ! ಅವರು ಲಗುಬಗೆಯಿಂದ ಹೋಗುವಾಗ ಅವರು ಧರಿಸಿದ್ದ ಕರ್ಣಕುಂಡಲಗಳು ತಕ-ತಕನೆ ಕುಣಿಯುತ್ತಿದ್ದವು. ॥ ೪ ॥

ದುಹಂತ್ಯೋಽಭಿಯಯುಃ ಕಾಶ್ಚಿದ್
ದೋಹಂ ಹಿತ್ವಾ ಸಮುತ್ಸುಕಾಃ ।
ಪಯೋಽಧಿಶ್ರಿತ್ಯ ಸಂಯಾವ-
ಮನುದ್ವಾಸ್ಯಾಪರಾ ಯಯುಃ ॥ ೫ ॥

ಶ್ರೀಕೃಷ್ಣನ ಮನೋಹರವಾದ ವಂಶೀಧ್ವನಿಯನ್ನು ಕೇಳಿದ ಗೋಪಿಯರು ತಮ್ಮನ್ನು ತಾವೇ ಮರೆತುಬಿಟ್ಟರು. ಹಾಲು ಕರೆಯುತ್ತಿದ್ದವಳು ಅದನ್ನು ಬಿಟ್ಟು ಉತ್ಸುಕತೆಯಿಂದ ಹೊರಟುಬಿಟ್ಟಳು. ಒಲೆಯಮೇಲೆ ಹಾಲು ಕಾಯಿಸುತ್ತಿದ್ದವಳು ಹಾಲು ಉಕ್ಕಿ ಬಂದರೂ ಹಾಗೆಯೇ ಬಿಟ್ಟು ಹೊರಟಳು. ಅನ್ನಮಾಡುತ್ತಿದ್ದವಳು ಅದನ್ನು ಒಲೆಯಿಂದ ಇಳಿಸದೆಯೇ ಕೃಷ್ಣನ ಬಳಿಗೆ ಓಡಿದಳು. ॥ ೫ ॥

ಪರಿವೇಷಯಂತ್ಯಸ್ತದ್ಧಿತ್ವಾ ಪಾಯಯಂತ್ಯಃ ಶಿಶೂನ್ಪಯಃ ।
ಶುಶ್ರೂಷಂತ್ಯಃ ಪತೀನ್ಕಾಶ್ಚಿದಶ್ನಂತ್ಯೋಽಪಾಸ್ಯ ಭೋಜನಮ್ ॥ ೬ ॥

ಊಟ ಬಡಿಸುತ್ತಿದ್ದವಳು ಅದನ್ನು ಅಲ್ಲೆ ಬಿಟ್ಟು ಹೊರಟಳು. ಮಗುವಿಗೆ ಹಾಲು ಕುಡಿಸುತ್ತಿದ್ದವಳು ಮಗುವನ್ನು ಅಲ್ಲೇ ಬಿಟ್ಟು, ಪತಿ ಸೇವೆಯಲ್ಲಿ ತತ್ಪರಳಾಗಿದ್ದವಳು ಪತಿಯನ್ನು ಬಿಟ್ಟು, ಕೆಲವರು ಊಟಮಾಡುತ್ತಿದ್ದವರು ಊಟವನ್ನು ಬಿಟ್ಟು ಪ್ರಿಯತಮನಾದ ಶ್ರೀಕೃಷ್ಣನ ಬಳಿಗೆ ಧಾವಿಸಿದರು. ॥ ೬ ॥

ಲಿಂಪಂತ್ಯಃ ಪ್ರಮೃಜಂತ್ಯೋಽನ್ಯಾ ಅಂಜಂತ್ಯಃ ಕಾಶ್ಚ ಲೋಚನೇ ।
ವ್ಯತ್ಯಸ್ತವಸ್ತ್ರಾಭರಣಾಃ ಕಾಶ್ಚಿತ್ ಕೃಷ್ಣಾಂತಿಕಂ ಯಯುಃ ॥ ೭ ॥

ಕೆಲವರು ಅಂಗರಾಗವನ್ನು ಶರೀರಕ್ಕೆ ಪೂಸಿಕೊಳ್ಳುತ್ತಿದ್ದರು, ಕೆಲವರು ಕಣ್ಣಿಗೆ ಕಾಡಿಗೆ ಹಚ್ಚಿಕೊಳ್ಳುತ್ತಿದ್ದರು. ಕೆಲವರು ಅವಸರದಲ್ಲಿ ಸೀರೆಗಳನ್ನು, ಆಭರಣಗಳನ್ನು ತಲೆಕೆಳಕಾಗಿ ಧರಿಸಿಕೊಂಡು ಹಾಗೆಯೇ ಶ್ರೀಕೃಷ್ಣನ ಬಳಿಗೆ ಓಡಿದರು. ॥ ೭ ॥

ತಾ ವಾರ್ಯಮಾಣಾಃ ಪತಿಭಿಃ ಪಿತೃಭಿರ್ಭ್ರಾತೃಬಂಧುಭಿಃ ।
ಗೋವಿಂದಾಪಹೃತಾತ್ಮಾನೋ ನ ನ್ಯವರ್ತಂತ ಮೋಹಿತಾಃ ॥ ೮ ॥

ಹೀಗೆ ಮನೆಯಿಂದ ಹೊರಟ ಗೋಪಿಯರನ್ನು ತಂದೆಯಂದಿರು, ಪತಿಗಳು, ಮೈದುನರು, ಬಂಧುಗಳು ತಡೆದೂ ಪ್ರಯೋಜನವಾಗಲಿಲ್ಲ. ಅವರ ಮಂಗಲಮಯ ಪ್ರೇಮಯಾತ್ರೆಯಲ್ಲಿ, ವಿಘ್ನವನ್ನೊಡ್ಡಿದರೂ ಅವರು ಅದನ್ನು ಲೆಕ್ಕಿಸಲೇ ಇಲ್ಲ. ಏಕೆಂದರೆ, ವಿಶ್ವವಿಮೋಹನ ಶ್ರೀಕೃಷ್ಣನು ಅವರ ಮನಸ್ಸು, ಪ್ರಾಣ, ಆತ್ಮ ಎಲ್ಲವನ್ನು ಅಪಹರಿಸಿ ಬಿಟ್ಟಿದ್ದನು. ॥ ೮ ॥ ಪರೀಕ್ಷಿತನೇ! ಆ ಸಮಯದಲ್ಲಿ ಕೆಲವು ಗೋಪಿಯರು ಮನೆಯೊಳಗೆ ಇದ್ದು, ಹೊರಗೆ ಹೋಗಲು ಸಾಧ್ಯವಾಗದವರು ತಮ್ಮ ಕಂಗಳನ್ನು ಮುಚ್ಚಿ ಅತ್ಯಂತ ತನ್ಮಯತೆಯಿಂದ ಶ್ರೀಕೃಷ್ಣನ ಸೌಂದರ್ಯ, ಮಾಧುರ್ಯ ಹಾಗೂ ಅವನ ಲೀಲೆಗಳನ್ನು ಚಿಂತಿಸುತ್ತಾ ಧ್ಯಾನಮಗ್ನರಾದರು. ॥ ೯ ॥ ದುಃಸಹವಾದ, ತೀವ್ರವಾದ ವಿರಹವೇದನೆಯ ಅನುಭವದಿಂದಾಗಿ ಆ ಗೋಪಿಕೆಯರಲ್ಲಿದ್ದ ಪಾಪವು ನಿರಸನವಾಯಿತು. ಅನವರತವಾದ ಧ್ಯಾನದಿಂದಾಗಿ ಹೃತ್ಕಮಲದಲ್ಲಿ ಕಾಣಿಸಿಕೊಂಡ ಮನೋಹರವಾದ ಶ್ರೀಕೃಷ್ಣನ ಗಾಢಾಲಿಂಗನದ ಸುಖದಿಂದಾಗಿ ಅವರಲ್ಲಿದ್ದ ಪುಣ್ಯವೂ ಕೂಡ ಕ್ಷೀಣಿಸಿತು. ॥ ೧೦ ॥ ಪರೀಕ್ಷಿತನೇ! ಆ ಸಮಯದಲ್ಲಿ ಅವರಲ್ಲಿ ಜಾರಭಾವವಿದ್ದರೂ ಅವರು ದೇವ ದೇವನಾದ ನಿರ್ವಿಕಾರನಾದ ಪರಮಾತ್ಮನನ್ನೇ ಆಲಿಂಗಿಸಿಕೊಂಡ ಕಾರಣ, ಪಾಪ-ಪುಣ್ಯಗಳ ಪರಿಣಾಮದಿಂದ ಪ್ರಾಪ್ತವಾದ ಗುಣಮಯ ದೇಹವನ್ನು ತೊರೆದು ಅಪ್ರಾಕೃತವಾದ ಶರೀರಗಳನ್ನು ಪಡೆದುಕೊಂಡರು. ಅಥವಾ ಶ್ರೀಕೃಷ್ಣನಲ್ಲೇ ಸೇರಿ ಹೋದರು. ಭಗವಂತನ ದಿವ್ಯಾಲಿಂಗನವನ್ನು ಪಡೆದುಕೊಂಡೊಡನೇ ಅವರ ಕರ್ಮಬಂಧನಗಳೆಲ್ಲವೂ ಕಳಚಿ ಬಿದ್ದು ಹೋಗಿದ್ದುವು. ॥ ೧೧ ॥

ಅಂತರ್ಗೃಹಗತಾಃ ಕಾಶ್ಚಿದ್ಗೋಪ್ಯೋಽಲಬ್ಧವಿನಿರ್ಗಮಾಃ ।
ಕೃಷ್ಣಂ ತದ್ಭಾವನಾಯುಕ್ತಾ ದಧ್ಯುರ್ಮೀಲಿತಲೋಚನಾಃ ॥ ೯ ॥

ದುಃಸಹಪ್ರೇಷ್ಠವಿರಹತೀವ್ರತಾಪಧುತಾಶುಭಾಃ ।
ಧ್ಯಾನಪ್ರಾಪ್ತಾಚ್ಯುತಾಶ್ಲೇಷನಿರ್ವೃತ್ಯಾ ಕ್ಷೀಣಮಂಗಲಾಃ ॥ ೧೦ ॥

ತಮೇವ ಪರಮಾತ್ಮಾನಂ ಜಾರಬುದ್ಧ್ಯಾಪಿ ಸಂಗತಾಃ ।
ಜಹುರ್ಗುಣಮಯಂ ದೇಹಂ ಸದ್ಯಃ ಪ್ರಕ್ಷೀಣಬಂಧನಾಃ ॥ ೧೧ ॥

ರಾಜೋವಾಚ

ಕೃಷ್ಣಂ ವಿದುಃ ಪರಂ ಕಾಂತಂ ನ ತು ಬ್ರಹ್ಮತಯಾ ಮುನೇ ।
ಗುಣಪ್ರವಾಹೋಪರಮಸ್ತಾಸಾಂ ಗುಣಧಿಯಾಂ ಕಥಮ್ ॥ ೧೨ ॥

**ಪರೀಕ್ಷಿದ್ರಾಜನು ಕೇಳಿದನು** - ಶುಕಮುನಿಗಳೇ! ಗೋಪಿಕೆಯರಾದರೋ ಭಗವಾನ್ ಶ್ರೀಕೃಷ್ಣನನ್ನು ಕೇವಲ ತಮ್ಮ ಪರಮ ಪ್ರಿಯತಮನೆಂದೇ ಭಾವಿಸಿದ್ದರು. ಅವನಲ್ಲಿ ಅವರಿಗೆ ಬ್ರಹ್ಮಭಾವವೇನೋ ಇರಲಿಲ್ಲ. ಹೀಗೆ ಅವರ ದೃಷ್ಟಿಯು ಪ್ರಾಕೃತ ಗುಣಗಳಲ್ಲಿಯೇ ಆಸಕ್ತವಾದಂತೆ ಕಾಣುತ್ತಿತ್ತು. ಇಂತಹ ಸ್ಥಿತಿಯಲ್ಲಿ ಅವರಿಗೆ ಗುಣ ಪ್ರವಾಹರೂಪವಾದ ಈ ಸಂಸಾರದ ನಿವೃತ್ತಿ ಹೇಗೆ ಸಂಭವಿಸಿತು? ॥ ೧೨ ॥

ಶ್ರೀಶುಕ ಉವಾಚ

ಉಕ್ತಂ ಪುರಸ್ತಾದೇತತ್ತೇ ಚೈದ್ಯಃ ಸಿದ್ಧಿಂ ಯಥಾ ಗತಃ ।
ದ್ವಿಷನ್ನಪಿ ಹೃಷೀಕೇಶಂ ಕಿಮುತಾಧೋಕ್ಷಜಪ್ರಿಯಾಃ ॥ ೧೩ ॥

**ಶ್ರೀಶುಕಮಹಾಮುನಿಗಳು ಹೇಳಿದರು** - ಪರೀಕ್ಷಿತನೇ! ಚೇದಿರಾಜನಾದ ಶಿಶುಪಾಲನು ಹೃಷೀಕೇಶನನ್ನು ದ್ವೇಷಿಸುತ್ತಿದ್ದರೂ ದ್ವೇಷರೂಪವಾದ ಶ್ರೀಕೃಷ್ಣತಾದಾತ್ಮ್ಯದಿಂದ ಅವನು ಪ್ರಾಕೃತ ಶರೀರವನ್ನು ತೊರೆದು ಅಪ್ರಾಕೃತ ಶರೀರವನ್ನು ಪಡೆದು ಭಗವಂತನ ಪಾರ್ಷದನಾದನೆಂದು ನಾನು ಮೊದಲೇ ನಿನಗೆ ಹೇಳಿಬಿಟ್ಟಿದ್ದೇನೆ. ಹೀಗಿರುವಾಗ ನಿರಂತರವಾಗಿ ಅನಿರ್ದುಷ್ಟವಾದ ಪ್ರೇಮದಿಂದ ಶ್ರೀಕೃಷ್ಣನನ್ನು ಆರಾಧಿಸುತ್ತಿದ್ದ ಗೋಪಿಯರ ಕುರಿತು ಹೇಳುವುದೇನಿದೇ? ॥ ೧೩ ॥ ವಾಸ್ತವವಾಗಿ ಭಗವಂತನು ವೃದ್ಧಿ-ವಿನಾಶ, ಪ್ರಮಾಣ-ಪ್ರಮೇಯ, ಗುಣ-ಗುಣಿ ಮುಂತಾದ ಪ್ರಕೃತಿ ಸಂಬಂಧೀ ಭಾವಗಳಿಂದ ರಹಿತನಾಗಿದ್ದಾನೆ. ಅವನು ಅಚಿಂತ್ಯನೂ, ಅನಂತನೂ, ಅಪ್ರಾಕೃತನೂ, ಪರಮಕಲ್ಯಾಣ ಸ್ವರೂಪನೂ, ತ್ರಿಗುಣಾತೀತನೂ ಆಗಿದ್ದು ಕಲ್ಯಾಣಗುಣಗಳಿಗೆ ಏಕಮಾತ್ರ ಆಶ್ರಯನಾಗಿದ್ದಾನೆ. ಭಗವಂತನ ಅವತಾರವೂ ಕೇವಲ ಮನುಷ್ಯರ ಕಲ್ಯಾಣ ಸಾಧನೆಗಾಗಿಯೇ ಆಗಿದೆ. ॥ ೧೪ ॥

ನೃಣಾಂ ನಿಃಶ್ರೇಯಸಾರ್ಥಾಯ ವ್ಯಕ್ತಿರ್ಭಗವತೋ ನೃಪ ।
ಅವ್ಯಯಸ್ಯಾಪ್ರಮೇಯಸ್ಯ ನಿರ್ಗುಣಸ್ಯ ಗುಣಾತ್ಮನಃ ॥ ೧೪ ॥

**ಕಾಮಂ ಕ್ರೋಧಂ ಭಯಂ ಸ್ನೇಹಮೈಕ್ಯಂ ಸೌಹೃದಮೇವ ಚ ।**
**ನಿತ್ಯಂ ಹರೌ ವಿದಧತೋ ಯಾಂತಿ ತನ್ಮಯತಾಂ ಹಿ ತೇ ॥ ೧೫ ॥**

**ನ ಚೈವಂ ವಿಸ್ಮಯಃ ಕಾರ್ಯೋ ಭವತಾ ಭಗವತ್ಯಜೇ ।**
**ಯೋಗೇಶ್ವರೇಶ್ವರೇ ಕೃಷ್ಣೇ ಯತ ಏತದ್ವಿಮುಚ್ಯತೇ ॥ ೧೬ ॥**

**ತಾ ದೃಷ್ಟ್ವಾಂತಿಕಮಾಯಾತಾ ಭಗವಾನ್ ವ್ರಜಯೋಷಿತಃ ।**
**ಅವದದ್ವದತಾಂ ಶ್ರೇಷ್ಠೋ ವಾಚಃ ಪೇಶೈರ್ವಿಮೋಹಯನ್ ॥ ೧೭ ॥**

*ಶ್ರೀಭಗವಾನುವಾಚ*

**ಸ್ವಾಗತಂ ವೋ ಮಹಾಭಾಗಾಃ ಪ್ರಿಯಂ ಕಿಂ ಕರವಾಣಿ ವಃ ।**
**ವ್ರಜಸ್ಯಾನಾಮಯಂ ಕಚ್ಚಿದ್ ಬ್ರೂತಾಗಮನಕಾರಣಮ್ ॥ ೧೮ ॥**

**ರಜನ್ಯೇಷಾ ಘೋರರೂಪಾ ಘೋರಸತ್ತ್ವನಿಷೇವಿತಾ ।**
**ಪ್ರತಿಯಾತ ವ್ರಜಂ ನೇಹ ಸ್ಥೇಯಂ ಸ್ತ್ರೀಭಿಃ ಸುಮಧ್ಯಮಾಃ ॥ ೧೯ ॥**

**ಮಾತರಃ ಪಿತರಃ ಪುತ್ರಾ ಭ್ರಾತರಃ ಪತಯಶ್ಚ ವಃ ।**
**ವಿಚಿನ್ವಂತಿ ಹ್ಯಪಶ್ಯಂತೋ ಮಾ ಕೃಢ್ವಂ ಬಂಧುಸಾಧ್ವಸಮ್ ॥ ೨೦ ॥**

**ದೃಷ್ಟಂ ವನಂ ಕುಸುಮಿತಂ ರಾಕೇಶಕರರಂಜಿತಮ್ ।**
**ಯಮುನಾನಿಲಲೀಲೈಜತ್ತರುಪಲ್ಲವಶೋಭಿತಮ್ ॥ ೨೧ ॥**

**ತದ್ಯಾತ ಮಾ ಚಿರಂ ಗೋಷ್ಠಂ ಶುಶ್ರೂಷಧ್ವಂ ಪತೀನ್ಸತೀಃ ।**
**ಕ್ರಂದಂತಿ ವತ್ಸಾ ಬಾಲಾಶ್ಚ ತಾನ್ಪಾಯಯತ ದುಹ್ಯತ ॥ ೨೨ ॥**

ಅದಕ್ಕಾಗಿ ಭಗವಂತನೊಂದಿಗೆ ಕೇವಲ ಸಂಬಂಧ ಉಂಟಾಗ ಬೇಕು. ಆ ಸಂಬಂಧವು ಬೇಕಾದರೆ ಕಾಮದಿಂದಾಗಲೀ, ಕ್ರೋಧ ದಿಂದಾಗಲೀ, ಭಯದಿಂದಾಗಲೀ, ಸ್ನೇಹದಿಂದಾಗಲಿ, ಸೌಹಾರ್ದದ್ದಾಗಲಿ. ಬಯಸಿದ ಯಾವುದೇ ಭಾವದಿಂದ ಭಗವಂತನಲ್ಲಿ ನಿತ್ಯ-ನಿರಂತರ ತಮ್ಮ ವೃತ್ತಿಗಳನ್ನು ನೆಲೆಗೊಳಿಸಿದಾಗ ಅವರು ಭಗವಂತನಲ್ಲಿ ಒಂದಾಗುತ್ತಾರೆ. ಇದರಿಂದ ವೃತ್ತಿಗಳು ಭಗವನ್ಮಯವಾಗಿ ಹೋಗುತ್ತವೆ ಮತ್ತು ಆ ಜೀವನಿಗೆ ಭಗವಂತನು ದೊರೆಯುತ್ತಾನೆ. ॥ ೧೫ ॥ ಪರೀಕ್ಷಿತನೇ ! ಪರಮಭಾಗವತನಾದ, ಭಗವದ್ರಹಸ್ಯವನ್ನು ಸಂಪೂರ್ಣವಾಗಿ ತಿಳಿದಿರುವ ಭಕ್ತಶ್ರೇಷ್ಠನಾದ ನಿನ್ನಂತಹವನು ಶ್ರೀಕೃಷ್ಣನ ಸಂಬಂಧವಾಗಿ ಹೀಗೆ ಸಂದೇಹ ಪಡ ಬಾರದು. ಯೋಗೇಶ್ವರರಿಗೂ ಈಶ್ವರನಾದ, ಅಜನ್ಮಾ ಭಗವಂತ ನಿಗೆ ಇದು ಆಶ್ಚರ್ಯದ ಮಾತಾಗಿದೆಯೇ ? ಅಯ್ಯಾ! ಅವನ ಸಂಕಲ್ಪಮಾತ್ರದಿಂದ, ಇಡೀ ಜಗತ್ತಿನ ಪರಮಕಲ್ಯಾಣವಾಗ ಬಲ್ಲದು. ॥ ೧೬ ॥ ವ್ರಜದ ಅನುಪಮ ವಿಭೂತಿಗಳಾದ ಗೋಪಿ ಯರು ತನ್ನ ಬಳಿಗೆ ಬಂದಿರುವರೆಂದು ಶ್ರೀಕೃಷ್ಣನು ನೋಡಿದಾಗ, ಅವನು ವಿನೋದದಿಂದ ತುಂಬಿದ ವಾಕ್ಚಾತುರ್ಯದಿಂದ ಅವರನ್ನು ವಿಮೋಹಗೊಳಿಸುತ್ತಾ ಇಂತೆಂದನು. ॥ ೧೭ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಮಹಾ ಭಾಗ್ಯಶಾಲಿ ಯರಾದ ಗೋಪಿಯರೇ ! ನಿಮಗೆ ಸ್ವಾಗತ ಬಯಸುತ್ತೇನೆ. ನಿಮಗೆ ಪ್ರಿಯವಾದ ಯಾವ ಕೆಲಸವನ್ನು ಮಾಡಿಕೊಡಲಿ ? ವ್ರಜದಲ್ಲಿ ಎಲ್ಲರೂ ಕುಶಲಿಗಳಾಗಿದ್ದಾರಲ್ಲ? ನಿಮ್ಮ ಆಗಮನದ ಕಾರಣ ವೇನು ? ಹೇಳಿರಿ. ॥ ೧೮ ॥ ಸುಂದರಿಯರಾದ ಗೋಪಿಯರೇ! ಇದು ಭಯಾನಕ ರಾತ್ರಿಯಾಗಿದೆ. ಭಯಂಕರವಾದ ಪ್ರಾಣಿಗಳು ಈ ಅರಣ್ಯದಲ್ಲಿ ಸಂಚರಿಸುತ್ತವೆ. ಹೀಗಿರುವಾಗ ಹೆಂಗಸರಾದ ನೀವು ಇಲ್ಲಿರುವುದು ತರವಲ್ಲ. ನೀವೆಲ್ಲರೂ ಈಗಲೇ ವ್ರಜಕ್ಕೆ ಹಿಂದಿರುಗಿರಿ. ॥ ೧೯ ॥ ನಿಮ್ಮನ್ನು ಕಾಣದೆ ನಿಮ್ಮ ತಂದೆ-ತಾಯಿ ಯರು, ಸಹೋದರರು, ಪತಿಗಳು, ಪುತ್ರರು ಎಲ್ಲರೂ ನಿಮ್ಮನ್ನು ಹುಡುಕುತ್ತಿರಬಹುದು. ಅವರಿಗೆ ಭಯವುಂಟಾಗುವಂತೆ ವರ್ತಿಸ ಬೇಡಿ. ॥ ೨೦ ॥ ನೀವು ಇಲ್ಲಿಗೆ ಬಂದು ಚಂದ್ರನ ಬೆಳದಿಂಗಳಿಂದ ಪ್ರಕಾಶಮಾನವಾಗಿ ಕಾಣುತ್ತಿರುವ ವಿಕಸಿತವಾದ ಘಮ-ಘಮಿಸುವ ಪುಷ್ಪಗಳಿಂದ ಕೂಡಿದ ವೃಂದಾವನವನ್ನು ನೋಡಿದಿರಿ. ಯಮುನೆಯ ಮೇಲಿನಿಂದ ಬೀಸಿ ಬರುವ ತಂಗಾಳಿಯಿಂದ ಅಲುಗಾಡುವ ವೃಕ್ಷ ಗಳ ತಳಿರುಗಳಿಂದ ಈ ವೃಂದಾವನದ ವನಸಿರಿಯನ್ನು ನೋಡಿ ಆನಂದಿಸಿದಿರಿ. ನಿಮ್ಮ ಆಗಮನವೇನೂ ವ್ಯರ್ಥವಾಗಲಿಲ್ಲ. ನೀವಿನ್ನು ಹೋಗಬಹುದು. ॥ ೨೧ ॥ ನೀವಿಗಲೇ ತಡಮಾಡದೆ ವ್ರಜಕ್ಕೆ ಹೊರಡಿರಿ. ಸತೀಧರ್ಮವನ್ನು ಅನುಸರಿಸಿ ನಿಮ್ಮ ಪತಿಗಳ ಸೇವೆ-ಶುಶ್ರೂಷೆ ಮಾಡಿರಿ. ಮನೆಯಲ್ಲಿ ಮಕ್ಕಳು ಹಾಲಿಗಾಗಿ ಅಳುತ್ತಿರುವರು. ಕರುಗಳೂ ಕೂಡ 'ಹಂಬಾ' ಎಂದು ಕೂಗಿ ಕೊಳ್ಳುತ್ತಿವೆ. ಕರುಗಳನ್ನು ಹಾಲುಣಲು ಬಿಟ್ಟು ಹಸುಗಳನ್ನು ಕರೆಯಿರಿ. ನಿಮ್ಮ ಮಕ್ಕಳಿಗೆ ಹಾಲುಣಿಸಿ ಮಲಗಿಸಿರಿ. ॥ ೨೨ ॥

ಅಥವಾ ಮದಭಿಸ್ನೇಹಾದ್ಭವತ್ಯೋ ಯಂತ್ರಿತಾಶಯಾಃ ।
ಆಗತಾ ಹ್ಯುಪಪನ್ನಂ ವಃ ಪ್ರೀಯಂತೇ ಮಯಿ ಜಂತವಃ ॥ ೨೩ ॥

ಭರ್ತುಃ ಶುಶ್ರೂಷಣಂ ಸ್ತ್ರೀಣಾಂ
ಪರೋ ಧರ್ಮೋ ಹ್ಯಮಾಯಯಾ ।
ತದ್ಬಂಧೂನಾಂ ಚ ಕಲ್ಯಾಣ್ಯಃ
ಪ್ರಜಾನಾಂ ಚಾನುಪೋಷಣಮ್ ॥ ೨೪ ॥

ದುಃಶೀಲೋ ದುರ್ಭಗೋ ವೃದ್ಧೋ
ಜಡೋ ರೋಗ್ಯಧನೋಽಪಿ ವಾ ।
ಪತಿಃ ಸ್ತ್ರೀಭಿರ್ನ ಹಾತವ್ಯೋ
ಲೋಕೇಪ್ಸುಭಿರಪಾತಕೀ ॥ ೨೫ ॥

ಅಸ್ವರ್ಗ್ಯಮಯಶಸ್ಯಂ ಚ ಫಲ್ಗು ಕೃಚ್ಛ್ರಂ ಭಯಾವಹಮ್ ।
ಜುಗುಪ್ಸಿತಂ ಚ ಸರ್ವತ್ರ ಔಪಪತ್ಯಂ ಕುಲಸ್ತ್ರಿಯಾಃ ॥ ೨೬ ॥

ಶ್ರವಣಾದ್ದರ್ಶನಾದ್ಧ್ಯಾನಾನ್ಮಯಿ ಭಾವೋಽನುಕೀರ್ತನಾತ್ ।
ನ ತಥಾ ಸನ್ನಿಕರ್ಷೇಣ ಪ್ರತಿಯಾತ ತತೋ ಗೃಹಾನ್ ॥ ೨೭ ॥

ಶ್ರೀಶುಕ ಉವಾಚ

ಇತಿ ವಿಪ್ರಿಯಮಾಕರ್ಣ್ಯ ಗೋಪ್ಯೋ ಗೋವಿಂದಭಾಷಿತಮ್ ।
ವಿಷಣ್ಣಾ ಭಗ್ನಸಂಕಲ್ಪಾಶ್ಚಿಂತಾಮಾಪುರ್ದುರತ್ಯಯಾಮ್ ॥ ೨೮ ॥

ಕೃತ್ವಾ ಮುಖಾನ್ಯವ ಶುಚಃ ಶ್ವಸನೇನ ಶುಷ್ಯದ್-
ಬಿಂಬಾಧರಾಣಿ ಚರಣೇನ ಭುವಂ ಲಿಖಂತ್ಯಃ ।
ಅಸ್ರೈರುಪಾತ್ತಮಷಿಭಿಃ ಕುಚಕುಂಕುಮಾನಿ
ತಸ್ಥುರ್ಮೃಜಂತ್ಯ ಉರುದುಃಖಭರಾಃ ಸ್ಮ ತೂಷ್ಣೀಮ್ ॥ ೨೯ ॥

ನನ್ನ ಮೇಲಿನ ಪ್ರೇಮದಿಂದ ಆಕರ್ಷಿಸಲ್ಪಟ್ಟವರಾಗಿ ನೀವೇನಾದರೂ ಇಲ್ಲಿಗೆ ಬಂದಿದ್ದರೆ ಅದೂ ಕೂಡ ಸಮಂಜಸವೇ ಆಗಿದೆ. ಏಕೆಂದರೆ, ಎಲ್ಲರಿಗೆ ಆತ್ಮಸ್ವರೂಪನಾದ ನನ್ನನ್ನು ಎಲ್ಲ ಪ್ರಾಣಿಗಳೂ ಸ್ವಾಭಾವಿಕವಾಗಿಯೇ ಪ್ರೀತಿಸುತ್ತವೆ. ನನ್ನನ್ನು ನೋಡಿ ಪ್ರಸನ್ನರಾಗುತ್ತವೆ. ॥ ೨೩ ॥ ಮಂಗಳಾಂಗಿಯರೇ! ನಿರ್ವಂಚನೆಯಿಂದ ಪತಿಸೇವೆ ಮಾಡುವುದು, ಬಂಧುಗಳನ್ನು ಸಮಾದರಿಸುವುದು, ಸಂತಾನದ ಪಾಲನೆ-ಪೋಷಣೆ ಮಾಡುವುದು ಸ್ತ್ರೀಯರ ಪರಮ ಧರ್ಮವಾಗಿದೆ. ॥ ೨೪ ॥ ಉತ್ತಮ ಲೋಕವನ್ನು ಪಡೆಯುವ ಅಭಿಲಾಷೆಯುಳ್ಳ ಸಾಧ್ವಿಯು ಪಾತಕಿಯಾದವನನ್ನು ಬಿಟ್ಟು ಬೇರೆ ಯಾವುದೇ ರೀತಿಯ ಪತಿಯನ್ನು ಪರಿತ್ಯಾಗಮಾಡಬಾರದು. ಅವನು ಬೇಕಾದರೆ ಕೆಟ್ಟಸ್ವಭಾವದವನಾಗಿರಲೀ, ನಿರ್ಭಾಗ್ಯನಾಗಿರಲಿ, ಮುದುಕನಾಗಿರಲೀ, ಜಡವಾಗಿರಲೀ, ದರಿದ್ರನಾಗಿರಲಿ, ರೋಗಿಯಾಗಿರಲಿ ಅವನನ್ನು ತ್ಯಜಿಸಬಾರದು. ॥ ೨೫ ॥ ಕುಲೀನ ಸ್ತ್ರೀಯರಿಗೆ ಜಾರಪುರುಷನ ಸಮಾಗಮವು ಸರ್ವವಿಧದಿಂದಲೂ ನಿಂದನೀಯವಾಗಿದೆ. ಇದರಿಂದ ಅವರ ಪರಲೋಕವು ಕೆಡುವುದು, ಸ್ವರ್ಗವೂ ಸಿಗುವುದಿಲ್ಲ, ಈ ಲೋಕದಲ್ಲಿಯೂ ಅಪಕೀರ್ತಿಯುಂಟಾಗುತ್ತದೆ. ಈ ಕೆಟ್ಟಕೆಲಸವಂತೂ ಅತ್ಯಂತ ತುಚ್ಛವೂ, ನಿಂದನೀಯವೂ ಆಗಿದೆ. ಇದರಿಂದ ವರ್ತಮಾನದಲ್ಲಿ ಕಷ್ಟಗಳೇ ಇದ್ದು, ಎಲ್ಲರಿಗೆ ಭಯಪಡಬೇಕಾಗುತ್ತದೆ. ಕುಲೀನ ಸ್ತ್ರೀಯರಿಗೆ ಇದು ಅತ್ಯಂತ ನೀಚಕಾರ್ಯವಾಗಿದೆ, ನರಕಕ್ಕೆ ಕಾರಣವಾಗಿದೆ. ॥ ೨೬ ॥ ಗೋಪಿಯರೇ! ನನ್ನ ಲೀಲಾ-ಗುಣಗಳ ಶ್ರವಣದಿಂದ ಕೀರ್ತನದಿಂದ, ನನ್ನ ದರ್ಶನದಿಂದ ಮತ್ತು ನನ್ನ ಶ್ರೀವಿಗ್ರಹದ ಧ್ಯಾನದಿಂದ ಉಂಟಾಗುವ ಅನನ್ಯ ಪ್ರೇಮವು, ಬಳಿಯಲ್ಲಿ ಇರುವುದರಿಂದ ದೊರೆಯುವುದಿಲ್ಲ. ಅದಕ್ಕಾಗಿ ನೀವೆಲ್ಲರೂ ಶೀಘ್ರವಾಗಿ ನಿಮ್ಮ-ನಿಮ್ಮ ಮನೆಗಳಿಗೆ ಮರಳಿ ಹೋಗಿರಿ. ॥ ೨೭ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನ ಇಂತಹ ಅಪ್ರಿಯವಾದ ಮಾತನ್ನು ಕೇಳಿದ ಗೋಪಿಯರಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಅವರ ಆಸೆ-ಆಕಾಂಕ್ಷೆಗಳೆಲ್ಲ ನುಚ್ಚು ನೂರಾದವು. ಕಡು ದುಃಖಿತರಾದರು. ದಾಟಲಶಕ್ಯವಾದ ಚಿಂತಾಸಮುದ್ರದಲ್ಲಿ ಮುಳುಗಿಹೋದರು. ॥ ೨೮ ॥ ವಿರಹ ದುಃಖದಿಂದಾಗಿ ಗೋಪಿಯರು ತಲೆತಗ್ಗಿಸಿಕೊಂಡು ನಿಟ್ಟುಸಿರು ಬಿಡುತ್ತಿದ್ದರು. ಆ ನಿಟ್ಟುಸಿರಿನ ಬಿಸಿಯಿಂದಾಗಿ ತೊಂಡೆಯಂತೆ ಇದ್ದ ಅವರ ಕೆಂದುಟಿಗಳು ಒಣಗಿಹೋದುವು. ಮುಂದುಗಾಣದೆ ಕಾಲುಗುರುಗಳಿಂದ ಭೂಮಿಯನ್ನು ಕೆರೆಯುತ್ತಿದ್ದರು. ಕಂಗಳಿಂದ ದುಃಖಾಶ್ರುಗಳು ಹರಿದು ಕಾಡಿಗೆಯೊಂದಿಗೆ ಕುಚ ಮಂಡಲದಲ್ಲಿ ಲೇಪಿತವಾಗಿದ್ದ ಕುಂಕುಮ ಕೇಸರಿಯು ತೊಳೆದು ಹಾಕಿತು. ದುಃಖ ಆವೇಗದಿಂದ ಗಂಟಲು ಕಟ್ಟಿ ಯಾವ ಮಾತನ್ನು ಆಡಲಾಗದೆ ಮೌನವಾಗಿ ನಿಂತುಬಿಟ್ಟರು. ॥ ೨೯ ॥ ಗೋಪಿಯರು ತಮ್ಮ ಪ್ರಿಯ ಶ್ಯಾಮಸುಂದರನಿಗಾಗಿ ಸಮಸ್ತ ಕಾಮನೆಗಳನ್ನು, ಭೋಗಗಳನ್ನು ಬಿಟ್ಟುಬಿಟ್ಟಿದ್ದರು. ಶ್ರೀಕೃಷ್ಣನಲ್ಲಿ ಅವರಿಗೆ ಅತ್ಯಂತ ಅನುರಾಗ, ಪರಮಪ್ರೇಮವಿತ್ತು. ತಮ್ಮ ಪ್ರಿಯತಮನಾದ

ಪ್ರೇಷ್ಠಂ ಪ್ರಿಯೇತರಮಿವ ಪ್ರತಿಭಾಷಮಾಣಂ
ಕೃಷ್ಣಂ ತದರ್ಥವಿನಿವರ್ತಿತಸರ್ವಕಾಮಾಃ ।
ನೇತ್ರೇ ವಿಮೃಜ್ಯ ರುದಿತೋಪಹತೇ ಸ್ಮ ಕಿಂಚಿತ್-
ಸಂರಂಭಗದ್ಗದಗಿರೋಽಬ್ರುವತಾನುರಕ್ತಾಃ ॥ ೩೦ ॥

*ಗೋಪ್ಯ ಊಚುಃ*

ಮೈವಂ ವಿಭೋಽರ್ಹತಿ ಭವಾನ್ಗದಿತುಂ ನೃಶಂಸಂ
ಸಂತ್ಯಜ್ಯ ಸರ್ವವಿಷಯಾಂಸ್ತವ ಪಾದಮೂಲಮ್ ।
ಭಕ್ತಾ ಭಜಸ್ವ ದುರವಗ್ರಹ ಮಾ ತ್ಯಜಾಸ್ಮಾನ್
ದೇವೋ ಯಥಾಽಽದಿಪುರುಷೋ ಭಜತೇ ಮುಮುಕ್ಷೂನ್ ॥ ೩೧ ॥

ಯತ್ಪತ್ಯಪತ್ಯಸುಹೃದಾಮನುವೃತ್ತಿರಂಗ
ಸ್ತ್ರೀಣಾಂ ಸ್ವಧರ್ಮ ಇತಿ ಧರ್ಮವಿದಾ ತ್ವಯೋಕ್ತಮ್ ।
ಅಸ್ತ್ವೇವಮೇತದುಪದೇಶಪದೇ ತ್ವಯೀಶೇ
ಪ್ರೇಷ್ಠೋ ಭವಾಂಸ್ತನುಭೃತಾಂ ಕಿಲ ಬಂಧುರಾತ್ಮಾ ॥ ೩೨ ॥

ಕುರ್ವಂತಿ ಹಿ ತ್ವಯಿ ರತಿಂ ಕುಶಲಾಃ ಸ್ವ ಆತ್ಮನ್
ನಿತ್ಯಪ್ರಿಯೇ ಪತಿಸುತಾದಿಭಿರಾರ್ತಿದೈಃ ಕಿಮ್ ।
ತನ್ನಃ ಪ್ರಸೀದ ಪರಮೇಶ್ವರ ಮಾ ಸ್ಮ ಛಿಂದ್ಯಾ
ಆಶಾಂ ಭೃತಾಂ ತ್ವಯಿ ಚಿರಾದರವಿಂದನೇತ್ರ ॥ ೩೩ ॥

ಚಿತ್ತಂ ಸುಖೇನ ಭವತಾಪಹೃತಂ ಗೃಹೇಷು
ಯನ್ನಿರ್ವಿಶತ್ಯುತ ಕರಾವಪಿ ಗೃಹ್ಯಕೃತ್ಯೇ ।
ಪಾದೌ ಪದಂ ನ ಚಲತಸ್ತವ ಪಾದಮೂಲಾದ್
ಯಾಮಃ ಕಥಂ ವ್ರಜಮಥೋ ಕರವಾಮ ಕಿಂ ವಾ ॥ ೩೪ ॥

ಶ್ರೀಕೃಷ್ಣನ ಇಂತಹ ನಿಷ್ಠುರವಾದ, ಅಪ್ರಿಯದಂತಿರುವ ಮಾತನ್ನು ಕೇಳಿದಾಗ ಅವರಿಗೆ ಅತ್ಯಂತ ದುಃಖವಾಯಿತು. ಅಳುತ್ತಾ-ಅಳುತ್ತಾ ಕಣ್ಣುಗಳು ಕೆಂಪಾದವು ನೀರು ತುಂಬಿ ಮಂಜಾದವು. ಕೊನೆಗೆ ಅವರು ಧೈರ್ಯತಂದುಕೊಂಡು ಕಣ್ಣೀರನ್ನು ಒರೆಸಿಕೊಂಡು, ಪ್ರಣಯಕೋಪದಿಂದ ಗದ್ಗದ ಧ್ವನಿಯಿಂದ ಹೇಳತೊಡಗಿದರು. ॥ ೩೦ ॥

**ಗೋಪಿಯರು ಹೇಳಿದರು** - ಪ್ರಾಣವಲ್ಲಭನೇ! ಇಂತಹ ನಿಷ್ಠುರವಾದ ಮಾತುಗಳನ್ನಾಡುವುದು ನಿನಗೆ ಉಚಿತವಾಗಿ ಕಾಣುವುದಿಲ್ಲ, ನಮ್ಮದೆಂದು ಭಾವಿಸುವ ಸರ್ವಸ್ವವನ್ನು ಪರಿತ್ಯಜಿಸಿ ನಿನ್ನ ಪಾದಮೂಲವನ್ನು ಸೇರಿದ್ದೇವೆ. ಸರ್ವತಂತ್ರ ಸ್ವತಂತ್ರನೇ! ನಮ್ಮನ್ನು ತ್ಯಜಿಸಬೇಡ. ಆದಿ ಪುರುಷನಾದ ನಾರಾಯಣನು ಮೋಕ್ಷಾಪೇಕ್ಷಿಗಳಾದ ಭಕ್ತರನ್ನು ಪರಿಪಾಲಿಸುವಂತೆ ಭಕ್ತರಾದ ನಮ್ಮನ್ನು ಪರಿಗ್ರಹಿಸಿ ಪಾಲಿಸು. ॥ ೩೧॥ ಪ್ರಾಣಪ್ರಿಯನೇ! ನೀನು ಸಮಸ್ತ ಧರ್ಮಗಳ ರಹಸ್ಯವನ್ನು ಬಲ್ಲವನಾಗಿರುವೆ. 'ತನ್ನ ಪತಿ-ಪುತ್ರ, ಬಂಧು-ಬಾಂಧವರ ಸೇವೆ ಮಾಡುವುದೇ ಸ್ತ್ರೀಯರ ಸ್ವಧರ್ಮವಾಗಿದೆ' ಎಂದು ನೀನು ಹೇಳಿರುವುದು ಅಕ್ಷರಶಃ ಸರಿಯಾಗಿದೆ. ಆದರೆ ಈ ಉಪದೇಶಕ್ಕೆ ಅನುಸಾರ ನಮಗೆ ನಿನ್ನ ಸೇವೆಮಾಡುವುದೇ ಸೂಕ್ತವಾಗಿದೆ. ಏಕೆಂದರೆ, ನೀನೇ ಎಲ್ಲ ಉಪದೇಶಗಳ ಪರಮ ಲಕ್ಷ್ಯವಾಗಿರುವೆ, ಸಾಕ್ಷಾತ್ ಭಗವಂತನೇ ಆಗಿರುವೆ. ನೀನೇ ಸಮಸ್ತ ಶರೀರಧಾರಿಗಳ ಸುಹೃದನೂ, ಆತ್ಮನೂ ಆಗಿರುವೆ ಮತ್ತು ಪರಮ ಪ್ರಿಯತಮನೂ ಆಗಿರುವೆ. ॥ ೩೨ ॥ ಆತ್ಮಜ್ಞಾನದಲ್ಲಿ ನಿಪುಣರಾದ ಮಹಾಪುರುಷರು ನಿನ್ನನ್ನೇ ಪ್ರೇಮಿಸುತ್ತಿರುವರು. ಏಕೆಂದರೆ, ನೀನು ನಿತ್ಯ ಪ್ರಿಯನೂ, ತಮ್ಮ ಆತ್ಮನೇ ಆಗಿರುವೆ. ಅನಿತ್ಯರಾದ, ದುಃಖಕೊಡುವಂತಹ ಪತಿ-ಪುತ್ರರಿಂದ ಏನು ಪ್ರಯೋಜನ? ಪರಮೇಶ್ವರನೇ! ನಮ್ಮ ಮೇಲೆ ಪ್ರಸನ್ನನಾಗು, ಕೃಪೆ ದೋರು. ಕಮಲನಯನಾ! ಬಹಳ ಕಾಲದಿಂದಲೂ ನಿನ್ನಲ್ಲಿಟ್ಟಿರುವ ಸುಕೋಮಲವಾದ ಆಶಾಲತೆಯನ್ನು ಕತ್ತರಿಸಿ ಹಾಕಬೇಡ. ॥ ೨೩. ॥ ಮನಮೋಹನ! ಇದುವರೆಗೂ ನಮ್ಮ ಚಿತ್ತವು ಗೃಹಕೃತ್ಯದಲ್ಲೇ ತೊಡಗಿತ್ತು. ಅದರಿಂದ ನಮ್ಮ ಕೈಗಳು ಅದರಲ್ಲೇ ತೊಡಗಿತ್ತು. ಆದರೆ ನಾವು ನೋಡು-ನೋಡುತ್ತಾ ನಮ್ಮ ಚಿತ್ತವನ್ನು ಸುಖ ಸ್ವರೂಪನಾದ ನೀನು ಅಪಹರಿಸಿ ಬಿಟ್ಟಿರುವೆ. ಇದರಲ್ಲಿ ನಿನಗೆ ಯಾವುದೇ ಕಷ್ಟವಾಗಲಿಲ್ಲ, ಆದರೆ ಈಗಲಾದರೋ ನಮ್ಮ ಗತಿ-ಮತಿ ಬೇರೆಯೇ ಆಗಿಬಿಟ್ಟಿದೆ. ನಮ್ಮ ಈ ಕಾಲುಗಳು ನಿನ್ನ ಚರಣಕಮಲಗಳನ್ನು ಬಿಟ್ಟು ಒಂದು ಹೆಜ್ಜೆಯೂ ಮುಂದಿಡಲು ಸಿದ್ಧರಿಲ್ಲ, ಹಾಗಿರುವಾಗ ನಾವು ವ್ರಜಕ್ಕೆ ಹೋಗುವುದೆಂತು? ಅಲ್ಲಿಗೆ ಹೋಗಿ ಮಾಡುವುದಾದರೂ ಏನು? ॥ ೩೪ ॥ ಪ್ರಾಣವಲ್ಲಭ, ಪ್ರಾಣಸಖನೇ! ನಿನ್ನ ಕಿರುನಗೆಯಿಂದಲೂ, ಕುಡಿನೋಟದಿಂದಲೂ, ಮನೋಹರವಾದ, ಮಧುರವಾದ ವೇಣುಗಾನದಿಂದಲೂ ನಮ್ಮ ಹೃದಯದಲ್ಲಿ ಉರಿಯುತ್ತಿರುವ ಪ್ರೇಮ ಮತ್ತು ಮಿಲನದ ಅಗ್ನಿಯನ್ನು ನಿನ್ನ ಅಧರಾಮೃತವನ್ನು ಕೆಂದುಟಿಗಳ ಮೂಲಕ ಸುರಿದು ಆರಿಸಿಬಿಡು. ನೀನೇನಾದರೂ ಹಾಗೆ

ಸಿಂಚಾಂಗ ನಸ್ತ್ವದಧರಾಮೃತಪೂರಕೇಣ
ಹಾಸಾವಲೋಕಕಲಗೀತಜಹೃಚ್ಛಯಾಗ್ನಿಮ್ ।
ನೋ ಚೇದ್ವಯಂ ವಿರಹಜಾಗ್ನ್ಯುಪಯುಕ್ತದೇಹಾ
ಧ್ಯಾನೇನ ಯಾಮ ಪದಯೋಃ ಪದವೀಂ ಸಖೇ ತೇ ॥ ೩೫ ॥

ಯರ್ಹ್ಯಂಬುಜಾಕ್ಷ ತವ ಪಾದತಲಂ ರಮಾಯಾ
ದತ್ತಕ್ಷಣಂ ಕ್ವಚಿದರಣ್ಯಜನಪ್ರಿಯಸ್ಯ ।
ಅಸ್ಪ್ರಾಕ್ಷ್ಮ ತತ್ಪ್ರಭೃತಿ ನಾನ್ಯಸಮಕ್ಷಮಂಗ
ಸ್ಥಾತುಂ ತ್ವಯಾಭಿರಮಿತಾ ಬತ ಪಾರಯಾಮಃ ॥ ೩೬ ॥

ಶ್ರೀರ್ಯತ್ಪದಾಂಬುಜರಜಶ್ಚಕಮೇ ತುಲಸ್ಯಾ
ಲಬ್ಧ್ವಾಪಿ ವಕ್ಷಸಿ ಪದಂ ಕಿಲ ಭೃತ್ಯಜುಷ್ಟಮ್ ।
ಯಸ್ಯಾಃ ಸ್ವವೀಕ್ಷಣಕೃತೇಽನ್ಯಸುರಪ್ರಯಾಸ-
ಸ್ತದ್ವದ್ವಯಂ ಚ ತವ ಪಾದರಜಃ ಪ್ರಪನ್ನಾಃ ॥ ೩೭ ॥

ತನ್ನಃ ಪ್ರಸೀದ ವೃಜಿನಾರ್ದನ ತೇಽಂಘ್ರಿಮೂಲಂ
ಪ್ರಾಪ್ತಾ ವಿಸೃಜ್ಯ ವಸತೀಸ್ತ್ವದುಪಾಸನಾಶಾಃ ।
ತ್ವತ್ಸುಂದರಸ್ಮಿತನಿರೀಕ್ಷಣತೀವ್ರಕಾಮ-
ತಪ್ತಾತ್ಮನಾಂ ಪುರುಷಭೂಷಣ ದೇಹಿ ದಾಸ್ಯಮ್ ॥ ೩೮ ॥

ವೀಕ್ಷ್ಯಾಲಕಾವೃತಮುಖಂ ತವ ಕುಂಡಲಶ್ರೀ-
ಗಂಡಸ್ಥಲಾಧರಸುಧಂ ಹಸಿತಾವಲೋಕಮ್ ।
ದತ್ತಾಭಯಂ ಚ ಭುಜದಂಡಯುಗಂ ವಿಲೋಕ್ಯ
ವಕ್ಷಃ ಶ್ರಿಯೈಕರಮಣಂ ಚ ಭವಾಮ ದಾಸ್ಯಃ ॥ ೩೯ ॥

ಮಾಡದಿದ್ದರೆ ವಿರಹಾಗ್ನಿಗೆ ನಮ್ಮ ಶರೀರವನ್ನು ಬಲಿಗೊಟ್ಟು ಧ್ಯಾನದ ಮೂಲಕ ನಿನ್ನ ಚರಣಕಮಲಗಳಲ್ಲಿ ಸೇರಿಬಿಡುವೆವು. ॥ ೩೫ ॥

ಕಮಲಾಕ್ಷನೇ ! ನೀನು ವನವಾಸಿಗಳನ್ನು ಪ್ರೀತಿಸುವೆ. ವನವಾಸಿಗಳಾದ ನಾವೂ ನಿನ್ನನ್ನು ಬಹಳವಾಗಿ ಪ್ರೀತಿಸುತ್ತೇವೆ. ಆದುದರಿಂದಲೇ ನೀನು ಅವರ ಮಧ್ಯದಲ್ಲಿ ವಾಸಿಸುತ್ತಿರುವೆ. ಯಾರ ಪಾದಸೇವೆಯು ಲಕ್ಷ್ಮೀದೇವಿಗೂ ಯಾವಾಗಲೊಮ್ಮೆ ಪ್ರಾಪ್ತವಾಗುವುದೋ, ಅಂತಹ ಪಾದತಲವನ್ನು ಸ್ಪರ್ಶಿಸುವ ಸೌಭಾಗ್ಯವು ನಮಗೂ ಸಿಕ್ಕಿತು. ಅಂದು ನೀನು ನಮ್ಮನ್ನು ದಾಸಿಯರನ್ನಾಗಿ ಸ್ವೀಕರಿಸಿ ಆನಂದವನ್ನುಂಟುಮಾಡಿದೆ. ಅಂದಿನಿಂದ ನಾವು ಬೇರೆಯವರ ಮುಂದೆ ಒಂದು ಕ್ಷಣವಾದರೂ ನಿಲ್ಲಲು ಅಸಮರ್ಥರಾಗಿದ್ದೇವೆ. ಹಾಗಿರುವಾಗ ಪತಿ-ಪುತ್ರರ ಸೇವೆಯಾದರೋ ದೂರವೇ ಉಳಿಯಿತು. ॥ ೩೬ ॥ ನಮ್ಮ ಸ್ವಾಮಿಯೇ ! ಯಾವ ಮಹಾಲಕ್ಷ್ಮಿಯ ಕಡೆಗಣ್ಣ ನೋಟದ ಅನುಗ್ರಹಕ್ಕಾಗಿ ಇತರ ದೇವತೆಗಳು ತಪಸ್ಸಿನ ಮೂಲಕವಾಗಿ ಪ್ರಯಾಸಪಡುವರೋ ಅಂತಹ ಲಕ್ಷ್ಮೀದೇವಿಯೂ ನಿನ್ನ ಹೃತ್ಕಮಲದಲ್ಲಿ ನೆಲೆಸಿದ್ದರೂ ಅಲ್ಲಿರುವುದು ಅವಳಿಗೆ ತೃಪ್ತಿಯನ್ನುಂಟುಮಾಡಲಿಲ್ಲ. ನಿನ್ನ ಸೇವಕರಿಂದ ಸೇವಿಸಲ್ಪಟ್ಟ ನಿನ್ನ ಪಾದಧೂಳಿಯನ್ನು ತನ್ನ ಸವತಿಯಾದ ತುಳಸಿದೇವಿಯೊಂದಿಗೆ ಸೇವಿಸಬೇಕೆಂದು ಆಸೆಪಡುತ್ತಿರುವಳು. ಅವಳಂತೆ ನಾವೂ ಕೂಡ ನಿನ್ನ ಆ ಚರಣರಜಕ್ಕೆ ಶರಣು ಹೊಂದಿದ್ದೇವೆ. ॥ ೩೭ ॥ ಪಾಪಹರನೇ ! ಪರಮೇಶ್ವರನೇ ! ನಿನ್ನ ಸೇವೆಮಾಡಬೇಕೆಂಬ ಆಸೆಯಿಂದ ನಾವು ಮನೆ-ಮಠಗಳನ್ನು, ಪತಿ-ಸುತರನ್ನು, ಬಂಧುಗಳನ್ನು, ಸಕಲ ಸರ್ವಸ್ವವನ್ನೂ ಪರಿತ್ಯಜಿಸಿ ನಿನ್ನ ದಿವ್ಯಪಾದಗಳ ಮೂಲಕ್ಕೆ ಬಂದು ಸೇರಿಕೊಂಡು ಬಿಟ್ಟಿದ್ದೇವೆ. ಪುರುಷಭೂಷಣನೇ ! ನಿನ್ನ ಅಂದವಾದ ಕಿರುನಗೆಯಿಂದಲೂ, ಚೇತೋಹಾರಿಯಾದ ಕಡೆಗಣ್ಣಿನ ನೋಟದಿಂದಲೂ ನಮ್ಮ ಹೃದಯದಲ್ಲಿ ಕಾಮಾಗ್ನಿಯು ಹೊತ್ತಿಕೊಂಡು ಉರಿಯುತ್ತಿದೆ. ಇದರಿಂದ ದಹಿಸುತ್ತಿರುವ ನಮಗೆ ನಿನ್ನ ದಾಸ್ಯವನ್ನು ಅನುಗ್ರಹಿಸಿ ಕಾಪಾಡು. ॥ ೩೮ ॥ ಪ್ರಿಯತಮನೇ ! ನಿನ್ನ ಗುಂಗುರು ಕೂದಲಗಳಿಂದ ಸಮಲಂಕೃತವಾದ ಮುಖಕಮಲವನ್ನೂ, ಥಳ-ಥಳಿಸುವ ಕುಂಡಲಗಳಿಂದ ಬೆಳಗುತ್ತಿರುವ ಕಪೋಲಗಳನ್ನು, ಅಮೃತಕ್ಕೆ ಸಮಾನವಾದ ಅಧರಾಮೃತವನ್ನು ಸುರಿಸುವ ಕೆಂದುಟಿಯನ್ನು, ನಯನಮನೋಹರವಾದ ಕಡೆಗಣ್ಣನ್ನೂ, ಚಿತ್ತಾಪಹಾರಕವಾದ ಕಿರುನಗೆಯನ್ನು, ಶರಣಾಗತರಿಗೆ ಅಭಯದಾನಮಾಡುವ ಎರಡು ದುಂಡಾದ ಭುಜಗಳನ್ನೂ, ಅನುಪಮವಾದ ಸೌಂದರ್ಯದಿಂದ ಬೆಳಗುತ್ತಾ ಲಕ್ಷ್ಮಿಗೆ ನಿರಂತರ ಕ್ರೀಡಾಸ್ಥಳವಾದ ನಿನ್ನ ವಕ್ಷಃಸ್ಥಳವನ್ನೂ ನೋಡಿ ನಾವು ದಾಸಿಯರಾಗಿಬಿಟ್ಟಿದ್ದೇವೆ. ॥ ೩೯ ॥ ಪ್ರಿಯ ಶ್ಯಾಮಸುಂದರನೇ ! ಮೂರು ಲೋಕಗಳಲ್ಲಿಯೂ - ಮಧುರ ಮಧುರ ಪದ-ಸ್ವರಪ್ರಸ್ತಾರದ ವಿವಿಧ ರೀತಿಯ ಮೂರ್ಛನೆಗಳಿಂದ ಕೂಡಿದ ನಿನ್ನ ವಂಶೀಧ್ವನಿಯನ್ನು ಕೇಳಿ, ನಿನ್ನ ಒಂದು ಬಿಂದುವಿನ ಸೌಂದರ್ಯದಿಂದ ಮೂರು ಲೋಕಗಳಿಗೂ

ಕಾ ಸ್ತ್ರ್ಯಂಗ ತೇ ಕಲಪದಾಯತಮೂರ್ಚ್ಛಿತೇನ
ಸಮ್ಮೋಹಿತಾಽಽರ್ಯಚರಿತಾನ್ನಚಲೇತ್ತ್ರಿಲೋಕ್ಯಾಮ್ ।
ತ್ರೈಲೋಕ್ಯಸೌಭಗಮಿದಂ ಚ ನಿರೀಕ್ಷ್ಯ ರೂಪಂ
ಯದ್ಗೋದ್ವಿಜದ್ರುಮಮೃಗಾಃ ಪುಲಕಾನ್ಯಬಿಭ್ರನ್ ॥ ೪೦ ॥

ಸೌಂದರ್ಯವನ್ನು ದಾನಮಾಡುವ ನಿನ್ನ ಮನಮೋಹಕ ಸೌಂದರ್ಯದ ಗಣಿಯಾದ ಮೂರ್ತಿಯನ್ನು ನೋಡಿ ಗೋವು, ಪಕ್ಷಿಗಳು, ವೃಕ್ಷಗಳೂ ಹಾಗೂ ಜಿಂಕೆಗಳೂ ರೋಮಾಂಚಿತವಾಗುತ್ತವೋ, ಅಂತಹ ನಿನ್ನನ್ನು ನೋಡಿ, ಯಾವ ಸ್ತ್ರೀಯು ತಾನೆ ಲೋಕ ಲಜ್ಜೆಯನ್ನು ತ್ಯಜಿಸಿ ನಿನ್ನಲ್ಲಿ ಅನುರಕ್ತಳಾಗದೆ ಇರಬಲ್ಲಳು ? ॥೪೦॥

ವ್ಯಕ್ತಂ ಭವಾನ್ ವ್ರಜಭಯಾರ್ತಿಹರೋಽಭಿಜಾತೋ
ದೇವೋ ಯಥಾಽಽದಿಪುರುಷಃ ಸುರಲೋಕಗೋಪ್ತಾ ।
ತನ್ನೋ ನಿಧೇಹಿ ಕರಪಂಕಜಮಾರ್ತಬಂಧೋ
ತಪ್ತಸ್ತನೇಷು ಚ ಶಿರಸ್ಸು ಚ ಕಿಂಕರೀಣಾಮ್ ॥ ೪೧ ॥

ಭಗವಾನ್ ನಾರಾಯಣನು ದೇವತೆಗಳನ್ನು ರಕ್ಷಿಸುವಂತೆಯೇ ನೀನೇ ವ್ರಜಮಂಡಲದ ಭಯ, ದುಃಖಗಳನ್ನು ಇಲ್ಲವಾಗಿಸಲಿಕ್ಕಾಗಿಯೇ ಪ್ರಕಟನಾಗಿರುವೆ, ಎಂಬ ಮಾತು ನಮ್ಮಿಂದ ಮರೆಯಾಗಿಲ್ಲ. ದೀನ, ದುಃಖಿತರ ಮೇಲೆ ನಿನಗೆ ಬಹಳ ಪ್ರೇಮವಿದೆ, ಕೃಪೆಯಿದೆ ಎಂಬುದು ಸ್ಪಷ್ಟವೇ ಆಗಿದೆ. ಪ್ರಿಯತಮನೇ ! ನಾವೂ ಕೂಡ ಬಹಳ ದುಃಖಿತರಾಗಿದ್ದೇವೆ. ನಿನ್ನನ್ನು ಸೇರಬೇಕೆಂಬ ಆಕಾಂಕ್ಷೆಯ ಅಗ್ನಿಯು ನಮ್ಮ ವಕ್ಷಃಸ್ಥಳವನ್ನು ಸುಡುತ್ತಿದೆ. ನೀನು ಈ ದಾಸಿಯರ ವಕ್ಷಃಸ್ಥಳ ಮತ್ತು ತಲೆಯ ಮೇಲೆ ನಿನ್ನ ಕೋಮಲವಾದ ಕರಕಮಲವನ್ನಿರಿಸಿ ಆ ಅಗ್ನಿಯನ್ನು ಆರಿಸಿಬಿಡು. ನಮ್ಮನ್ನು ತನ್ನವರಾಗಿಸಿಕೊಂಡು ನಮಗೆ ಜೀವನದಾನವನ್ನು ಕರುಣಿಸು ॥ ೪೧ ॥

ಶ್ರೀಶುಕ ಉವಾಚ

ಇತಿ ವಿಕ್ಲವಿತಂ ತಾಸಾಂ ಶ್ರುತ್ವಾ ಯೋಗೇಶ್ವರೇಶ್ವರಃ ।
ಪ್ರಹಸ್ಯ ಸದಯಂ ಗೋಪೀರಾತ್ಮಾರಾಮೋಽಪ್ಯರೀರಮತ್ ॥ ೪೨ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನು ಸನಕಾದಿ ಯೋಗಿಗಳಿಗೂ, ಶಿವನೇ ಮೊದಲಾದ ಯೋಗೇಶ್ವರರಿಗೂ ಈಶ್ವರನು. ಗೋಪಿಕಾಸ್ತ್ರೀಯರ ದುಃಖದಿಂದ ಕೂಡಿದ ಮಾತುಗಳನ್ನು ಕೇಳುತ್ತಲೇ ಆವನ ಹೃದಯ ದಯಾರಸದಿಂದ ತುಂಬಿಹೋಯಿತು. ಆವನು ಆತ್ಮಾರಾಮನಾಗಿ ಇದ್ದರೂ, ಇತರರ ಅಪೇಕ್ಷೆಯಿಲ್ಲದೆ ಆನಂದಪಡುವವನಾಗಿದ್ದರೂ ನಸುನಗುತ್ತಾ ಗೋಪಿಕೆಯರೊಡನೆ ರಾಸಕ್ರೀಡೆಯಾಡಲು ಪ್ರಾರಂಭಿಸಿದನು. ॥ ೪೨ ॥

ತಾಭಿಃ ಸಮೇತಾಭಿರುದಾರಚೇಷ್ಟಿತಃ
ಪ್ರಿಯೇಕ್ಷಣೋತ್ಫುಲ್ಲಮುಖೀಭಿರಚ್ಯುತಃ ।
ಉದಾರಹಾಸದ್ವಿಜಕುಂದದೀಧಿತಿ-
ರ್ವ್ಯರೋಚತೈಣಾಂಕ ಇವೋಡುಭಿರ್ವೃತಃ ॥ ೪೩ ॥

ಭಗವಾನ್ ಶ್ರೀಕೃಷ್ಣನು ತನ್ನೊಡನಿದ್ದ ಗೋಪಿಯರೊಡನೆ ಉದಾರವಾಗಿ ವರ್ತಿಸಲು ತೊಡಗಿದನು. ಆವನು ಮಂದಹಾಸವನ್ನು ಬೀರಿದಾಗ ಮಲ್ಲಿಗೆಯ ಮೊಗ್ಗಿನಂತಹ ಶುಭ್ರವಾದ ಹಲ್ಲುಗಳು ಕಾಣುತ್ತಿದ್ದವು. ಅವನ ಕಟಾಕ್ಷವೀಕ್ಷಣದಿಂದ ಗೋಪಿಕೆಯರ ಮುಖಗಳು ನಿಕಸಿತವಾಗುತ್ತಿದ್ದವು. ನಕ್ಷತ್ರಗಳಿಂದ ಚಂದ್ರನು ಪರಿವೃತನಾಗಿರುವಂತೆ - ಹಿರಿ ಹಿರಿಹಿಗ್ಗುತ್ತಿದ್ದ ಗೋಪಿಕೆಯರಿಂದ ಪರಿವೃತನಾದ ಶ್ರೀಕೃಷ್ಣನು ವಿರಾಜಿಸುತ್ತಿದ್ದನು. ॥ ೪೩ ॥

ಉಪಗೀಯಮಾನ ಉದ್ಗಾಯನ್ವನಿತಾಶತಯೂಥಪಃ ।
ಮಾಲಾಂ ಬಿಭ್ರದ್ವೈಜಯಂತೀಂ ವ್ಯಚರನ್ಮಂಡಯನ್ವನಮ್ ॥ ೪೪ ॥

ನೂರಾರು ಗೋಪಿಕೆಯರ ಗುಂಪಿಗೆ ಸ್ವಾಮಿಯಾದ ಶ್ರೀಕೃಷ್ಣನು ವೈಜಯಂತೀ ವನಮಾಲೆಯನ್ನು ಧರಿಸಿ ವೃಂದಾವನದ ಶೋಭೆಯನ್ನು ಹೆಚ್ಚಿಸುತ್ತಾ ಅಲ್ಲಿ ಗೋಪಿಯರೊಡನೆ ಸಂಚರಿಸುತ್ತಿದ್ದನು. ಕೆಲವು ವೇಳೆ ಗೋಪಿಯರು ತಮ್ಮ ಪ್ರಿಯತಮನಾದ ಶ್ರೀಕೃಷ್ಣನ ಲೀಲಾಪ್ರಸಂಗಗಳನ್ನು ಹಾಡುತ್ತಿದ್ದರು. ಕೆಲವು ವೇಳೆ ಶ್ರೀಕೃಷ್ಣನು ಗೋಪಿಕೆಯರ ಪ್ರೇಮ-ಸೌಂದರ್ಯ ಗೀತೆಗಳನ್ನು ಹಾಡುತ್ತಿದ್ದನು. ॥ ೪೪ ॥

ನದ್ಯಾಃ ಪುಲಿನಮಾವಿಶ್ಯ ಗೋಪೀಭಿರ್ಹಿಮವಾಲುಕಮ್ ।
ರೇಮೇ ತತ್ತರಲಾನಂದ ಕುಮುದಾಮೋದವಾಯುನಾ ॥ ೪೫ ॥

ಇದಾದ ಬಳಿಕ ಭಗವಾನ್ ಶ್ರೀಕೃಷ್ಣನು ಗೋಪಿಕೆಯರೊಂದಿಗೆ ಸ್ಫಟಿಕದಂತೆ ಹೊಳೆಯುತ್ತಿದ್ದ ಯಮುನೆಯ ಪಾವನ ಮರಳಿನಲ್ಲಿ ಪದಾರ್ಪಣ ಮಾಡಿದನು. ಅದು ಯಮುನೆಯ ತಣ್ಣನೆಯ ತರಂಗಗಳ ಸ್ಪರ್ಶದಿಂದ ಅಲುಗಾಡುತ್ತಿದ್ದ ಕಮಲ-ಕನ್ನೈದಿಲೆಗಳ ಪರಮಳದ ಗಾಳಿಯಿಂದ ಕೂಡಿತ್ತು. ಅಂತಹ ಆನಂದಪ್ರದ ಮರಳಿನಲ್ಲಿ ಭಗವಂತನು ಗೋಪಿಯರೊಡನೆ ರಾಸಲೀಲೆಯನ್ನು ಮಾಡಿದನು. ॥ ೪೫ ॥

ಬಾಹುಪ್ರಸಾರಪರಿರಂಭಕರಾಲಕೋರು-
ನೀವೀಸ್ತನಾಲಭನನರ್ಮನಖಾಗ್ರಪಾತೈಃ ।
ಕ್ಷ್ವೇಲ್ಯಾವಲೋಕಹಸಿತೈರ್ವ್ರಜಸುಂದರೀಣಾ
ಮುತ್ತಂಭಯನ್ರತಿಪತಿಂ ರಮಯಾಂಚಕಾರ ॥ ೪೬ ॥

ತೋಳುಗಳನ್ನು ಅಗಲವಾಗಿ ಚಾಚಿ ಅಪ್ಪಿಕೊಳ್ಳುವುದರಿಂದಲೂ, ಕೈಗಳಿಂದ ಮುಂಗುರುಳನ್ನು ನೇವರಿಸುವುದರಿಂದಲೂ, ಗೋಪಿಕಾ ಸ್ತ್ರೀಯರ ದಿವ್ಯ ಪ್ರೇಮಭಾವವನ್ನು ಕೆರಳಿಸುತ್ತಾ ಶ್ರೀಕೃಷ್ಣನು ಅವರೊಡನೆ ಕ್ರೀಡೆಯಾಡುತ್ತಿದ್ದನು. ॥ ೪೬ ॥

ಏವಂ ಭಗವತಃ ಕೃಷ್ಣಾಲ್ಲಬ್ಧಮಾನಾ ಮಹಾತ್ಮನಃ ।
ಆತ್ಮಾನಂ ಮೇನಿರೇ ಸ್ತ್ರೀಣಾಂ ಮಾನಿನ್ಯೋಽಭ್ಯಧಿಕಂ ಭುವಿ ॥ ೪೭ ॥

ಉದಾರ ಶಿರೋಮಣಿ ಭಗವಾನ್ ಶ್ರೀಕೃಷ್ಣನು ಹೀಗೆ ಗೋಪಿಕೆಯರನ್ನು ಸನ್ಮಾನಿಸಿದಾಗ ಗೋಪಿಕೆಯರ ಮನಸ್ಸಿನಲ್ಲಿ ಜಗತ್ತಿನ ಸಮಸ್ತ ಸ್ತ್ರೀಯರಲ್ಲಿ ನಾವೇ ಸರ್ವಶ್ರೇಷ್ಠರಾಗಿದ್ದೇವೆ, ನಮ್ಮಂತೆಯೆ ಬೇರೆ ಯಾರು ಇಲ್ಲವೆಂಬ ಭಾವ ಉದಿಸಿತು. ॥ ೪೭ ॥

ತಾಸಾಂ ತತ್ಸೌಭಗಮದಂ ವೀಕ್ಷ್ಯ ಮಾನಂ ಚ ಕೇಶವಃ ।
ಪ್ರಶಮಾಯ ಪ್ರಸಾದಾಯ ತತ್ರೈವಾಂತರಧೀಯತ ॥ ೪೮ ॥

ಆಗ ಶ್ರೀಕೃಷ್ಣನು ಗೋಪಿಯರ ಸೌಂದರ್ಯಮದವನ್ನೂ ಮತ್ತು ತಾವೇ ಅಧಿಕರೆಂದು ಭಾವಿಸಿ ಗರ್ವಪಡುತ್ತಿರುವುದನ್ನು ಗಮನಿಸಿ, ಅವರ ಮದವನ್ನೂ, ಗರ್ವವನ್ನೂ ಹೋಗಲಾಡಿಸಿ ಅವರನ್ನು ಅನುಗ್ರಹಿಸುವುದಕ್ಕಾಗಿ ಒಡನೆಯೇ ಅವರ ನಡುವಿನಿಂದ ಅಂತರ್ಧಾನನಾದನು. ॥ ೪೮ ॥

ಇಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೨೯ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಭಗವತೋ ರಾಸಕ್ರೀಡಾವರ್ಣನಂ ನಾಮೈಕೋನತ್ರಿಂಶೋಽಧ್ಯಾಯಃ ॥ ೨೯ ॥

# ಮೂವತ್ತನೆಯ ಅಧ್ಯಾಯ

## ಗೋಪಿಯರ ವಿರಹವೇದನೆ

*ಶ್ರೀಶುಕ ಉವಾಚ*

ಅಂತರ್ಹಿತೇ ಭಗವತಿ ಸಹಸೈವ ವ್ರಜಾಂಗನಾಃ ।
ಅತಪ್ಯಂಸ್ತಮಚಕ್ಷಾಣಾಃ ಕರಿಣ್ಯ ಇವ ಯೂಥಪಮ್ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಇದ್ದಕ್ಕಿದ್ದಂತೆ ಶ್ರೀಕೃಷ್ಣನು ಅಂತರ್ಧಾನನಾದನು. ಅವನನ್ನು ಕಾಣದೆ ವ್ರಜಯುವತಿಯರು ಸಲಗವನ್ನಗಲಿದ ಹೆಣ್ಣಾನೆಗಳಂತೆ ವಿರಹಯಾತನೆಯಿಂದ ಪರಿತಪಿಸತೊಡಗಿದರು. ॥ ೧ ॥

ಗತ್ಯಾನುರಾಗಸ್ಮಿತವಿಭ್ರಮೇಕ್ಷಿತೈ-
ರ್ಮನೋರಮಾಲಾಪವಿಹಾರವಿಭ್ರಮೈಃ ।
ಆಕ್ಷಿಪ್ತಚಿತ್ತಾಃ ಪ್ರಮದಾ ರಮಾಪತೇಃ
ತಾಸ್ತಾ ವಿಚೇಷ್ಟಾ ಜಗೃಹುಸ್ತದಾತ್ಮಿಕಾಃ ॥ ೨ ॥

ರಮಾಪತಿಯಾದ ಶ್ರೀಕೃಷ್ಣನ ಮದೋನ್ಮತ್ತ ಗಜರಾಜನ ನಡಿಗೆಯಂತಹ ಗಂಭೀರವಾದ ನಡಿಗೆಯಿಂದಲೂ, ಪ್ರೇಮಪೂರಿತವಾದ ಕಿರುನಗೆಯಿಂದಲೂ, ಚೇತೋಹಾರಿಯಾದ ಕಡೆಗಣ್ಣಿನ ನೋಟದಿಂದಲೂ, ಮನೋಹರವಾದ ಸರಸ ಸಲ್ಲಾಪಗಳಿಂದಲೂ, ಭಿನ್ನ-ಭಿನ್ನವಾದ ಲೀಲಾವಿನೋದಗಳಿಂದಲೂ, ಶೃಂಗಾರ ರಸಭಾವ ಭಂಗಿಗಳಿಂದಲೂ ಆಕರ್ಷಿತರಾದ ಗೋಪಿಕಾಸ್ತ್ರೀಯರು ಅವನನ್ನೇ ನಿರಂತರವಾಗಿ ಚಿಂತಿಸುತ್ತಾ ತನ್ಮಯರಾಗಿ ಬಿಟ್ಟರು. ತಾವೇ ಕೃಷ್ಣನೆಂದು ಭಾವಿಸಿ ಕೊಂಡು ಕೃಷ್ಣನಾಡಿದಂತೆಯೇ ಕ್ರೀಡೆಗಳನ್ನಾಡ ತೊಗಿದರು. ॥ ೨ ॥

ಗತಿಸ್ಮಿತಪ್ರೇಕ್ಷಣಭಾಷಣಾದಿಷು
ಪ್ರಿಯಾಃ ಪ್ರಿಯಸ್ಯ ಪ್ರತಿರೂಢಮೂರ್ತಯಃ ।
ಅಸಾವಹಂ ತ್ವಿತ್ಯಬಲಾಸ್ತದಾತ್ಮಿಕಾ
ನ್ಯವೇದಿಷುಃ ಕೃಷ್ಣವಿಹಾರವಿಭ್ರಮಾಃ ॥ ೩ ॥

ತಮ್ಮ ಪ್ರಿಯತಮನಾದ ಶ್ರೀಕೃಷ್ಣನ ನಡೆ-ನುಡಿ, ಹಾಸ್ಯ-ವಿನೋದ, ಕಿರುನಗೆ-ಮಂದಹಾಸ, ಭಾವ-ಭಂಗಿಗಳು, ಸರಸ-ಸಲ್ಲಾಪಗಳು, ಪ್ರೇಮಾಲಾಪಗಳು ಎಲ್ಲವೂ ಕೃಷ್ಣನ ಭಾವ-ಭಂಗಿಗಳಂತೆ ಗೋಪಿಯರು ಆಗಿಬಿಟ್ಟವು. ಅವರ ಶರೀರದಲ್ಲಿ ಅದೇ ಗತಿ-ಮತಿ ಸಾಕಾರ ಗೊಂಡಿತು. ಅವರು ತಮ್ಮನ್ನು ಪೂರ್ಣವಾಗಿ ಮರೆತು ಶ್ರೀಕೃಷ್ಣ ಸ್ವರೂಪರೇ ಆಗಿ, ಅವನ ಲೀಲಾ-ವಿಲಾಸವನ್ನು ಅನುಕರಣ ಮಾಡುತ್ತಾ 'ನಾನೇ ಕೃಷ್ಣ ನಾಗಿದ್ದೇನೆ' ಹೀಗೆ ಹೇಳತೊಡಗಿದರು. ॥ ೩ ॥

ಗಾಯಂತ್ಯ ಉಚ್ಚೈರಮುಮೇವ ಸಂಹತಾ
ವಿಚಿಕ್ಯುರುನ್ಮತ್ತಕವದ್ ವನಾದ್ ವನಮ್ ।
ಪಪ್ರಚ್ಛುರಾಕಾಶವದಂತರಂ ಬಹಿ-
ರ್ಭೂತೇಷು ಸಂತಂ ಪುರುಷಂ ವನಸ್ಪತೀನ್ ॥ ೪ ॥

ದೃಷ್ಟೋ ವಃ ಕಚ್ಚಿದಶ್ವತ್ಥ ಪ್ಲಕ್ಷ ನ್ಯಗ್ರೋಧ ನೋ ಮನಃ ।
ನಂದಸೂನುರ್ಗತೋ ಹೃತ್ವಾ ಪ್ರೇಮಹಾಸಾವಲೋಕನೈಃ ॥ ೫ ॥

ಕಚ್ಚಿತ್ ಕುರಬಕಾಶೋಕನಾಗಪುನ್ನಾಗಚಂಪಕಾಃ ।
ರಾಮಾನುಜೋ ಮಾನಿನೀನಾಮಿತೋ ದರ್ಪಹರಸ್ಮಿತಃ ॥ ೬ ॥

ಕಚ್ಚಿತ್ತುಲಸಿ ಕಲ್ಯಾಣಿ ಗೋವಿಂದಚರಣಪ್ರಿಯೇ ।
ಸಹ ತ್ವಾಲಿಕುಲೈರ್ಬಿಭ್ರದ್ದೃಷ್ಟಸ್ತೇಽತಿಪ್ರಿಯೋಽಚ್ಯುತಃ ॥ ೭ ॥

ಮಾಲತ್ಯದರ್ಶಿ ವಃ ಕಚ್ಚಿನ್ಮಲ್ಲಿಕೇ ಜಾತಿ ಯೂಥಿಕೇ ।
ಪ್ರೀತಿಂ ವೋ ಜನಯನ್ ಯಾತಃ ಕರಸ್ಪರ್ಶೇನ ಮಾಧವಃ ॥ ೮ ॥

ಚೂತಪ್ರಿಯಾಲಪನಸಾಸನಕೋವಿದಾರ-
ಜಂಬ್ವರ್ಕಬಿಲ್ವಬಕುಲಾಮ್ರಕದಂಬನೀಪಾಃ ।
ಯೇಽನ್ಯೇ ಪರಾರ್ಥಭವಕಾ ಯಮುನೋಪಕೂಲಾಃ
ಶಂಸಂತು ಕೃಷ್ಣಪದವೀಂ ರಹಿತಾತ್ಮನಾಂ ನಃ ॥ ೯ ॥

ಅವರೆಲ್ಲರೂ ಪರಸ್ಪರ ಸೇರಿ ಗಟ್ಟಿಯಾಗಿ ಶ್ರೀಕೃಷ್ಣನ ಗುಣಗಾನವನ್ನು ಮಾಡತೊಡಗಿದರು ಮತ್ತು ಉನ್ಮತ್ತರಾಗಿ ಒಂದು ವನದಿಂದ ಇನ್ನೊಂದು ವನಕ್ಕೆ ಹೋಗುತ್ತಾ ಶ್ರೀಕೃಷ್ಣನನ್ನು ಹುಡುಕಲಾರಂಭಿಸಿದರು. ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ದೂರವೆಲ್ಲಿಗೆ ಹೋಗಿದ್ದನು? ಅವನಾದರೋ ಸಮಸ್ತ ಜಡ-ಚೇತನ ಪದಾರ್ಥಗಳಲ್ಲಿ ಹಾಗೂ ಅವುಗಳ ಹೊರಗೂ ಆಕಾಶದಂತೆ ಏಕರಸನಾಗಿ ನೆಲೆಸಿಯೇ ಇದ್ದಾನೆ. ಅವನು ಅಲ್ಲೇ ಇದ್ದನು, ಅವರಲ್ಲೇ ಇದ್ದನು; ಆದರೆ ಅವನನ್ನು ನೋಡದೆ ಗೋಪಿಯರು ವನಸ್ಪತಿಗಳಲ್ಲಿ, ಗಿಡ-ಮರಗಳಲ್ಲಿ ಅವನೆಲ್ಲಿರುವನೆಂದು ಪ್ರಶ್ನಿಸತೊಡಗಿದರು. ॥ ೪॥

(ಗೋಪಿಯರು ಮೊದಲಿಗೆ ದೊಡ್ಡ-ದೊಡ್ಡ ಮರಗಳ ಬಳಿಗೆ ಹೋಗಿ ವಿಚಾರಿಸಿದರು.) ಎಲೈ ಅರಳೀ ಮರವೇ! ಬಸರಿ ಮರವೇ! ಆಲದ ಮರವೇ! ನಂದನಂದನ ಶ್ಯಾಮಸುಂದರನು ತನ್ನ ಪ್ರೇಮಪೂರ್ಣ ನಸುನಗೆಯಿಂದ ಮತ್ತು ಕಡೆಗಣ್ಣನೋಟದಿಂದ ನಮ್ಮ ಮನಸ್ಸನ್ನು ಅಪಹರಿಸಿರುವನು. ಅಂತಹ ಶ್ರೀಕೃಷ್ಣನನ್ನು ನೀವು ನೋಡಿರುವಿರಾ? ॥ ೫ ॥ ಕುರುವಕ ವೃಕ್ಷವೇ! ಅಶೋಕ ವೃಕ್ಷವೇ! ನಾಗ-ಪುನ್ನಾಗ ವೃಕ್ಷಗಳೇ! ಚಂಪಕ ವೃಕ್ಷಗಳೇ! ನೀವಾದರೂ ಹೇಳಿರಿ. ಕೇವಲ ಕಿರುನಗೆಯಿಂದಲೇ ಮಾನಿನಿಯರ ಸೊಕ್ಕನ್ನು ಮುರಿಯುವ ಬಲರಾಮನ ತಮ್ಮನಾದ ಶ್ರೀಕೃಷ್ಣನನ್ನು ನೀವೇನಾದರೂ ನೋಡಿರುವಿರಾ? ಅವನೆಲ್ಲಿಗೆ ಹೋದನು? ॥ ೬ ॥ (ಈಗ ಅವರು ಹೆಣ್ಣು ಜಾತಿಯ ಗಿಡಗಳ ಬಳಿಯಲ್ಲಿ ಕೇಳುತ್ತಾರೆ.) ತುಳಸೀದೇವಿ! ನಿನ್ನ ಹೃದಯವಾದರೋ ಬಹಳ ಕೋಮಲವಾಗಿದೆ. ನೀನು ಎಲ್ಲ ಜನರ ಮಂಗಲವನ್ನು ಉಂಟುಮಾಡುವೆ. ಭಗವಂತನ ಚರಣಗಳನ್ನು ನೀನು ಬಹಳವಾಗಿ ಪ್ರೀತಿಸುವೆ. ಈ ಕಾರಣದಿಂದಲೇ ದುಂಬಿಗಳು ಗುಂಪು-ಗುಂಪಾಗಿ ನಿನ್ನನ್ನು ಅನುಸರಿಸಿ ಬರುತ್ತಿದ್ದರೂ ನಮ್ಮ ಇನಿಯನು ನಿನ್ನನ್ನು ಧರಿಸಿಯೇ ಇರುತ್ತಾನೆ. ನಿನಗೆ ಅತಿಪ್ರಿಯನೆನಿಸಿದ ಶ್ರೀಕೃಷ್ಣನನ್ನು ನೀನೇನಾದರೂ ಕಂಡೆಯಾ? ॥ ೭ ॥ ಜಾಜಿಗಿಡವೇ! ಮಲ್ಲಿಗೆ ಗಿಡವೇ! ಜಾಜಿ ಸೇವಂತಿಗಳಿರಾ! ತನ್ನ ಕರಸ್ಪರ್ಶದಿಂದ ನಿಮಗೆ ಆನಂದವನ್ನುಂಟುಮಾಡುತ್ತಾ ಪ್ರಿಯತಮನಾದ ಮಾಧವನೇನಾದರೂ ಇತ್ತಕಡೆಯಿಂದ ಹೋದುದನ್ನು ನೀವೇನಾದರೂ ಕಂಡಿರಾ? ॥ ೮ ॥ ಪರೋಪಕ್ಕಾರಕ್ಕಾಗಿಯೇ ಯಮುನಾನದಿಯ ತೀರದಲ್ಲಿ ಹುಟ್ಟಿರುವ ಮಾವು, ಪ್ರಿಯಾಳು, ಹಲಸು, ಅಸನ, ಕೆಂಚವಾಳ, ನೇರಳೆ, ಉಕ್ಕ, ಬಿಲ್ವ, ವಕುಳ, ಹುಳಿಮಾವು, ಕದಂಬ, ನೀರಂಜಿ – ಇದೇ ಮುಂತಾದ ವೃಕ್ಷಗಳ ಅಧಿದೇವತೆಗಳಿರಾ! ನಮ್ಮ ಪ್ರಿಯತಮನನ್ನು ಕಾಣದೆ ಬುದ್ಧಿಶೂನ್ಯರಾಗಿರುವ ನಮಗೆ ಅವನು ಹೋದ ಮಾರ್ಗವನ್ನು ದಯಮಾಡಿ ತಿಳಿಸಿರಿ. ॥ ೯ ॥ ಭಗವಂತನ ಪ್ರೇಯಸಿಯಾದ ಭೂದೇವಿಯೇ! ಶ್ರೀಕೃಷ್ಣ ಚರಣಕಮಲಗಳ ಸ್ಪರ್ಶವನ್ನು ಪಡೆದು ಆನಂದಭರಿತಳಾಗಿ, ತೃಣಲತಾದಿರೂಪದಲ್ಲಿ ತನಗುಂಟಾದ ರೋಮಾಂಚನವನ್ನು ಪ್ರಕಟಪಡಿಸುತ್ತಿರುವೆಯಲ್ಲ! ಇದಕ್ಕಾಗಿ ನೀನು ಎಂತಹ ತಪಸ್ಸನ್ನು ಆಚರಿಸಿದೆ? ನಿನ್ನ ಈ ಉಲ್ಲಾಸ-ವಿಲಾಸವು ಶ್ರೀಕೃಷ್ಣನ

ಕಿಂ ತೇ ಕೃತಂ ಕ್ಷಿತಿ ತಪೋ ಬತ ಕೇಶವಾಂಘ್ರಿ-
ಸ್ಪರ್ಶೋತ್ಸವೋತ್ಪುಲಕಿತಾಂಗರುಹೈರ್ವಿಭಾಸಿ ।
ಅಪ್ಯಂಘ್ರಿಸಂಭವ ಉರುಕ್ರಮವಿಕ್ರಮಾದ್ ವಾ
ಆಹೋ ವರಾಹವಪುಷಃ ಪರಿರಂಭಣೇನ ॥ ೧೦ ॥

ಅಪ್ಯೇಣಪತ್ನ್ಯುಪಗತಃ ಪ್ರಿಯಯೇಹ ಗಾತ್ರೈ-
ಸ್ತನ್ವನ್ ದೃಶಾಂ ಸಖಿ ಸುನಿರ್ವೃತಿಮಚ್ಯುತೋ ವಃ ।
ಕಾಂತಾಂಗಸಂಗಕುಚಕುಂಕುಮರಂಜಿತಾಯಾಃ
ಕುಂದಸ್ರಜಃ ಕುಲಪತೇರಿಹ ವಾತಿ ಗಂಧಃ ॥ ೧೧ ॥

ಬಾಹುಂ ಪ್ರಿಯಾಂಸ ಉಪಧಾಯ ಗೃಹೀತಪದ್ಮೋ
ರಾಮಾನುಜಸ್ತುಲಸಿಕಾಲಿಕುಲೈರ್ಮದಾಂಧೈಃ ।
ಅನ್ವೀಯಮಾನ ಇಹ ವಸ್ತರವಃ ಪ್ರಣಾಮಂ
ಕಿಂ ವಾಭಿನಂದತಿ ಚರನ್ಪ್ರಣಯಾವಲೋಕೈಃ ॥ ೧೨ ॥

ಪೃಚ್ಛತೇಮಾ ಲತಾ ಬಾಹೂನಪ್ಯಾಶ್ಲಿಷ್ಟಾ ವನಸ್ಪತೇಃ ।
ನೂನಂ ತತ್ಕರಜಸ್ಪೃಷ್ಟಾ ಬಿಭ್ರತ್ಯುತ್ಪುಲಕಾನ್ಯಹೋ ॥ ೧೩ ॥

ಇತ್ಯುನ್ಮತ್ತವಚೋಗೋಪ್ಯಃ ಕೃಷ್ಣಾನ್ವೇಷಣಕಾತರಾಃ ।
ಲೀಲಾ ಭಗವತಸ್ತಾಸ್ತಾ ಹ್ಯನುಚಕ್ರುಸ್ತದಾತ್ಮಿಕಾಃ ॥ ೧೪ ॥

ಕಸ್ಯಾಶ್ಚಿತ್ಪೂತನಾಯಂತ್ಯಾಃ ಕೃಷ್ಣಾಯಂತ್ಯಪಿಬತ್ಸ್ತನಮ್ ।
ತೋಕಾಯಿತ್ವಾ ರುದತ್ಯನ್ಯಾ ಪದಾಹಂಛಕಟಾಯತೀಮ್ ॥ ೧೫ ॥

ದೈತ್ಯಾಯಿತ್ವಾ ಜಹಾರಾನ್ಯಾಮೇಕಾ ಕೃಷ್ಣಾರ್ಭಭಾವನಾಮ್ ।
ರಿಂಗಯಾಮಾಸ ಕಾಪ್ಯಂಘ್ರೀ ಕರ್ಷಂತೀ ಘೋಷನಿಃಸ್ವನೈಃ ॥ ೧೬ ॥

ಚರಣಸ್ಪರ್ಶದಿಂದ ಉಂಟಾಯಿತೇ? ಅಥವಾ ವಾಮನಾವತಾರದಲ್ಲಿ ವಿಶ್ವರೂಪವನ್ನು ಧರಿಸಿ ನಿನ್ನನ್ನು ಅಳೆದ ಕಾರಣದಿಂದಾಯಿತೇ? ಅದಕ್ಕಿಂತಲೂ ಮೊದಲು ಭಗವಾನ್ ವರಾಹನ ಅಂಗ-ಸಂಗದ ಕಾರಣದಿಂದ ಈ ಸ್ಥಿತಿ ಉಂಟಾಯಿತೇ? ದಯಮಾಡಿ ನಮ್ಮ ಇನಿಯನು ಎಲ್ಲಿರುವನೆಂದು ತಿಳಿಸಿ ನಮ್ಮನ್ನು ಕಾಪಾಡು. ॥ ೧೦ ॥ ಗೆಳತಿಯಾದ ಹುಲ್ಲೆಯೇ! ನಮ್ಮ ಪ್ರಿಯತಮನು ತನ್ನ ಬೇರೆಯ ಪ್ರಿಯತಮೆಯೊಂದಿಗೆ ಕೂಡಿಕೊಂಡು ತನ್ನ ಸುಂದರವಾದ ಅಂಗಾಂಗಗಳಿಂದ ನಿಮ್ಮ ಕಣ್ಣುಗಳಿಗೆ ಹಬ್ಬವನ್ನು ಉಂಟುಮಾಡುತ್ತಾ ಇತ್ತಕಡೆ ಏನಾದರೂ ಬಂದನೇ? ಸಂಭ್ರಮದ ಆಲಿಂಗನದಿಂದ ಪ್ರೇಯಸಿಯ ಕುಚಗಳಲ್ಲಿದ್ದ ಕುಂಕುಮಕೇಸರಿಯಿಂದ ಕೆಂಪೇರಿದ ಗೋಕುಲಪತಿಯಾದ ಶ್ರೀಕೃಷ್ಣನು ವಕ್ಷಸ್ಥಳದಲ್ಲಿ ಶೋಭಿಸುವ ಮಲ್ಲಿಗೆ ಮಾಲೆಯ ಸುಗಂಧವು ಸರ್ವತ್ರ ವ್ಯಾಪಿಸಿದೆ. ಇದರಿಂದ ನಮ್ಮ ಪ್ರಾಣಕಾಂತನು ಇಲ್ಲಿಯೇ ಎಲ್ಲೋ ಇರಬೇಕು. ಸಖಿಯೇ! ಎಲ್ಲಿರುವನೆಂದು ಹೇಳು. ॥ ೧೧ ॥ ವೃಕ್ಷಾಧಿದೇವತೆಗಳಿರಾ! ಬಲರಾಮನ ಸೋದರನಾದ ನಮ್ಮ ಪ್ರಿಯತಮನು ಧರಿಸಿದ ತುಳಸಿಮಾಲೆಯ ಸುಗಂಧದಿಂದ ಆಕರ್ಷಿತವಾದ ದುಂಬಿಗಳ ಗುಂಪು ಅವನನ್ನು ಅನುಸರಿಸಿಯೇ ಹೋಗುತ್ತಾ ಇರುತ್ತದೆ. ನಮ್ಮ ಪ್ರಾಣಕಾಂತನು ತನ್ನ ಒಂದು ತೋಳನ್ನು ಪ್ರೇಯಸಿಯ ಹೆಗಲಮೇಲಿಟ್ಟು ಮತ್ತೊಂದು ಕೈಯಿಂದ ಕಮಲಪುಷ್ಪವನ್ನು ತಿರುಗಿಸುತ್ತಾ ಇತ್ತಕಡೆ ಬಂದನೇ? ಅವನಿಗೆ ಪ್ರಣಾಮಮಾಡಲೆಂದೇ ನೀವು ಬಗ್ಗಿರುವಂತೆ ತೋರುತ್ತದೆ. ಪ್ರೇಮಪೂರ್ವಕವಾದ ಕುಡಿನೋಟದಿಂದ ಅವನೂ ನಿಮ್ಮನ್ನು ಅಭಿನಂದಿಸಿರಬೇಕು. ॥ ೧೨ ॥ ಸಖಿಯರೇ! ಈ ಲತೆಗಳಲ್ಲಿ ಕೇಳಿರಿ. ಇವುಗಳು ತಮ್ಮ ಪತಿಯಾದ ವೃಕ್ಷದ ರೆಂಬೆಗಳೆಂಬ ತೋಳುಗಳಿಂದ ಆಲಿಂಗಿಸಲ್ಪಟ್ಟರೂ ನಮ್ಮ ಪ್ರಿಯತಮನಾದ ಶ್ರೀಕೃಷ್ಣನ ನಖಕ್ಷತದಿಂದಲೆ ರೋಮಾಂಚಿತವಾಗಿವೆ. ಆಹಾ! ಇವರ ಸೌಭಾಗ್ಯವೆಂತಹುದು? ॥ ೧೩ ॥

ಪರೀಕ್ಷಿತನೇ! ಹೀಗೆ ಉನ್ಮತ್ತರಾದ ಗೋಪಿಯರು ಪ್ರಲಾಪಿಸುತ್ತಾ ಭಗವಾನ್ ಶ್ರೀಕೃಷ್ಣನನ್ನು ಹುಡುಕುತ್ತಾ - ಹುಡುಕುತ್ತಾ ಕಾತರರಾಗಿದ್ದರು. ಹಾಗೇ ಹುಡುಕುತ್ತಿದ್ದ ಗೋಪಿಯರಿಗೆ ಪುನಃ ತನ್ಮಯತೆ ಉಂಟಾಯಿತು. ತಾವೇ ಕೃಷ್ಣನೆಂದು ಭಾವಿಸಿಕೊಂಡು ಭಗವಂತನ ಬೇರೆ-ಬೇರೆ ಲೀಲೆಗಳನ್ನು ಅನುಕರಣೆ ಮಾಡತೊಡಗಿದರು. ॥ ೧೪ ॥ ಒಬ್ಬಳು ಪೂತನೆಯಾದರೆ ಮತ್ತೊಬ್ಬಳು ಶ್ರೀಕೃಷ್ಣನಾಗಿ ಅವಳ ಸ್ತನ್ಯಪಾನ ಮಾಡತೊಡಗಿದಳು. ಒಬ್ಬಳು ಬಂಡಿಯಾದರೆ ಮತ್ತೊಬ್ಬಳು ಬಾಲಕೃಷ್ಣನಾಗಿ ಅಳುತ್ತಾ ಆಕೆಯನ್ನು ಕಾಲಿನಿಂದ ಒದ್ದುಬಿಟ್ಟಳು. ॥ ೧೫ ॥ ಓರ್ವಗೋಪಿಯು ಬಾಲಕೃಷ್ಣನ ಭಾವವನ್ನು ಹೊಂದಿ ಕುಳಿತಿದ್ದಾಗ ತೃಣಾವರ್ತನ ಭಾವವನ್ನು ಹೊಂದಿದ್ದ ಗೋಪಿಯು ಆಕೆಯನ್ನು ಅಪಹರಿಸಿಕೊಂಡು ಹೋಗುವಳು. ಕೆಲವು ಗೋಪಿಯರು ಬಾಲಮುಕುಂದನಂತೆ ಅಂಬೆಗಾಲಿಕ್ಕುತ್ತಾ ನಡೆಯತೊಡಗಿದ್ದಾಗ ಅವರ ಕಾಲಂದುಗೆಗಳು ಝಣ-ಝಣ ಶಬ್ದಮಾಡುತ್ತಿದ್ದವು. ॥ ೧೬ ॥

ಕೃಷ್ಣರಾಮಾಯಿತೇ ದ್ವೇ ತು ಗೋಪಾಯಂತ್ಯಶ್ಚ ಕಾಶ್ಚನ ।
ವತ್ಸಾಯತೀಂ ಹಂತಿ ಚಾನ್ಯಾ ತತ್ರೈಕಾ ತು ಬಕಾಯತೀಮ್ ॥ ೧೭ ॥

ಆಹೂಯ ದೂರಗಾ ಯದ್ವತ್ಕೃಷ್ಣಸ್ತಮನುಕುರ್ವತೀಮ್ ।
ವೇಣುಂ ಕ್ವಣಂತೀಂ ಕ್ರೀಡಂತೀಮನ್ಯಾಃ ಶಂಸಂತಿ ಸಾಧ್ವಿತಿ ॥ ೧೮ ॥

ಕಸ್ಯಾಂಚಿತ್ಸ್ವಭುಜಂ ನ್ಯಸ್ಯ ಚಲಂತ್ಯಾಹಾಪರಾ ನನು ।
ಕೃಷ್ಣೋಽಹಂ ಪಶ್ಯತ ಗತಿಂ ಲಲಿತಾಮಿತಿ ತನ್ಮನಾಃ ॥ ೧೯ ॥

ಮಾ ಭೈಷ್ಟ ವಾತವರ್ಷಾಭ್ಯಾಂ ತತ್ತ್ರಾಣಂ ವಿಹಿತಂ ಮಯಾ ।
ಇತ್ಯುಕ್ತ್ವೈಕೇನ ಹಸ್ತೇನ ಯತಂತ್ಯುನ್ನಿದಧೇಽಂಬರಮ್ ॥ ೨೦ ॥

ಆರುಹ್ಯೈಕಾ ಪದಾಽಽಕ್ರಮ್ಯ ಶಿರಸ್ಯಾಹಾಪರಾಂ ನೃಪ ।
ದುಷ್ಟಾಹೇ ಗಚ್ಛ ಜಾತೋಽಹಂ ಖಲಾನಾಂ ನನು ದಂಡಧೃಕ್ ॥ ೨೧ ॥

ತತ್ರೈಕೋವಾಚ ಹೇ ಗೋಪಾ ದಾವಾಗ್ನಿಂ ಪಶ್ಯತೋಲ್ಬಣಮ್ ।
ಚಕ್ಷೂಂಷ್ಯಾಶ್ವಪಿದಧ್ವಂ ವೋ ವಿಧಾಸ್ಯೇ ಕ್ಷೇಮಮಂಜಸಾ ॥ ೨೨ ॥

ಬದ್ಧಾನ್ಯಯಾ ಸ್ರಜಾ ಕಾಚಿತ್ತನ್ವೀ ತತ್ರ ಉಲೂಖಲೇ ।
ಭೀತಾ ಸುದೃಕ್ಪಿಧಾಯಾಸ್ಯಂ ಭೇಜೇ ಭೀತಿವಿಡಂಬನಮ್ ॥ ೨೩ ॥

ಏವಂ ಕೃಷ್ಣಂ ಪೃಚ್ಛಮಾನಾ ವೃಂದಾವನಲತಾಸ್ತರೂನ್ ।
ವ್ಯಚಕ್ಷತ ವನೋದ್ದೇಶೇ ಪದಾನಿ ಪರಮಾತ್ಮನಃ ॥ ೨೪ ॥

ಪದಾನಿ ವ್ಯಕ್ತಮೇತಾನಿ ನಂದಸೂನೋರ್ಮಹಾತ್ಮನಃ ।
ಲಕ್ಷ್ಯಂತೇ ಹಿ ಧ್ವಜಾಂಭೋಜವಜ್ರಾಂಕುಶಯವಾದಿಭಿಃ ॥ ೨೫ ॥

ಒಬ್ಬಳು ಕೃಷ್ಣನಾದರೆ, ಇನ್ನೊಬ್ಬಳು ಬಲರಾಮಳಾದಳು. ಉಳಿದ ಗೋಪಿಯರು ಗೊಲ್ಲಬಾಲಕರಾದರು. ಒಬ್ಬಳು ವತ್ಸಾಸುರನಾದರೆ ಮತ್ತೊಬ್ಬಳು ಬಕಾಸುರಳಾದಳು. ಆಗ ಗೋಪಿಯರು ಬೇರೆ-ಬೇರೆಯಾಗಿ ಕೃಷ್ಣಭಾವವನ್ನು ಹೊಂದಿ ವತ್ಸಾಸುರ ಮತ್ತು ಬಕಾಸುರರಾದ ಗೋಪಿಯರನ್ನು ಕೊಲ್ಲುವ ಲೀಲೆಯನ್ನು ಮಾಡಿದರು. ॥ ೧೭ ॥ ಶ್ರೀಕೃಷ್ಣನು ವನದಲ್ಲಿ ಕೊಳಲನ್ನೂದಿ ದೂರಕ್ಕೆ ಹೋದ ಹಸುಗಳನ್ನು ಕರೆಯುವಂತೆ ಓರ್ವಗೋಪಿಯು ನಟಿಸತೊಡಗಿದಳು. ಆಗ ಉಳಿದ ಗೋಪಿಯರು ಗೊಲ್ಲಬಾಲಕರಂತೆ ಭಲೇ! ಭಲೇ! ಕೃಷ್ಣ! ಎಂದು ಪ್ರಶಂಸಿಸತೊಡಗಿದರು. ॥ ೧೮ ॥ ಓರ್ವ ಗೋಪಿಯು ತನ್ನನ್ನು ಕೃಷ್ಣನೆಂದೇ ಭಾವಿಸಿಕೊಂಡು ಇನ್ನೊಬ್ಬ ಸಖಿಯ ಹೆಗಲಮೇಲೆ ಕೈಯನ್ನಿಟ್ಟು ನಡೆಯುತ್ತಾ ಉಳಿದ ಗೋಪಿಯರಿಗೆ ಹೇಳುತ್ತಾಳೆ - 'ಮಿತ್ರರೇ! ನಾನು ಕೃಷ್ಣನಾಗಿದ್ದೇನೆ. ನೀವೆಲ್ಲ ನನ್ನ ಮನೋಹರವಾದ ನಡಿಗೆಯನ್ನು ನೋಡಿರಿ'. ॥ ೧೯ ॥ ಯಾರೋ ಓರ್ವ ಗೋಪಿಯು ಶ್ರೀಕೃಷ್ಣನಾಗಿ 'ಎಲೈ ವ್ರಜವಾಸಿಗಳೇ! ನೀವೆಲ್ಲ ಬಿರುಗಾಳಿ - ನೀರಿನಿಂದ ಹೆದರಬೇಡಿರಿ. ಅದರಿಂದ ರಕ್ಷಿಸಿಕೊಳ್ಳುವ ಉಪಾಯವನ್ನು ನಾನು ಯೋಚಿಸಿದ್ದೇನೆ'. ಹೀಗೆ ಹೇಳುತ್ತಾ - ಗೋವರ್ಧನೋದ್ಧರಣವನ್ನು ಅನುಕರಣೆ ಮಾಡುತ್ತಾ ತನ್ನ ಮೇಲ್ಹೊದಿಕೆಯನ್ನೇ ಎತ್ತಿ ಹಿಡಿಯುವಳು. ॥ ೨೦ ॥ ಪರೀಕ್ಷಿತನೇ! ಒಬ್ಬಳು ಕಾಲಿಯ ನಾಗನಾದರೆ ಮತ್ತೊಬ್ಬಳು ಶ್ರೀಕೃಷ್ಣನಾಗಿ ಆಕೆಯ ತಲೆಯ ಮೇಲೆ ಕಾಲನ್ನಿಟ್ಟು ಹತ್ತಿಕೊಂಡು - 'ಎಲೈ ದುಷ್ಟ ಸರ್ಪವೇ! ನೀನು ಇಲ್ಲಿಂದ ಹೊರಟುಹೋಗು. ನಾನು ದುಷ್ಟರ ದಮನಕ್ಕಾಗಿ ಹುಟ್ಟಿರುವೆನು' ಎಂದು ಹೇಳತೊಡಗಿದಳು. ॥ ೨೧ ॥ ಇಷ್ಟರಲ್ಲೇ ಓರ್ವಗೋಪಿಯು ಹೇಳಿದಳು - ಎಲೈ ಗೋಪರೇ! ನೋಡಿ, ಕಾಡಿಗೆ ಭಯಂಕರವಾದ ಕಾಡ್ಗಿಚ್ಚು ಹತ್ತಿಕೊಂಡಿದೆ. ನೀವೆಲ್ಲ ಬೇಗ-ಬೇಗನೇ ನಿಮ್ಮ ಕಣ್ಣುಗಳನ್ನು ಮುಚ್ಚಿಕೊಳ್ಳಿ. ನಾನು ನಿರಾಯಾಸವಾಗಿ ನಿಮ್ಮನ್ನು ರಕ್ಷಿಸುವೆನು. ॥ ೨೨ ॥ ಓರ್ವ ಗೋಪಿಯು ಯಶೋದೆಯಾದರೆ ಮತ್ತೊಬ್ಬಳು ಶ್ರೀಕೃಷ್ಣಳಾದಳು. ಯಶೋದೆಯಾದ ಗೋಪಿಯು ಹೂವಿನ ಹಾರದಿಂದ ಕೃಷ್ಣನನ್ನು ಒರಳಿಗೆ ಕಟ್ಟಿದ ಲೀಲೆಯನ್ನು ನಟಿಸಿದರೆ, ಶ್ರೀಕೃಷ್ಣನಾದ ಗೋಪಿಯು ಮುಖವನ್ನು ಮುಚ್ಚಿಕೊಂಡು ಭಯಗೊಂಡವಳಂತೆ ಅಣಕವಾಡಿದಳು. ॥ ೨೩ ॥

ಪರೀಕ್ಷಿತನೇ! ಹೀಗೆ ಗೋಪಿಯರು ನಾನಾ ಭಾವಗಳನ್ನು ಹೊಂದಿ ಶ್ರೀಕೃಷ್ಣನ ಲೀಲಾವಿನೋದಗಳನ್ನು ಅನುಕರಿಸಿದ ನಂತರ ಪುನಃ ಮರ - ಗಿಡ - ಬಳ್ಳಿಗಳಲ್ಲಿ - ಶ್ರೀಕೃಷ್ಣನೆಲ್ಲಿರುವನು ? ಪ್ರಿಯ ಕೃಷ್ಣನನ್ನು ಕಂಡಿರಾ ? ಎಂದು ಪ್ರಶ್ನಿಸತೊಡಗಿದರು. ಹೀಗೆ ಹುಡುಕುತ್ತಿರುವಾಗಲೇ ಒಂದೆಡೆಯಲ್ಲಿ ಭಗವಂತನ ಚರಣ ಚಿಹ್ನೆಯನ್ನು ಕಂಡರು. ॥ ೨೪ ॥ ಅವರೆಲ್ಲರೂ ಪರಸ್ಪರ ಮಾತನಾಡಿಕೊಂಡರು - ಸಖಿಯರೇ! ಈ ಚರಣ ಚಿಹ್ನೆಯು ಖಂಡಿತವಾಗಿ ಉದಾರಶಿರೋಮಣಿ ನಂದನಂದನ ಶ್ಯಾಮಸುಂದರನದೇ ಆಗಿದೆ. ಏಕೆಂದರೆ, ಇದರಲ್ಲಿ ಧ್ವಜ, ಕಮಲ, ವಜ್ರ, ಅಂಕುಶ ಮತ್ತು ಯವಾದಿಗಳ ಚಿಹ್ನೆಗಳು ಸ್ಪಷ್ಟವಾಗಿ ಕಂಡುಬರುತ್ತವೆ. ॥ ೨೫ ॥

ತೈಸ್ತೈಃ ಪದೈಸ್ತತ್ಪದವೀಮನ್ವಿಚ್ಛಂತ್ಯೋಽಗ್ರತೋಽಬಲಾಃ ।
ಬಧ್ವಾಃ ಪದೈಃ ಸುಪೃಕ್ತಾನಿ ವಿಲೋಕ್ಯಾರ್ತಾಃ ಸಮಬ್ರುವನ್ ॥ ೨೬ ॥

ಕಸ್ಯಾಃ ಪದಾನಿ ಚೈತಾನಿ ಯಾತಾಯಾ ನಂದಸೂನುನಾ ।
ಅಂಸನ್ಯಸ್ತಪ್ರಕೋಷ್ಠಾಯಾಃ ಕರೇಣೋಃ ಕರಿಣಾ ಯಥಾ ॥ ೨೭ ॥

ಅನಯಾಽಽರಾಧಿತೋ ನೂನಂ ಭಗವಾನ್ ಹರಿರೀಶ್ವರಃ ।
ಯನ್ನೋ ವಿಹಾಯ ಗೋವಿಂದಃ ಪ್ರೀತೋ ಯಾಮನಯದ್ರಹಃ ॥ ೨೮ ॥

ಧನ್ಯಾ ಅಹೋ ಅಮೀ ಆಲ್ಯೋ ಗೋವಿಂದಾಂಘ್ರ್ಯಬ್ಜರೇಣವಃ ।
ಯಾನ್ಬ್ರಹ್ಮೇಶೋ ರಮಾ ದೇವೀ ದಧುರ್ಮೂರ್ಧ್ನ್ಯಘನುತ್ತಯೇ ॥ ೨೯ ॥

ತಸ್ಯಾ ಅಮೂನಿ ನಃ ಕ್ಷೋಭಂ ಕುರ್ವಂತ್ಯುಚ್ಚೈಃ ಪದಾನಿ ಯತ್ ।
ಯೈಕಾಪಹೃತ್ಯ ಗೋಪೀನಾಂ ರಹೋ ಭುಂಕ್ತೇಽಚ್ಯುತಾಧರಮ್ ॥ ೩೦ ॥

ನ ಲಕ್ಷ್ಯಂತೇ ಪದಾನ್ಯತ್ರ ತಸ್ಯಾ ನೂನಂ ತೃಣಾಂಕುರೈಃ ।
ಖಿದ್ಯತ್ಸುಜಾತಾಂಘ್ರಿತಲಾಮುನ್ನಿನ್ಯೇ ಪ್ರೇಯಸೀಂ ಪ್ರಿಯಃ ॥ ೩೧ ॥

ಇಮಾನ್ಯಧಿಕಮಗ್ನಾನಿ ಪದಾನಿ ವಹತೋ ವಧೂಮ್ ।
ಗೋಪ್ಯಃ ಪಶ್ಯತ ಕೃಷ್ಣಸ್ಯ ಭಾರಾಕ್ರಾಂತಸ್ಯ ಕಾಮಿನಃ ॥ ೩೨ ॥

ಅತ್ರಾವರೋಪಿತಾ ಕಾಂತಾ ಪುಷ್ಪಹೇತೋರ್ಮಹಾತ್ಮನಾ ।
ಅತ್ರ ಪ್ರಸೂನಾವಚಯಃ ಪ್ರಿಯಾರ್ಥೇ ಪ್ರೇಯಸಾ ಕೃತಃ ।
ಪ್ರಪದಾಕ್ರಮಣೇ ಏತೇ ಪಶ್ಯತಾಸಕಲೇ ಪದೇ ॥ ೩೩ ॥

ಆ ಚರಣಚಿಹ್ನೆಗಳ ಜಾಡನ್ನೇ ಹಿಡಿದುಕೊಂಡು ಗೋಕುಲ ನಾಥ ಭಗವಂತನನ್ನು ಹುಡುಕುತ್ತಾ ಗೋಪಿಯರು ಮುಂದು ವರಿದರು. ಆಗ ಅವರಿಗೆ ಶ್ರೀಕೃಷ್ಣನ ಚರಣ ಚಿಹ್ನೆಯ ಜೊತೆಯಲ್ಲೇ ಯಾರೋ ಓರ್ವ ವ್ರಜಯುವತಿಯ ಹೆಜ್ಜೆಯ ಗುರುತೂ ಗೋಚರಿಸಿತು.* ಅದನ್ನು ನೋಡಿ ಅವರೆಲ್ಲರೂ ದುಃಖಿತರಾದರು ಹಾಗೂ ಪರಸ್ಪರ ಮಾತನಾಡಿಕೊಂಡರು. ॥ ೨೬ ॥ ಹೆಣ್ಣಾನೆಯು ಗಂಡಾನೆಯೊಂದಿಗೆ ಹೋಗುವಂತೆಯೇ ನಂದನಂದನ ಶ್ಯಾಮ ಸುಂದರನೊಡನೆ ಅವನ ಹೆಗಲಮೇಲೆ ಕೈಯನ್ನಿಟ್ಟು ನಡೆದು ಕೊಂಡು ಹೋದ ಯಾರೋ ಭಾಗ್ಯಶಾಲಿಯ ಚರಣಚಿಹ್ನೆಗಳೇ ಇದಾಗಿವೆಯಲ್ಲ! ॥ ೨೭ ॥ ಈಕೆಯು ಸರ್ವಶಕ್ತನಾದ ಭಗವಾನ್ ಶ್ರೀಕೃಷ್ಣನ ಆರಾಧಿಕೆಯೇ ಆಗಿರಬೇಕು. ಅದಕ್ಕಾಗಿ ಇವಳ ಮೇಲೆ ಪ್ರಸನ್ನನಾದ ನಮ್ಮ ಪ್ರಾಣಪ್ರಿಯ ಶ್ಯಾಮಸುಂದರನು ನಮ್ಮನ್ನು ಅಗಲಿ ಈಕೆಯನ್ನು ಏಕಾಂತಕ್ಕೆ ಕರೆದುಕೊಂಡು ಹೋಗಿರು ವನು. ॥ ೨೮ ॥ ಪ್ರಿಯ ಸಖಿಯರೇ! ಭಗವಾನ್ ಶ್ರೀಕೃಷ್ಣನ ಚರಣಕಮಲಕ್ಕೆ ಸೋಂಕಿದ ರಜವು ಧನ್ಯವಾಗಿದೆ. ಅದರ ಸೌಭಾಗ್ಯ ಎಂತಹುದು! ಏಕೆಂದರೆ, ತಮ್ಮ ಅಮಂಗಳವನ್ನು ಕಳೆದುಕೊಳ್ಳಲು ಬ್ರಹ್ಮ ರುದ್ರರೇ ಆದಿಯಾಗಿ ಲಕ್ಷ್ಮೀದೇವಿಯೂ ಕೂಡ ಆ ರಜವನ್ನು ತಮ್ಮ ಶಿರದಲ್ಲಿ ಧರಿಸಿಕೊಳ್ಳುವರು. ॥ ೨೯ ॥ ಸಖೀಯರೇ! ಗೋಪಿಯರೆಲ್ಲರಿಗೂ ಸೇರಬೇಕಾಗಿದ್ದ ನಮ್ಮ ಇನಿಯನ ಅಧರಾ ಮೃತವನ್ನು ಅಪಹರಿಸಿ ಇವಳೊಬ್ಬಳೇ ಪಾನಮಾಡುತ್ತಿರುವಳಲ್ಲ! ಅಂತಹವಳ ಈ ಪದಚಿಹ್ನೆಗಳನ್ನು ನೋಡುತ್ತಲೇ ನಮ್ಮ ಮನಸ್ಸು ಬಹಳವಾಗಿ ತಳಮಳಿಸುತ್ತಿದೆ. ॥ ೩೦ ॥ ಸಂಗಾತಿಗಳೇ! ಇತ್ತ ನೋಡಿ, ಇಲ್ಲಿಂದ ಮುಂದಕ್ಕೆ ನಮ್ಮ ಇನಿಯನ ಪ್ರೇಯಸಿಯ ಹೆಜ್ಜೆಗಳು ಕಾಣುತ್ತಿಲ್ಲ. ಬಹುಶಃ ನಮ್ಮ ಪ್ರಾಣಕಾಂತನು ತನ್ನ ನೂತನ ಪ್ರೇಯಸಿಯ ಕೋಮಲವಾದ ಕಾಲುಗಳಿಗೆ ಹುಲ್ಲಿನ ಕೂಳೆಗಳಿಂದ ನೋವುಂಟಾದೀತೆಂದು ಭಾವಿಸಿ ಹೆಗಲಮೇಲೆ ಹೊತ್ತುಕೊಂಡೇ ಹೋಗಿರಬಹುದು! ॥ ೩೧ ॥ ಗೆಳತಿ! ನೀನು ಹೇಳಿದ್ದು ನಿಜ. ಇಲ್ಲಿ ನೋಡಿರಿ. ನಮ್ಮ ಪ್ರಾಣಕಾಂತನ ಹೆಜ್ಜೆಯ ಗುರುತುಗಳು ಇಲ್ಲಿ ಬಹಳವಾಗಿ ಊರಿರುವಂತೆ ಕಾಣುತ್ತಿವೆ. ಪ್ರೇಮಿಯಾದ ಶ್ರೀಕೃಷ್ಣನು ವಧುವಿನ ಭಾರದಿಂದ ಆಕ್ರಾಂತನಾಗಿ ಹೆಜ್ಜೆಯಿಡುತ್ತಿದ್ದುದರಿಂದಲೇ ಆ ಹೆಜ್ಜೆಗಳು ಆಳವಾಗಿ ನೆಲದಮೇಲೆ ಮೂಡಿವೆ. ॥ ೩೨ ॥ ಗೆಳತಿಯರೇ! ಇಲ್ಲಿ ನೋಡಿರಿ. ಇಲ್ಲಿಂದ ಮುಂದಕ್ಕೆ ನಮ್ಮ ಪ್ರಾಣಕಾಂತನ ದಟ್ಟವಾದ ಹೆಜ್ಜೆಯ ಗುರುತು ಕಾಣಿಸುತ್ತಿಲ್ಲ. ಆದುದರಿಂದ ಅವನು ತನ್ನ ಪ್ರೇಯಸಿಗೆ ಹೂವುಗಳನ್ನು ಬಿಡಿಸಿ ಕೊಡಲು ಇಲ್ಲಿ ಅವಳನ್ನು ಹೆಗಲಿನಿಂದ ಇಳಿಸಿರಬಹುದು. ನೋಡಿ, ಈ ಹೂಗಿಡದ ಬಳಿ ನೋಡಿರಿ. ಈ ಹೂಗಿಡದ ಕೆಳಗೆ ನಮ್ಮ ಪ್ರಾಣಕಾಂತನ ತುದಿಕಾಲುಗಳ ಚಿಹ್ನೆಗಳು ಮಾತ್ರ ಕಾಣಿಸುತ್ತಿವೆ. ಹಿಮ್ಮಡಿಗಳ ಗುರುತು ಕಾಣಿಸುವುದಿಲ್ಲವಲ್ಲ. ಬಹುಶಃ ಮೆಟ್ಟಂ ಗಾಲಿನ ಮೇಲೆ ನಿಂತು ಗಿಡದ ತುದಿಯಲ್ಲಿರುವ ಹೂವುಗಳನ್ನು ಬಿಡಿಸಿ ತನ್ನ ಇನಿಯಳಿಗೆ ಕೊಟ್ಟಿರಬಹುದು. ॥ ೩೩ ॥

* ಇವಳೇ ರಾಧಾದೇವಿಯೆಂದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ.

ಕೇಶಪ್ರಸಾಧನಂ ತ್ವತ್ರ ಕಾಮಿನ್ಯಾಃ ಕಾಮಿನಾ ಕೃತಮ್ ।
ತಾನಿ ಚೂಡಯತಾ ಕಾಂತಾಮುಪವಿಷ್ಟಮಿಹ ಧ್ರುವಮ್ ॥ ೩೪ ॥

ರೇಮೇ ತಯಾ ಚಾತ್ಮರತ ಆತ್ಮಾರಾಮೋಽಪ್ಯಖಂಡಿತಃ ।
ಕಾಮಿನಾಂ ದರ್ಶಯನ್ ದೈನ್ಯಂ ಸ್ತ್ರೀಣಾಂ ಚೈವ ದುರಾತ್ಮತಾಮ್ ॥ ೩೫ ॥

ಇತ್ಯೇವಂ ದರ್ಶಯಂತ್ಯಸ್ತಾಶ್ಚೇರುರ್ಗೋಪ್ಯೋ ವಿಚೇತಸಃ ।
ಯಾಂ ಗೋಪೀಮನಯತ್ಕೃಷ್ಣೋ ವಿಹಾಯಾನ್ಯಾಃ ಸ್ತ್ರಿಯೋ ವನೇ ॥ ೩೬ ॥

ಸಾ ಚ ಮೇನೇ ತದಾಽಽತ್ಮಾನಂ ವರಿಷ್ಠಂ ಸರ್ವಯೋಷಿತಾಮ್ ।
ಹಿತ್ವಾ ಗೋಪೀಃ ಕಾಮಯಾನಾ ಮಾಮಸೌ ಭಜತೇ ಪ್ರಿಯಃ ॥ ೩೭ ॥

ತತೋ ಗತ್ವಾ ವನೋದ್ದೇಶಂ ದೃಪ್ತಾ ಕೇಶವಮಬ್ರವೀತ್ ।
ನ ಪಾರಯೇಽಹಂ ಚಲಿತುಂ ನಯ ಮಾಂ ಯತ್ರ ತೇ ಮನಃ ॥ ೩೮ ॥

ಏವಮುಕ್ತಃ ಪ್ರಿಯಾಮಾಹ ಸ್ಕಂಧ ಆರುಹ್ಯತಾಮಿತಿ ।
ತತಶ್ಚಾಂತರ್ದಧೇ ಕೃಷ್ಣಃ ಸಾ ವಧೂರನ್ವತಪ್ಯತ ॥ ೩೯ ॥

ಹಾ ನಾಥ ರಮಣ ಪ್ರೇಷ್ಠ ಕ್ವಾಸಿ ಕ್ವಾಸಿ ಮಹಾಭುಜ ।
ದಾಸ್ಯಾಸ್ತೇ ಕೃಪಣಾಯಾ ಮೇ ಸಖೇ ದರ್ಶಯ ಸನ್ನಿಧಿಮ್ ॥ ೪೦ ॥

ಅನ್ವಿಚ್ಛಂತ್ಯೋ ಭಗವತೋ ಮಾರ್ಗಂ ಗೋಪ್ಯೋಽವಿದೂರತಃ ।
ದದೃಶುಃ ಪ್ರಿಯವಿಶ್ಲೇಷಮೋಹಿತಾಂ ದುಃಖಿತಾಂ ಸಖೀಮ್ ॥ ೪೧ ॥

ಗೆಳತಿಯರೇ! ಇಲ್ಲಿ ನೋಡಿರಿ. ನಮ್ಮ ಪ್ರಾಣಕಾಂತನು ತನ್ನ ಪ್ರೇಯಸಿಯೊಡನೆ ಕುಳಿತಿರುವ ಗುರುತುಗಳು ಕಾಣುತ್ತಿವೆ. ಬಹುಶಃ ಕಾಮುಕನಾದ ಶ್ರೀಕೃಷ್ಣನು ಇಲ್ಲಿಯೇ ಕುಳಿತು ಪ್ರೇಮಿಯಾದ ತನ್ನ ಪ್ರೇಯಸಿಯ ತಲೆಯನ್ನು ಬಾಚಿ ಹೆರಳನ್ನು ಹಾಕಿ ಹೂವನ್ನು ಮುಡಿಸಿರಬೇಕು. ॥ ೩೪ ॥ ಪರೀಕ್ಷಿತ ಮಹಾರಾಜಾ! ಆತ್ಮತೃಪ್ತನೂ, ಆತ್ಮಾರಾಮನೂ, ಅಖಂಡನೂ ಆದ ಭಗವಾನ್ ಶ್ರೀಕೃಷ್ಣನಲ್ಲಿ ಕಾಮದ ಕಲ್ಪನೆಯಾದರೂ ಹೇಗಿದ್ದೀತು? ಆದರೂ ಸ್ತ್ರೀಯರಿಗೆ ವಶನೋ ಎಂಬಂತೆ ಶ್ರೀಕೃಷ್ಣನು ಆ ಗೋಪಿಯೊಡನೆ ಒಂದು ಲೀಲೆಯನ್ನು ರಚಿಸಿದ್ದನು. ॥ ೩೫ ॥

ಈ ಪ್ರಕಾರವಾಗಿ ಗೋಪಿಯರು ಉನ್ಮತ್ತರಂತಾಗಿ, ದೇಹಭಾವನ್ನು ಮರೆತು ಭಗವಂತನ ಚರಣ ಚಿಹ್ನೆಗಳನ್ನು ಒಬ್ಬರು ಮತ್ತೊಬ್ಬರಿಗೆ ತೋರಿಸುತ್ತಾ ಕಾಡಿಂದ-ಕಾಡಿಗೆ ಅಲೆಯುತ್ತಿದ್ದರು. ಇತ್ತ ಭಗವಾನ್ ಶ್ರೀಕೃಷ್ಣನು ಬೇರೆ ಗೋಪಿಯರನ್ನು ವನದಲ್ಲಿ ಬಿಟ್ಟು ಏಕಾಂತಕ್ಕೆ ಕೊಂಡುಹೋದ ಭಾಗ್ಯವತಿಯಾದ ಗೋಪಿಯು 'ನಾನೇ ಸಮಸ್ತ ಗೋಪಿಯರಲ್ಲಿ ಶ್ರೇಷ್ಠಳಾಗಿದ್ದೇನೆ. ಆದಕ್ಕಾಗಿಯೇ ನಮ್ಮ ಪ್ರಿಯ ಶ್ರೀಕೃಷ್ಣನು ನನ್ನನ್ನು ಬಯಸುತ್ತಿದ್ದು, ಇತರ ಗೋಪಿಯರನ್ನೆಲ್ಲ ಬಿಟ್ಟು, ಕೇವಲ ನನ್ನನ್ನೇ ಆದರಿಸುತ್ತಿದ್ದಾನೆ.॥೩೬-೩೭॥ ಆ ಗೋಪಿಯ ಅಹಂಕಾರವು ಭಾವನೆಗೆ ಮಾತ್ರವೇ ಸೀಮಿತವಾಗಿರದೆ ಬ್ರಹ್ಮ-ರುದ್ರಾದಿಗಳಿಗೂ ಶಾಸಕನಾದ ಭಗವಾನ್ ಶ್ರೀಕೃಷ್ಣನನ್ನೇ ಶಾಸನ ಮಾಡತೊಡಗಿತು. ಒಮ್ಮೆ ಅರಣ್ಯದಲ್ಲಿ ಸಂಚರಿಸುತ್ತಿದ್ದಾಗ ತಾನೇ ಸರ್ವಶ್ರೇಷ್ಠಳೆಂಬ ಸೊಕ್ಕಿನಿಂದ ಮದಿಸಿದ ಗೋಪಿಯು ಕೇಶವನಿಗೆ ಹೇಳಿದಳು - ಪ್ರಿಯನೇ! ನನಗೆ ಇನ್ನು ಮುಂದೆ ನಡೆಯಲು ಸಾಧ್ಯವೇ ಇಲ್ಲ, ಬಳಲಿರುವೆನು. ನಿನಗೆ ಬೇರೆಲ್ಲಿಗಾದರೂ ವಿಹರಿಸಲು ಹೋಗಬೇಕೆಂದಿದ್ದರೆ ನನ್ನನ್ನು ಎತ್ತಿಕೊಂಡೇ ಹೋಗಬೇಕು. ॥ ೩೮ ॥ ತನ್ನ ಪ್ರಿಯತಮೆಯ ಇಂತಹ ಮಾತನ್ನು ಕೇಳಿದ ಶ್ಯಾಮಸುಂದರನು ಹೇಳಿದನು - ಪ್ರಿಯೆ! ಸರಿ, ಹಾಗಾದರೆ ಈಗ ನನ್ನ ಹೆಗಲೇರು. ಇದನ್ನು ಕೇಳಿದ ಗೋಪಿಯು ಶ್ರೀಕೃಷ್ಣನ ಹೆಗಲಮೇಲೆ ಏರತೊಡಗುತ್ತಲೇ ಅವನು ಅಂತರ್ಧಾನನಾದನು. ಗರ್ವಿಷ್ಠಳಾದ ಗೋಪಿಯು ಕುಸಿದು ಬಿದ್ದು ಪರಿತಪಿಸತೊಡಗಿದಳು. ॥ ೩೯ ॥ ಅಯ್ಯೋ! ನಾಥನೇ! ಎಲ್ಲಿರುವೆ? ಪ್ರಾಣನಾಥನೇ! ಮನೋರಮಣನೇ! ಮಹಾಭುಜನೇ! ನನ್ನನ್ನು ಬಿಟ್ಟು ಎಲ್ಲಿಗೆ ಹೋದೆ? ಗೆಳೆಯನೇ! ನಾನು ನಿನ್ನ ದಾಸಿ. ದೀನಳಾಗಿದ್ದೇನೆ. ದರ್ಶನವನ್ನಿತ್ತು ನಿನ್ನ ಸಾನ್ನಿಧ್ಯವನ್ನು ದಯಮಾಡಿ ತೋರಿ ಕಾಪಾಡು. ॥ ೪೦ ॥ ಪರೀಕ್ಷಿತ ರಾಜನೇ! ಭಗವಂತನ ಪಾದಕಮಲಗಳ ಗುರುತನ್ನೇ ಅನುಸರಿಸಿ ಅವನನ್ನು ಹುಡುಕುತ್ತಾ ಗೋಪಿಯರು ಸ್ವಲ್ಪ ದೂರದಲ್ಲಿಯೇ ತಮ್ಮ ಸಖಿಯೊಬ್ಬಳು ಪ್ರಿಯತಮನ ವಿಯೋಗದುಃಖದಿಂದ ವಿಮೋಹಿತಳಾಗಿ ಅಳುತ್ತಿರುವವಳನ್ನು ನೋಡಿದರು. ॥ ೪೧ ॥ ಒಡನೆಯೇ ಗೋಪಿಯರೆಲ್ಲರೂ ಆವಳ ಬಳಿಗೆ ಸಾರಿ ಆಕೆಯ ದುಃಖವನ್ನು ವಿಚಾರಿಸಿದರು. ಆಗ ಆಕೆಯು - ಮಾಧವನು ತನ್ನೊಬ್ಬಳನ್ನೇ ಪ್ರೀತಿಸಿ, ಗೌರವಿಸುತ್ತ ಇದ್ದುದರಿಂದ ತಾನು ಗರ್ವಿಷ್ಠಳಾಗಿ ಅವನನ್ನು ಅವಮಾನಿಸಿದ ಪ್ರಸಂಗವನ್ನೂ, ಪ್ರಾಣಪ್ರಿಯನಾದ ಮಾಧವನು ತನ್ನನ್ನು ಪರಿತ್ಯಜಿಸಿ

ತಯಾ ಕಥಿತಮಾಕರ್ಣ್ಯ ಮಾನಪ್ರಾಪ್ತಿಂ ಚ ಮಾಧವಾತ್ ।
ಅವಮಾನಂ ಚ ದೌರಾತ್ಮ್ಯಾದ್ವಿಸ್ಮಯಂ ಪರಮಂ ಯಯುಃ ॥ ೪೨ ॥

ಮಾಯವಾದುದನ್ನು ವಿವರಿಸಿ ಹೇಳಿದಳು. ಆಕೆಯ ಮಾತನ್ನು ಕೇಳಿದ ಗೋಪಿಯರೆಲ್ಲರೂ ಪರಮಾಶ್ಚರ್ಯಚಕಿತರಾದರು.॥೪೨॥

ತತೋಽವಿಶನ್ವನಂ ಚಂದ್ರಜ್ಯೋತ್ಸ್ನಾ ಯಾವದ್ವಿಭಾವ್ಯತೇ ।
ತಮಃ ಪ್ರವಿಷ್ಟಮಾಲಕ್ಷ್ಯ ತತೋ ನಿವವೃತುಃ ಸ್ತ್ರಿಯಃ ॥ ೪೩ ॥

ತನ್ಮನಸ್ಕಾಸ್ತದಾಲಾಪಾಸ್ತದ್ವಿಚೇಷ್ಟಾಸ್ತದಾತ್ಮಿಕಾಃ ।
ತದ್ಗುಣಾನೇವ ಗಾಯಂತ್ಯೋ ನಾತ್ಮಾಗಾರಾಣಿ ಸಸ್ಮರುಃ ॥ ೪೪ ॥

ಪುನಃ ಪುಲಿನಮಾಗತ್ಯ ಕಾಲಿಂದ್ಯಾಃ ಕೃಷ್ಣಭಾವನಾಃ ।
ಸಮವೇತಾ ಜಗುಃ ಕೃಷ್ಣಂ ತದಾಗಮನಕಾಂಕ್ಷಿತಾಃ ॥ ೪೫ ॥

ಚಂದ್ರನ ಬೆಳದಿಂಗಳು ಇರುವವರೆಗೂ ಗೋಪಿಕೆಯರು ಕಾಡಿನಲ್ಲಿ ತಮ್ಮ ಪ್ರಿಯತಮನಾದ ಶ್ರೀಕೃಷ್ಣನನ್ನು ಹುಡುಕುತ್ತಲೇ ಇದ್ದರು. ಆದರೆ ಮುಂದೆ ದಟ್ಟವಾದ ವನದಲ್ಲಿ ಘೋರವಾದ ಅಂಧಕಾರವು ಕವಿದಿತ್ತು. ಮುಂದೆ ದಾರಿಗಾಣದೆ ಕೃಷ್ಣನೂ ಕತ್ತಲೆಯಲ್ಲಿ ಅವಿತುಕೊಳ್ಳಬಹುದೆಂದು ಎಣಿಸಿ ಅವರೆಲ್ಲರೂ ಹಿಂದಿರುಗಿದರು. ॥ ೪೩ ॥ ಪರೀಕ್ಷಿತನೇ! ಗೋಪಿಯರ ಮನಸ್ಸು ಶ್ರೀಕೃಷ್ಣಮಯವೇ ಆಗಿತ್ತು. ಅವರ ಬಾಯಿಂದ ಶ್ರೀಕೃಷ್ಣನ ಹೊರತಾದ ಯಾವ ಮಾತೂ ಹೊರಡುತ್ತಿರಲಿಲ್ಲ. ಅವರ ಶರೀರದಿಂದ ಕೇವಲ ಶ್ರೀಕೃಷ್ಣನಿಗಾಗಿ ಮತ್ತು ಕೇವಲ ಶ್ರೀಕೃಷ್ಣನ ಚೇಷ್ಟೆಗಳೇ ನಡೆಯುತ್ತಿದ್ದವು. ಅವರ ರೋಮ-ರೋಮ, ಅವರ ಆತ್ಮಾ ಶ್ರೀಕೃಷ್ಣಮಯವಾಗಿ ಹೋಗಿತ್ತು. ಅವರು ಕೇವಲ ಅವನ ಗುಣ-ಲೀಲೆಗಳನ್ನೇ ಹಾಡುತ್ತಿದ್ದರು. ಆದರಲ್ಲೇ ತನ್ಮಯರಾಗಿ ತಮ್ಮ ದೇಹಸ್ಮರಣೆಯೇ ಇಲ್ಲದಿರುವಾಗ ಮನೆಯ ನೆನಪು ಎಲ್ಲಿಂದ ಬರಬೇಕು? ॥ ೪೪ ॥ ಗೋಪಿಯರ ಇಂದ್ರಿಯಗಳೆಲ್ಲವೂ ಶ್ರೀಕೃಷ್ಣನ ಶುಭಾಗಮನಕ್ಕಾಗಿಯೇ ತವಕಿಸುತ್ತಿದ್ದವು. ಕಾಡಿನಿಂದ ಹಿಂದಿರುಗಿದ ಶ್ರೀಕೃಷ್ಣನನ್ನೇ ಸದಾಕಾಲದಲ್ಲಿಯೂ ಚಿಂತಿಸುತ್ತಿದ್ದ ಗೋಪಿಯರು ಪುನಃ ಯಮುನಾನದಿಯ ಮರಳು ದಿಣ್ಣೆಯ ಬಳಿಗೆ ಬಂದು ಸಾಂಘಿಕವಾಗಿ ಶ್ರೀಕೃಷ್ಣನ ಗುಣಗಾನವನ್ನು ಮಾಡತೊಡಗಿದರು. ॥ ೪೫ ॥

*ಮೂವತ್ತನೆಯ ಅಧ್ಯಾಯವು ಮುಗಿಯಿತು. ॥ ೩೦ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ರಾಸಕ್ರೀಡಾಯಾಂ ಕೃಷ್ಣಾನ್ವೇಷಣಂ ನಾಮ ತ್ರಿಂಶೋಽಧ್ಯಾಯಃ ॥ ೩೦ ॥

# ಮೂವತ್ತೊಂದನೆಯ ಅಧ್ಯಾಯ

## ಗೋಪಿಕಾಗೀತೆ

*ಗೋಪ್ಯ ಊಚುಃ*

ಜಯತಿ ತೇಽಧಿಕಂ ಜನ್ಮನಾ ವ್ರಜಃ
ಶ್ರಯತ ಇಂದಿರಾ ಶಶ್ವದತ್ರ ಹಿ ।
ದಯಿತ ದೃಶ್ಯತಾಂ ದಿಕ್ಷು ತಾವಕಾ-
ಸ್ತ್ವಯಿ ಧೃತಾಸವಸ್ತ್ವಾಂ ವಿಚಿನ್ವತೇ ॥ ೧ ॥

ಶರದುದಾಶಯೇ ಸಾಧುಜಾತಸತ್-
ಸರಸಿಜೋದರಶ್ರೀಮುಷಾ ದೃಶಾ ।
ಸುರತನಾಥ ತೇಽಶುಲ್ಕದಾಸಿಕಾ
ವರದ ನಿಘ್ನತೋ ನೇಹ ಕಿಂ ವಧಃ ॥ ೨ ॥

**ಗೋಪಿಯರು ವಿರಹದಿಂದ ಹಾಡುತ್ತಾರೆ** - ಪ್ರಿಯಕರನೇ! ಕೃಷ್ಣ! ಮಾಧವ! ನೀನು ಇಲ್ಲಿ ಹುಟ್ಟಿದ ಕಾರಣದಿಂದಲೇ ವೈಕುಂಠಾದಿ ಉತ್ತಮ ಲೋಕಗಳಿಗಿಂತಲೂ ಈ ವ್ರಜದ ಮಹಿಮೆ ಹೆಚ್ಚಾಗಿದೆ. ಆದರಿಂದಲೇ ಸೌಂದರ್ಯದ ನಿಧಿಯಾದ ಸಂಪದ್ಭರಿತಳಾದ ಲಕ್ಷ್ಮೀದೇವಿಯು ವೈಕುಂಠವನ್ನು ಬಿಟ್ಟು ನಿತ್ಯನಿರಂತರವಾಗಿ ಇಲ್ಲಿ ವಾಸಮಾಡುತ್ತಿದ್ದಾಳೆ. ಪ್ರಿಯನೇ! ನಿನ್ನ ದಿವ್ಯ ಚರಣಾರವಿಂದಗಳಲ್ಲೇ ಪ್ರಾಣಾರ್ಪಣೆ ಮಾಡಿರುವ ಗೋಪಿಯರಾದ ನಾವು ನಿನ್ನನ್ನು ವನ-ವನಗಳಲ್ಲಿಯೂ ಹುಡುಕುತ್ತಿದ್ದೇವೆ. ದರ್ಶನವಿತ್ತು ಕಾಪಾಡು ಸ್ವಾಮಿ! ॥ ೧ ॥ ನಮ್ಮ ಪ್ರೇಮಪೂರ್ಣ ಹೃದಯದ ಸ್ವಾಮಿಯೇ! ನಾವು ನಿನ್ನ ನಿಃಶುಲ್ಕದಾಸಿಯರಾಗಿದ್ದೇವೆ. ಶರತ್ಕಾಲದಲ್ಲಿ ಸರೋವರಗಳಲ್ಲಿ ಸೊಂಪಾಗಿ ಬೆಳೆದಿರುವ ಕಮಲ ಪುಷ್ಪಗಳ ಕಾಂತಿಯನ್ನು ಅಪಹರಿಸುವ

ವಿಷಜಲಾಪ್ಯಯಾದ್ವ್ಯಾಲರಾಕ್ಷಸಾದ್
ವರ್ಷಮಾರುತಾದ್ವೈದ್ಯುತಾನಲಾತ್ ।
ವೃಷಮಯಾತ್ಮಜಾದ್ವಿಶ್ವತೋಭಯಾದ್
ಋಷಭ ತೇ ವಯಂ ರಕ್ಷಿತಾ ಮುಹುಃ ॥ ೩ ॥

ನ ಖಲು ಗೋಪಿಕಾನಂದನೋ ಭವಾ-
ನಖಿಲದೇಹಿನಾಮಂತರಾತ್ಮದೃಕ್ ।
ವಿಖನಸಾರ್ಥಿತೋ ವಿಶ್ವಗುಪ್ತಯೇ
ಸಖ ಉದೇಯಿವಾನ್ ಸಾತ್ವತಾಂ ಕುಲೇ ॥ ೪ ॥

ವಿರಚಿತಾಭಯಂ ವೃಷ್ಣಿಧುರ್ಯ ತೇ
ಚರಣಮೀಯುಷಾಂ ಸಂಸೃತೇರ್ಭಯಾತ್ ।
ಕರಸರೋರುಹಂ ಕಾಂತ ಕಾಮದಂ
ಶಿರಸಿ ಧೇಹಿ ನಃ ಶ್ರೀಕರಗ್ರಹಮ್ ॥ ೫ ॥

ವ್ರಜಜನಾರ್ತಿಹನ್ ವೀರ ಯೋಷಿತಾಂ
ನಿಜಜನಸ್ಮಯಧ್ವಂಸನಸ್ಮಿತ ।
ಭಜ ಸಖೇ ಭವತ್ಕಿಂಕರೀಃ ಸ್ಮ ನೋ
ಜಲರುಹಾನನಂ ಚಾರು ದರ್ಶಯ ॥ ೬ ॥

ಪ್ರಣತದೇಹಿನಾಂ ಪಾಪಕರ್ಶನಂ
ತೃಣಚರಾನುಗಂ ಶ್ರೀನಿಕೇತನಮ್ ।
ಫಣಿಫಣಾರ್ಪಿತಂ ತೇ ಪದಾಂಬುಜಂ
ಕೃಣು ಕುಚೇಷು ನಃ ಕೃಂಧಿ ಹೃಚ್ಛಯಮ್ ॥ ೭ ॥

ಮಧುರಯಾ ಗಿರಾ ವಲ್ಗುವಾಕ್ಯಯಾ
ಬುಧಮನೋಜ್ಞಯಾ ಪುಷ್ಕರೇಕ್ಷಣ ।
ವಿಧಿಕರೀರಿಮಾ ವೀರ ಮುಹ್ಯತೀ-
ರಧರಸೀಧುನಾಪ್ಯಾಯಯಸ್ವ ನಃ ॥ ೮ ॥

ತವ ಕಥಾಮೃತಂ ತಪ್ತಜೀವನಂ
ಕವಿಭಿರೀಡಿತಂ ಕಲ್ಮಷಾಪಹಮ್ ।

ಕಣ್ಣುಗಳಿಂದ ನೀನು ನಮ್ಮನ್ನು ಕೊಲ್ಲುತ್ತಿರುವೆ. ಓ ವರದನೇ! ನಿನ್ನ ನೋಟದಿಂದಲೇ ಕೊಲ್ಲುವುದು ವಧೆಯಲ್ಲವೇ? ಅಸ್ತ್ರಗಳಿಂದ ಕೊಲ್ಲುವುದು ಮಾತ್ರ ವಧೆಯೇ? ॥ ೨ ॥ ಪುರುಷ ಶ್ರೇಷ್ಠನೇ! ಯಮುನೆಯ ವಿಷಮಿಶ್ರಿತ ಜಲದಿಂದಾದ ಮೃತ್ಯುವಿನಿಂದಲೂ, ಹೆಬ್ಬಾವಿನ ರೂಪದಿಂದ ಬಂದ ಅಘಾಸುರನಿಂದಲೂ, ಇಂದ್ರನು ಕಳುಹಿಸಿದ್ದ ಪ್ರಚಂಡವಾದ ಗಾಳಿ-ಮಳೆ ಸಿಡಿಲುಗಳಿಂದಲೂ, ದಾವಾನಲದಿಂದಲೂ, ವೃಷಭಾಸುರನಿಂದಲೂ, ಮಾಯಾಸುರನ ಮಗನಾದ ತೃಣಾವರ್ತನಿಂದಲೂ ನಮ್ಮನ್ನು ಪದೇ-ಪದೇ ರಕ್ಷಿಸುವ ನೀನು ನಮ್ಮ ಮೇಲೆ ಏಕೆ ದಯೆ ತೋರುತ್ತಿಲ್ಲ! ॥ ೩ ॥ ನೀನು ಕೇವಲ ಯಶೋದಾನಂದನನೇ ಅಲ್ಲ, ಸಮಸ್ತ ದೇಹಧಾರಿಗಳ ಹೃದಯದಲ್ಲಿ ನೆಲೆಸಿರುವ ಅಂತರ್ಯಾಮಿಯಾಗಿದ್ದು, ಸಾಕ್ಷಿಯಾಗಿರುವೆ. ಓ ಸಖನೇ! ಬ್ರಹ್ಮದೇವರ ಪ್ರಾರ್ಥನೆಯಂತೆ ವಿಶ್ವವನ್ನು ರಕ್ಷಿಸಲಿಕ್ಕಾಗಿ ಸಾತ್ವತವಂಶದಲ್ಲಿ ಅವತರಿಸಿರುವೆ. ॥ ೪ ॥ ಪ್ರಾಣಕಾಂತನೇ! ವೃಷ್ಣಿಶ್ರೇಷ್ಠನೇ! ಜನನ-ಮರಣರೂಪವಾದ ಸಂಸಾರಭಯದಿಂದ ಪೀಡಿತರಾದವರು ಸಂಸಾರದಿಂದ ಮುಕ್ತರಾಗಲು ನಿನ್ನ ಚರಣ ಕಮಲಗಳನ್ನು ಆಶ್ರಯಿಸುತ್ತಾರೆ. ಅಂತಹವರಿಗೆ ನೀನು ಅಭಯ ಹಸ್ತವನ್ನು ನೀಡುವೆ. ಸಮಸ್ತ ಭಕ್ತರ ಅಭಿಲಾಷೆಗಳನ್ನು ಪೂರ್ಣಗೊಳಿಸಿಕೊಡುವ ಲಕ್ಷ್ಮೀದೇವಿಯ ಪಾಣಿಗ್ರಹಣಮಾಡಿದ ಮತ್ತು ಭಕ್ತರ ವಿಷಯದಲ್ಲಿ ಅಭಯಮುದ್ರೆಯನ್ನು ತೋರುವ ನಿನ್ನ ದಿವ್ಯವಾದ ಕರಕಮಲವನ್ನು ನಮ್ಮ ತಲೆಯ ಮೇಲಿರಿಸು. ॥ ೫ ॥ ವ್ರಜವಾಸಿಗಳ ದುಃಖಗಳನ್ನು ದೂರಮಾಡುವ ವೀರ ಶಿರೋಮಣಿ ಶ್ಯಾಮಸುಂದರನೇ! ನಿನ್ನವರಾದ ಗೋಪಿಯರ ಗರ್ವವನ್ನು ಕ್ಷಣ ಮಾತ್ರದಲ್ಲಿ ಧ್ವಂಸಮಾಡುವ ಕಿರುನಗೆಯುಳ್ಳವನೇ! ಸೇವಕಿಯರಾದ ನಮ್ಮನ್ನು ಅಂಗೀಕರಿಸು. ದೂರೀಕರಿಸಬೇಡ. ಅಬಲೆಯರಾದ ನಮಗೆ ನಿನ್ನ ಮುಖಾರವಿಂದವನ್ನು ತೋರಿಸು. ॥ ೬ ॥ ಪ್ರಿಯಕರನೇ! ಶರಣಾಗತರಾದವರ ಪಾಪವನ್ನು ಹೋಗಲಾಡಿಸುವಂತಹ, ಹುಲ್ಲನ್ನು ಹಸುಗಳನ್ನು ಅನುಸರಿಸಿ ಹೋಗುವ, ಶ್ರೀಲಕ್ಷ್ಮೀದೇವಿಗೆ ನಿವಾಸಸ್ಥಾನವಾದ, ಸೌಂದರ್ಯ, ಮಾಧುರ್ಯಗಳಿಗೆ ಆವಾಸವಾಗಿರುವ, ಕಾಳಿಯನ ಹೆಡೆಗಳನ್ನು ಮೆಟ್ಟಿ ಅನುಗ್ರಹಿಸಿದ ದಿವ್ಯವಾದ ನಿನ್ನ ಪಾದಪಂಕಜಗಳನ್ನು ನಮ್ಮ ವಕ್ಷಃಸ್ಥಳದ ಮೇಲಿರಿಸಿ ನಮ್ಮ ಹೃದಯತಾಪವನ್ನು ಶಾಂತಗೊಳಿಸು.॥ ೭ ॥ ಕಮಲನಯನ! ನಿನ್ನ ಮಾತು ಅದೆಷ್ಟು ಮಧುರವಾಗಿದೆ. ಮಾತಿನಲ್ಲಿರುವ ಒಂದೊಂದು ಶಬ್ದವೂ, ಒಂದೊಂದು ಅಕ್ಷರವೂ, ಒಂದೊಂದು ವಾಕ್ಯವೂ ಮಧುರಾತಿ ಮಧುರವಾಗಿದೆ. ದೊಡ್ಡ ದೊಡ್ಡ ವಿದ್ವಾಂಸರಿಗೂ ಕೂಡ ಅವು ಮನೋಜ್ಞವಾಗಿವೆ. ಅಂತಹ ನಿನ್ನ ಸುಮಧುರವಾದ ಚೆನ್ನುಡಿಗಳ ರಸಾಸ್ವಾದನೆಯಿಂದ ಮೋಹಗೊಂಡ ನಿನ್ನ ಸೇವಕಿಯರಾದ ನಮಗೆ ನಿನ್ನ ಅಮೃತಕ್ಕಿಂತಲೂ ಮಧುರವಾದ ಅಧರಾಮೃತವನ್ನು ಪಾನಮಾಡಿಸಿ ನಮ್ಮನ್ನು ತೃಪ್ತಿಗೊಳಿಸು. ॥ ೮ ॥

ಪ್ರಭುವೇ! ನಿನ್ನ ಲೀಲೆಯ ಕಥಾಪ್ರಸಂಗಗಳೂ ಅಮೃತ ಸ್ವರೂಪವೇ ಆಗಿವೆ. ವಿರಹದಿಂದ ಪರಿತಪಿಸುತ್ತಿರುವವರಿಗೆ ಅವು ಜೀವನ ಸರ್ವಸ್ವವೇ ಆಗಿವೆ. ದೊಡ್ಡ-ದೊಡ್ಡ ಜ್ಞಾನಿಗಳೂ ಮಹಾ

ಶ್ರವಣಮಂಗಲಂ ಶ್ರೀಮದಾತತಂ
ಭುವಿ ಗೃಣಂತಿ ತೇ ಭೂರಿದಾ ಜನಾಃ ॥ ೯ ॥

ಪ್ರಹಸಿತಂ ಪ್ರಿಯ ಪ್ರೇಮವೀಕ್ಷಣಂ
ವಿಹರಣಂ ಚ ತೇ ಧ್ಯಾನಮಂಗಲಮ್ ।
ರಹಸಿ ಸಂವಿದೋ ಯಾ ಹೃದಿಸ್ಪೃಶಃ
ಕುಹಕ ನೋ ಮನಃ ಕ್ಷೋಭಯಂತಿ ಹಿ ॥ ೧೦ ॥

ಚಲಸಿ ಯದ್ವ್ರಜಾಚ್ಚಾರಯನ್ಪಶೂನ್
ನಲಿನಸುಂದರಂ ನಾಥ ತೇ ಪದಮ್ ।
ಶಿಲತೃಣಾಂಕುರೈಃ ಸೀದತೀತಿ ನಃ
ಕಲಿಲತಾಂ ಮನಃ ಕಾಂತ ಗಚ್ಛತಿ ॥ ೧೧ ॥

ದಿನಪರಿಕ್ಷಯೇ ನೀಲಕುಂತಲೈ-
ರ್ವನರುಹಾನನಂ ಬಿಭ್ರದಾವೃತಮ್ ।
ಘನರಜಸ್ವಲಂ ದರ್ಶಯನ್ಮುಹು-
ರ್ಮನಸಿ ನಃ ಸ್ಮರಂ ವೀರ ಯಚ್ಛಸಿ ॥ ೧೨ ॥

ಪ್ರಣತಕಾಮದಂ ಪದ್ಮಜಾರ್ಚಿತಂ
ಧರಣಿಮಂಡನಂ ಧ್ಯೇಯಮಾಪದಿ ।
ಚರಣಪಂಕಜಂ ಶಂತಮಂ ಚ ತೇ
ರಮಣ ನಃ ಸ್ತನೇಷ್ವರ್ಪಯಾಧಿಹನ್ ॥ ೧೩ ॥

ಸುರತವರ್ಧನಂ ಶೋಕನಾಶನಂ
ಸ್ವರಿತವೇಣುನಾ ಸುಷ್ಠು ಚುಂಬಿತಮ್ ।
ಇತರರಾಗವಿಸ್ಮಾರಣಂ ನೃಣಾಂ
ವಿತರ ವೀರ ನಸ್ತೇಽಧರಾಮೃತಮ್ ॥ ೧೪ ॥

ಭಕ್ತ ಕವಿಗಳು ನಿನ್ನ ಚರಿತಾಮೃತವನ್ನು ಹಾಡಿ ಹೊಗಳಿದ್ದಾರೆ. ಚರಿತಾಮೃತದ ಶ್ರವಣಮಾತ್ರದಿಂದಲೇ ಪಾಪವು ಪರಿಹಾರವಾಗುತ್ತದೆ. ಸುಖ-ಸಂಪತ್ತುಗಳು ಪ್ರಾಪ್ತವಾಗುತ್ತವೆ. ನಿನ್ನ ಕಥಾಮೃತವನ್ನು ಲೋಕದಲ್ಲಿ ಪಾನಮಾಡುವಂತಹವರು ಹಿಂದಿನ ಜನ್ಮದಲ್ಲಿ ಬಹಳ ದಾನಗಳನ್ನು ಮಾಡಿದವರಾಗಿರುತ್ತಾರೆ. ಆ ಪುಣ್ಯದಿಂದ ಅವರಿಗೆ ನಿನ್ನ ಕಥಾಮೃತವನ್ನು ಈಗ ಸವಿಯುವ ಯೋಗ ವುಂಟಾಗಿದೆ. ॥ ೯ ॥ ಮಾಯಾಪತಿಯೇ! ಪ್ರಾಣ ಪ್ರಿಯನೇ! ನಿನ್ನ ಪ್ರೇಮಪೂರ್ಣವಾದ ನಗು, ಪ್ರೇಮಪೂರ್ಣವಾದ ನೋಟ, ನಾನಾ ಬಗೆಯ ಕ್ರೀಡೆಗಳು - ಇವೆಲ್ಲವನ್ನು ಸ್ಮರಿಸಿಕೊಂಡು ನಾವು ಆನಂದಪಡುತ್ತಿದ್ದೆವು. ನಿನ್ನನ್ನು ಧ್ಯಾನಿಸುವುದೇ ಮಂಗಳದಾಯಕವಾದುದು. ಅದರ ಫಲವಾಗಿ ನೀನೇ ನಮ್ಮ ಬಳಿಗೆ ಬಂದೆ. ಏಕಾಂತದಲ್ಲಿ ನಮ್ಮೊಡನೆ ಹೃದಯಸ್ಪರ್ಶಿಯಾದ ವಿನೋದದ ಮಾತುಗಳನ್ನಾಡಿದೆ. ಅದೆಲ್ಲವನ್ನು ಈಗ ನೆನೆಸಿಕೊಂಡರೆ ನಮ್ಮ ಮನಸ್ಸು ಕ್ಷೋಭೆಗೊಳ್ಳುತ್ತದೆ. ॥ ೧೦ ॥

ಪ್ರಾಣನಾಥನೇ! ನಿನ್ನ ಚರಣಕಮಲಗಳು ಕಮಲಕ್ಕಿಂತಲೂ ಸುಂದರವಾಗಿಯೂ, ಸುಕೋಮಲವಾಗಿಯೂ ಇವೆ. ನೀನು ಹಸುಗಳನ್ನು ಹೊಡೆದುಕೊಂಡು ವ್ರಜದಿಂದ ಹೊರಟೊಡನೆಯೇ ನಮಗೆ ನಿನ್ನ ಮೃದುವಾದ ಕಾಲುಗಳದೇ ಯೋಚನೆ. ಹಾದಿಯಲ್ಲಿರುವ ನೊರಜುಕಲ್ಲುಗಳಿಂದಲೂ, ಹುಲ್ಲಿನ ಕೊಳೆಗಳಿಂದಲೂ ನಿನ್ನ ಮೃದುವಾದ ಕಾಲುಗಳಿಗೆ ಎಷ್ಟು ನೋವಾಗುವುದೋ ಎಂದು ನಾವು ಪರಿತಪಿಸುತ್ತೇವೆ. ನಮ್ಮ ಮನಸ್ಸು ಬಹಳವಾಗಿ ಕಳವಳಿಸುತ್ತದೆ. ॥ ೧೧ ॥ ವೀರಪ್ರಿಯತಮನೇ! ಸಾಯಂಕಾಲವಾಗುತ್ತಲೇ ನೀನು ಹಸುಗಳೊಡನೆ ವ್ರಜಕ್ಕೆ ಹಿಂದಿರುಗುವಾಗ ನಿನ್ನ ಸುಂದರವಾದ ಮುಖಕಮಲವು ಕಪ್ಪಾದ ಗುಂಗುರು ಕೂದಲುಗಳಿಂದಲೂ, ಗೋಧೂಳಿಯಿಂದಲೂ ವ್ಯಾಪ್ತವಾಗಿ ಅತ್ಯಂತ ಶೋಭಾಯಮಾನವಾಗಿ ಕಾಣುತ್ತದೆ. ಅಂತಹ ಸುಂದರವಾದ ಮುಖಾರವಿಂದವನ್ನು ತೋರುತ್ತಾ ನೀನು ನಮ್ಮ ಹೃದಯದಲ್ಲಿ - ನಿನ್ನನ್ನು ಸೇರಬೇಕೆಂಬ ಆಕಾಂಕ್ಷೆಯನ್ನು ಉಂಟು ಮಾಡುತ್ತಿರುವೆ. ॥ ೧೨ ॥

ಪ್ರಿಯತಮನೇ! ನೀನೊಬ್ಬನೇ ನಮ್ಮ ಸಮಸ್ತವಾದ ಪೀಡೆಗಳನ್ನೂ ಪರಿಹರಿಸಲು ಸಮರ್ಥನಾಗಿರುವೆ. ನಿನ್ನ ಚರಣಕಮಲಗಳು ಶರಣಾಗತ ಭಕ್ತರ ಸಮಸ್ತ ಅಭಿಲಾಷೆಗಳನ್ನು ಈಡೇರಿಸುವಂತಹವುಗಳು. ಸಾಕ್ಷಾತ್ ಲಕ್ಷ್ಮೀಯೇ ಅವುಗಳನ್ನು ಸೇವಿಸುತ್ತಾಳೆ ಮತ್ತು ಭೂಮಂಡಲಕ್ಕೆ ಅಲಂಕಾರ ಪ್ರಾಯವಾಗಿವೆ. ಆಪತ್ತಿನ ಸಮಯದಲ್ಲಿ ನಿನ್ನ ಪಾದಾರವಿಂದಗಳನ್ನು ಧ್ಯಾನಿಸಿದರೆ ಸಮಸ್ತವಾದ ಆಪತ್ತುಗಳೂ ದೂರವಾಗುತ್ತವೆ. ಇಂತಹ ಕಲ್ಯಾಣಸ್ವರೂಪವಾದ ನಿನ್ನ ಚರಣಕಮಲಗಳನ್ನು ನಮ್ಮ ವಕ್ಷಸ್ಥಳದಲ್ಲಿರಿಸಿ ಹೃದಯದ ವ್ಯಥೆಯನ್ನು ಶಾಂತಗೊಳಿಸು. ॥ ೧೩ ॥

ವೀರಶಿರೋಮಣಿಯೇ! ನಿನ್ನ ಅಧರಾಮೃತವು ನಿನ್ನನ್ನು ಸೇರುವ ಆಕಾಂಕ್ಷೆಯನ್ನು ಹೆಚ್ಚಿಸುವಂತಹುದು. ಅದು ವಿರಹಜನ್ಯ ಸಮಸ್ತ ಶೋಕ-ಸಂತಾಪಗಳನ್ನು ನಾಶಮಾಡಿಬಿಡುತ್ತದೆ. ಆ ಮುರಳಿಯು ಅದನ್ನು ಚೆನ್ನಾಗಿ ಪಾನಮಾಡುತ್ತಾ ಇರುತ್ತದೆ. ಒಮ್ಮೆ ಅದನ್ನು ಕುಡಿದ ಜನರಿಗೆ ಬೇರಾವ ಆಸಕ್ತಿಯೂ ನೆನಪೇ ಇರುವುದಿಲ್ಲ. ಅಂತಹ ನಿನ್ನ ಅಧರಾಮೃತವನ್ನು ನಮಗೆ ದಯಪಾಲಿಸು. ॥ ೧೪ ॥

ಅಟತಿ ಯದ್ಭವಾನಹ್ನಿ ಕಾನನಂ
ತ್ರುಟಿರ್ಯುಗಾಯತೇ ತ್ವಾಮಪಶ್ಯತಾಮ್ ।
ಕುಟಿಲಕುಂತಲಂ ಶ್ರೀಮುಖಂ ಚ ತೇ
ಜಡ ಉದೀಕ್ಷತಾಂ ಪಕ್ಷ್ಮಕೃದ್ದೃಶಾಮ್ ॥ ೧೫ ॥

ಪತಿಸುತಾನ್ವಯಭ್ರಾತೃಬಾಂಧವಾ-
ನತಿವಿಲಂಘ್ಯ ತೇಽಂತ್ಯಚ್ಯುತಾಗತಾಃ ।
ಗತಿವಿದಸ್ತವೋದ್ಗೀತಮೋಹಿತಾಃ
ಕಿತವ ಯೋಷಿತಃ ಕಸ್ತ್ಯಜೇನ್ನಿಶಿ ॥ ೧೬ ॥

ರಹಸಿ ಸಂವಿದಂ ಹೃಚ್ಛಯೋದಯಂ
ಪ್ರಹಸಿತಾನನಂ ಪ್ರೇಮವೀಕ್ಷಣಮ್ ।
ಬೃಹದುರಃ ಶ್ರಿಯೋ ವೀಕ್ಷ್ಯ ಧಾಮ ತೇ
ಮುಹುರತಿಸ್ಪೃಹಾ ಮುಹ್ಯತೇ ಮನಃ ॥ ೧೭ ॥

ವ್ರಜವನೌಕಸಾಂ ವ್ಯಕ್ತಿರಂಗ ತೇ
ವೃಜಿನಹಂತ್ರ್ಯಲಂ ವಿಶ್ವಮಂಗಲಮ್ ।
ತ್ಯಜ ಮನಾಕ್ಚ ನಸ್ತ್ವತ್ಸ್ಪೃಹಾತ್ಮನಾಂ
ಸ್ವಜನಹೃದ್ರುಜಾಂ ಯನ್ನಿಷೂದನಮ್ ॥ ೧೮ ॥

ಯತ್ತೇ ಸುಜಾತಚರಣಾಂಬುರುಹಂ ಸ್ತನೇಷು
ಭೀತಾಃ ಶನೈಃ ಪ್ರಿಯ ದಧೀಮಹಿ ಕರ್ಕಶೇಷು ।
ತೇನಾಟವೀಮಟಸಿ ತದ್ವ್ಯಥತೇ ನ ಕಿಂಸ್ವಿತ್
ಕೂರ್ಪಾದಿಭಿರ್ಭ್ರಮತಿ ಧೀರ್ಭವದಾಯುಷಾಂ ನಃ ॥ ೧೯ ॥

ಪ್ರಾಣಪ್ರಿಯನೆ! ಹಗಲಿನಲ್ಲಿ ನೀನು ಹಸುಗಳನ್ನು ಮೇಯಿಸಲು ವನಕ್ಕೆ ಹೋದಾಗ, ನಿನ್ನನ್ನು ನೋಡದೆ ನಮಗೆ ಒಂದೊಂದು ಕ್ಷಣವು ಯುಗದಂತೆ ಕಾಣುತ್ತದೆ. ಸಾಯಂಕಾಲವಾಗುತ್ತಲೇ ಮರಳಿದಾಗ, ಗುಂಗುರು ಕೂದಲುಗಳಿಂದ ಕೂಡಿದ ನಿನ್ನ ಪರಮ ಸುಂದರ ಮುಖಾರವಿಂದವನ್ನು ನೋಡುತ್ತಾ ಇರುವಾಗ ರೆಪ್ಪೆಗಳು ಮುಚ್ಚಿಕೊಳ್ಳುವುದು ನಮಗೆ ತುಂಬಾ ಮುಜುಗರವಾಗುತ್ತದೆ. ಈ ಕಣ್ಣುಗಳ ರೆಪ್ಪೆಗಳನ್ನು ನಿರ್ಮಿಸಿದ ಬ್ರಹ್ಮನು ಮೂರ್ಖನೇ ಆಗಿದ್ದಾನೆ ಎಂದೆನಿಸುತ್ತದೆ. ॥ ೧೫ ॥ ಕಪಟಿಯಾದ ಅಚ್ಯುತನೇ! ಕಪಟನಾಟಕ ಸೂತ್ರಧಾರಿಯೇ! ನಾವು ನಮ್ಮ ಪತಿ-ಪುತ್ರರನ್ನೂ, ಸಹೋದರರನ್ನು, ಬಂಧುಗಳನ್ನು ಕುಲ ಪರಿವಾರವನ್ನು ತ್ಯಜಿಸಿ, ಅವರ ಆಜ್ಞೆಯನ್ನು ಉಲ್ಲಂಘಿಸಿ ನಿನ್ನ ವೇಣುಗಾನದಿಂದ ಆಕರ್ಷಿಸಲ್ಪಟ್ಟವರಾಗಿ, ಕೊಳಲಿನ ಧ್ವನಿಯಿಂದಲೇ ನೀನಿಲ್ಲಿರುವೆ ಎಂಬುದನ್ನು ತಿಳಿದುಕೊಂಡು ಆ ಧ್ವನಿಯನ್ನೇ ಅನುಸರಿಸಿ ನಿನ್ನ ಬಳಿಗೆ ಬಂದೆವು. ಹೀಗೆ ರಾತ್ರಿಯ ಸಮಯದಲ್ಲಿ ಬಂದಿರುವ ಯುವತಿಯರನ್ನು ನೀನಲ್ಲದೆ ಬೇರೆ ಯಾರು ತ್ಯಜಿಸಿಹೋಗುತ್ತಾರೆ? ॥ ೧೬ ॥ ಪ್ರಿಯಕರನೇ! ನೀನು ಏಕಾಂತದಲ್ಲಿ ನಮ್ಮೊಡನೆ ಆಡುತ್ತಿದ್ದ ಪ್ರೇಮಪ್ರಚೋದಕವಾದ ಸರಸ-ಸಲ್ಲಾಪದ ಮಾತುಗಳನ್ನು, ಪ್ರೇಮಪೂರ್ವಕವಾದ ನಿನ್ನ ವೀಕ್ಷಣವನ್ನು, ಮಂದಹಾಸದಿಂದ ಕೂಡಿದ ನಿನ್ನ ಸುಂದರ ವಾದ ಮುಖಾರವಿಂದವನ್ನು, ಲಕ್ಷ್ಮಿಗೆ ನಿವಾಸಸ್ಥಾನವಾದ ನಿನ್ನ ವಿಶಾಲವಾದ ವಕ್ಷಸ್ಥಳವನ್ನು ಸ್ಮರಿಸಿಕೊಂಡು ಮುಗ್ಧವಾದ ನಮ್ಮ ಮನಸ್ಸು ನಿನ್ನನ್ನು ಪುನಃ ಸೇರಲೇಬೇಕೆಂದು ಬಹಳವಾಗಿ ತವಕಿಸುತ್ತಿದೆ. ॥ ೧೭ ॥ ಪ್ರಿಯಕರನೇ! ನಿನ್ನ ಈ ಅವತಾರವು ಗೋಕುಲವಾಸಿಗಳ ದುಃಖವನ್ನೂ, ತಾಪವನ್ನೂ ವಿನಾಶಗೊಳಿಸಲು ಮತ್ತು ವಿಶ್ವಕ್ಕೆ ಮಂಗಳವನ್ನುಂಟು ಮಾಡುವುದಕ್ಕಾಗಿಯೇ ಆಗಿದೆ. ನಮ್ಮ ಹೃದಯವು ನಿನ್ನ ಕುರಿತಾದ ಲಾಲಸೆಯಿಂದ ತುಂಬಿ ಹೋಗಿದೆ. ನಿನ್ನ ಸ್ವಜನರಾದ ನಮ್ಮಗಳ ಹೃದ್ರೋಗವನ್ನು ಪೂರ್ಣವಾಗಿ ನಾಶ ಮಾಡುವಂತಹ ಯಾವುದಾದರೂ ಔಷಧವನ್ನು ಕೊಟ್ಟು ಕಾಪಾಡು. ॥ ೧೮ ॥ ಪ್ರಾಣಕಾಂತನೇ! ನಿನ್ನ ಚರಣಗಳು ಕಮಲಕ್ಕಿಂತಲೂ ಕೋಮಲವಾದುದು. ಅವನ್ನು ನಮ್ಮ ಕಠೋರವಾದ ಸ್ತನಗಳ ಮೇಲಿರಿಸಿಕೊಳ್ಳುವಾಗಲೂ ಎಲ್ಲಿಯಾದರೂ ಅವಕ್ಕೆ ನೋವಾಗಬಹುದೆಂದು ಹೆದರಿಕೊಂಡೇ ಇಟ್ಟುಕೊಳ್ಳುವೆವು. ಅಂತಹ ಚರಣಗಳಿಂದ ನೀನು ರಾತ್ರಿಯಲ್ಲಿ ಘೋರವಾದ ಅರಣ್ಯದಲ್ಲಿ ಅಡಗಿಕೊಂಡೇ ಅಲೆಯುತ್ತಿರುವೆಯಲ್ಲ! ಕಲ್ಲು, ಮುಳ್ಳುಗಳಿಂದ ನಿನ್ನ ಸುಕೋಮಲವಾದ ಪಾದಗಳಿಗೆ ನೋವಾಗುತ್ತಿಲ್ಲವೆ? ಇದನ್ನು ನೆನೆದಾಗಲೇ ನಿನ್ನಲ್ಲಿಯೇ ಪ್ರಾಣಗಳನ್ನಿಟ್ಟುಕೊಂಡಿರುವ ನಮಗೆ ಬುದ್ಧಿಭ್ರಮಣೆಯುಂಟಾಗುತ್ತದೆ. ಶ್ಯಾಮಸುಂದರ ಶ್ರೀಕೃಷ್ಣ! ನಮ್ಮ ಜೀವನವು ನಿನಗಾಗಿಯೇ ಮುಡುಪಾಗಿಟ್ಟಿದೆ. ನಿನ್ನ ಸೇವೆಗಾಗಿಯೇ ನಮ್ಮನ್ನು ಅರ್ಪಿಸಿಕೊಂಡುಬಿಟ್ಟಿದ್ದೇವೆ. ದರ್ಶನವಿತ್ತುಕಾಪಾಡು. ॥೧೯॥

ಮೂವತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೩೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ರಾಸಕ್ರೀಡಾಯಾಂ ಗೋಪಿಕಾಗೀತಂ ನಾಮೈಕತ್ರಿಂಶೋಽಧ್ಯಾಯಃ ॥ ೩೧ ॥

# ಮೂವತ್ತೆರಡನೆಯ ಅಧ್ಯಾಯ

## ಭಗವಂತನು ಪ್ರಕಟನಾಗಿ ಗೋಪಿಯರನ್ನು ಸಂತೈಸಿದುದು

ಶ್ರೀಶುಕ ಉವಾಚ

ಇತಿ ಗೋಪ್ಯಃ ಪ್ರಗಾಯಂತ್ಯಃ ಪ್ರಲಪಂತ್ಯಶ್ಚ ಚಿತ್ರಧಾ ।
ರುರುದುಃ ಸುಸ್ವರಂ ರಾಜನ್ ಕೃಷ್ಣದರ್ಶನಲಾಲಸಾಃ ॥ ೧ ॥

ತಾಸಾಮಾವಿರಭೂಚ್ಛೌರಿಃ ಸ್ಮಯಮಾನಮುಖಾಂಬುಜಃ ।
ಪೀತಾಂಬರಧರಃಸ್ರಗ್ವೀ ಸಾಕ್ಷಾನ್ಮನ್ಮಥಮನ್ಮಥಃ ॥ ೨ ॥

ತಂ ವಿಲೋಕ್ಯಾಗತಂ ಪ್ರೇಷ್ಠಂ ಪ್ರೀತ್ಯುತ್ಫುಲ್ಲದೃಶೋಽಬಲಾಃ ।
ಉತ್ತಸ್ಥುರ್ಯುಗಪತ್ ಸರ್ವಾಸ್ತನ್ವಃ ಪ್ರಾಣಮಿವಾಗತಮ್ ॥ ೩ ॥

ಕಾಚಿತ್ ಕರಾಂಬುಜಂ ಶೌರೇರ್ಜಗೃಹೇಽಂಜಲಿನಾ ಮುದಾ ।
ಕಾಚಿದ್ದಧಾರ ತದ್ಬಾಹುಮಂಸೇ ಚಂದನರೂಷಿತಮ್ ॥ ೪ ॥

ಕಾಚಿದಂಜಲಿನಾಗೃಹ್ಣಾತ್ತನ್ವೀ ತಾಂಬೂಲಚರ್ವಿತಮ್ ।
ಏಕಾ ತದಂಘ್ರಿಕಮಲಂ ಸಂತಪ್ತಾ ಸ್ತನಯೋರಧಾತ್ ॥ ೫ ॥

ಏಕಾ ಭ್ರುಕುಟಿಮಾಬಧ್ಯ ಪ್ರೇಮಸಂರಂಭವಿಹ್ವಲಾ ।
ಘ್ನತೀವೈಕ್ಷತ್ ಕಟಾಕ್ಷೇಪೈಃ ಸಂದಷ್ಟದಶನಚ್ಛದಾ ॥ ೬ ॥

ಅಪರಾನಿಮಿಷದ್ದೃಗ್ಭ್ಯಾಂ ಜುಷಾಣಾ ತನ್ಮುಖಾಂಬುಜಮ್ ।
ಆಪೀತಮಪಿ ನಾತೃಪ್ಯತ್ಸಂತಸ್ತಚ್ಚರಣಂ ಯಥಾ ॥ ೭ ॥

ತಂ ಕಾಚಿನ್ನೇತ್ರರಂಧ್ರೇಣ ಹೃದಿಕೃತ್ಯ ನಿಮೀಲ್ಯ ಚ ।
ಪುಲಕಾಂಗ್ಯುಪಗುಹ್ಯಾಸ್ತೇ ಯೋಗೀವಾನಂದಸಂಪ್ಲುತಾ ॥ ೮ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ! ಹೀಗೆ ಶ್ರೀಕೃಷ್ಣನ ದರ್ಶನಾಕಾಂಕ್ಷಿಗಳಾದ ಗೋಪಿಯರು ಕೆಲವು ವೇಳೆ ಆವನ ಲೀಲಾಪ್ರಸಂಗಗಳನ್ನು ಹಾಡುತ್ತಾ ಪ್ರಲಾಪಿಸುತ್ತಿದ್ದರೆ, ಕೆಲವು ವೇಳೆ ವಿರಹವೇದನೆಯನ್ನು ತಾಳಲಾರದೆ ಕರುಣಾಜನಕವಾಗಿ ಸುಸ್ವರದಿಂದ ಬಗೆ-ಬಗೆಯಾಗಿ ವಿಲಪಿಸುತ್ತಿದ್ದರು. ॥ ೧ ॥ ಒಡನೆಯೇ ಅವರ ಮಧ್ಯದಲ್ಲೇ ಭಗವಾನ್ ಶ್ರೀಕೃಷ್ಣನು ಪ್ರಕಟನಾದನು. ಅವನ ಮುಖಾರವಿಂದವು ಮಂದಹಾಸದಿಂದ ಪ್ರಫುಲ್ಲವಾಗಿತ್ತು. ವನಮಾಲೆಯನ್ನು, ಪೀತಾಂಬರವನ್ನು ಧರಿಸಿದ್ದ ಶ್ರೀಹರಿಯು ಸಾಕ್ಷಾತ್ ಮನ್ಮಥನ ಮನಸ್ಸನ್ನು ಸೂರೆಗೊಳ್ಳುವಂತಹ ಸುಂದರ ರೂಪದಿಂದ ಬೆಳಗಿದನು. ॥ ೨ ॥ ಕೋಟಿ-ಕೋಟಿ ಮನ್ಮಥರಿಗಿಂತಲೂ ಪರಮಮನೋಹರನಾದ ಪ್ರಾಣಪ್ರಿಯ ಶ್ಯಾಮಸುಂದರನನ್ನು ನೋಡಿದ ಗೋಪಿಯರ ಕಣ್ಣುಗಳು ಕಮಲದಂತೆ ಅರಳಿದವು. ಗತಪ್ರಾಣವಾದ ಶರೀರದಲ್ಲಿ ಪುನಃ ದಿವ್ಯ ಪ್ರಾಣವು ಸಂಚಾರವಾದಾಗ ಇಂದ್ರಿಯಗಳೆಲ್ಲವೂ ಒಮ್ಮೆಗೆ ಕಾರ್ಯೋನ್ಮುಖವಾಗುವಂತೆ ಗೋಪಿಯರೆಲ್ಲರೂ ಒಮ್ಮೆಗೆ ಎದ್ದು ನಿಂತರು. ರೋಮಾಂಚಿತರಾಗಿ ನವಸ್ಫೂರ್ತಿಯಿಂದ ಒಡಗೊಂಡರು. ॥ ೩ ॥ ಒಬ್ಬ ಗೋಪಿಯು ಅತ್ಯಂತ ಪ್ರೇಮಾನಂದದಿಂದ ಶ್ರೀಕೃಷ್ಣನ ಕರಕಮಲವನ್ನು ತನ್ನೆರಡೂ ಕೈಗಳಿಂದ ಹಿಡಿದುಕೊಂಡಳು. ಮತ್ತೊಬ್ಬಳು ಚಂದನಲಿಪ್ತವಾದ ಅವನ ಬಾಹುವನ್ನು ತನ್ನ ಹೆಗಲಮೇಲೆ ಇರಿಸಿಕೊಂಡಳು. ॥ ೪ ॥ ಒಬ್ಬಳು ಶ್ರೀಕೃಷ್ಣನು ಅಗಿದಿದ್ದ ತಾಂಬೂಲವನ್ನು ಪ್ರಸಾದರೂಪವಾಗಿ ಬೊಗಸೆಯಲ್ಲಿ ಗ್ರಹಿಸಿದಳು. ಮದಗೊಬ್ಬ ಗೋಪಿಯು ಕುಳಿತುಕೊಂಡು ಶ್ರೀಕೃಷ್ಣನ ಪಾದಕಮಲವನ್ನು ವಿರಹವ್ಯಥೆಯಿಂದ ಉರಿಯುತ್ತಿದ್ದ ತನ್ನ ಎದೆಯ ಮೇಲೆ ಇರಿಸಿಕೊಂಡಳು. ॥ ೫ ॥ ಇನ್ನೊಬ್ಬ ಗೋಪಿಯು ಪ್ರಣಯಕೋಪದಿಂದ ವಿಹ್ವಲಳಾಗಿ ಹುಬ್ಬುಗಳನ್ನು ಗಂಟಿಕ್ಕಿ, ಹಲ್ಲುಗಳಿಂದ ತುಟಿಯನ್ನು ಕಚ್ಚುತ್ತಾ, ಕಟಾಕ್ಷಬಾಣಗಳಿಂದ ಶ್ರೀಕೃಷ್ಣನನ್ನು ಪ್ರಹರಿಸುವಳೋ ಎಂಬಂತೆ ದುರುಗುಟ್ಟಿಕೊಂಡು ನೋಡುತ್ತಿದ್ದಳು. ॥ ೬ ॥ ಒಬ್ಬಳು ಎವೆಯಿಕ್ಕದ ನೋಟದಿಂದ ಶ್ರೀಕೃಷ್ಣನ ಮುಖಾರವಿಂದದ ಮಧುವನ್ನು ಪಾನಮಾಡುತ್ತಲೇ ಇದ್ದಳು. ಸತ್ಪುರುಷರು ಭಗವಂತನ ದಿವ್ಯ ಚರಣಾರವಿಂದಗಳನ್ನು ಎಷ್ಟು ನೋಡಿದರೂ ತೃಪ್ತರಾಗದಿರುವಂತೆ ಆ ಗೋಪಿಯು ನಿರಂತರವಾಗಿ ಮುಖಕಮಲದ ಮಧುವನ್ನು ಪಾನಮಾಡುತ್ತಿದ್ದರೂ ತೃಪ್ತಳಾಗಲೇ ಇಲ್ಲ. ॥ ೭॥ ಇನ್ನೋರ್ವ ಗೋಪಿಯು ಕಂಗಳೆಂಬ ಮಾರ್ಗದಿಂದ ಭಗವಂತನನ್ನು ಹೃದಯಕಮಲಕ್ಕೊಯ್ದು ದ್ವಾರರೂಪದಿಂದಿದ್ದ ರೆಪ್ಪೆಗಳನ್ನು ಮುಚ್ಚಿಕೊಂಡಳು. ಹೃದಯಗಹ್ವರದಲ್ಲಿ ಪ್ರಕಾಶಮಾನವಾದ ಶ್ರೀಕೃಷ್ಣನನ್ನು ಆಲಿಂಗಿಸಿಕೊಂಡು ರೋಮಾಂಚಿತಳಾಗಿ ಪರಮಾನಂದದಲ್ಲಿ ಮುಳುಗಿಹೋದಳು. ॥ ೮ ॥

ಸರ್ವಾಸ್ತಾಃ ಕೇಶವಾಲೋಕಪರಮೋತ್ಸವನಿರ್ವೃತಾಃ ।
ಜಹುರ್ವಿರಹಜಂ ತಾಪಂ ಪ್ರಾಜ್ಞಂ ಪ್ರಾಪ್ಯ ಯಥಾ ಜನಾಃ ॥ ೯ ॥

ತಾಭಿರ್ವಿಧೂತಶೋಕಾಭಿರ್ಭಗವಾನಚ್ಯುತೋ ವೃತಃ ।
ವ್ಯರೋಚತಾಧಿಕಂ ತಾತ ಪುರುಷಃ ಶಕ್ತಿಭಿರ್ಯಥಾ ॥ ೧೦ ॥

ತಾಃ ಸಮಾದಾಯ ಕಾಲಿಂದ್ಯಾ ನಿರ್ವಿಶ್ಯ ಪುಲಿನಂ ವಿಭುಃ ।
ವಿಕಸತ್ಕುಂದಮಂದಾರಸುರಭ್ಯನಿಲಷಟ್ಪದಮ್ ॥ ೧೧ ॥

ಶರಚ್ಚಂದ್ರಾಂಶುಸಂದೋಹಧ್ವಸ್ತದೋಷಾತಮಃ ಶಿವಮ್ ।
ಕೃಷ್ಣಾಯಾ ಹಸ್ತತರಲಾಚಿತಕೋಮಲವಾಲುಕಮ್ ॥ ೧೨ ॥

ತದ್ದರ್ಶನಾಹ್ಲಾದವಿಧೂತಹೃದ್ರುಜೋ
ಮನೋರಥಾಂತಂ ಶ್ರುತಯೋ ಯಥಾ ಯಯುಃ ।
ಸ್ವೈರುತ್ತರೀಯೈಃ ಕುಚಕುಂಕುಮಾಂಕಿತೈ-
ರಚೀಕ್ಲೃಪನ್ನಾಸನಮಾತ್ಮಬಂಧವೇ ॥ ೧೩ ॥

ತತ್ರೋಪವಿಷ್ಟೋ ಭಗವಾನ್ ಸ ಈಶ್ವರೋ
ಯೋಗೇಶ್ವರಾಂತರ್ಹೃದಿ ಕಲ್ಪಿತಾಸನಃ ।
ಚಕಾಸ ಗೋಪೀಪರಿಷದ್ಗತೋಽರ್ಚಿತ-
ಸ್ತ್ರೈಲೋಕ್ಯಲಕ್ಷ್ಮ್ಯೇಕಪದಂ ವಪುರ್ದಧತ್ ॥ ೧೪ ॥

ಪರೀಕ್ಷಿತನೇ! ಮುಮುಕ್ಷುಗಳಾದ ಜನರು ಪ್ರಾಜ್ಞಪುರುಷನನ್ನು ಸಂದರ್ಶಿಸಿ ಸಂಸಾರದ ಜಂಜಾಟದಿಂದ ಮುಕ್ತರಾಗುವಂತೆಯೇ ಗೋಪಿಯರೆಲ್ಲರೂ ಭಗವಾನ್ ಶ್ರೀಕೃಷ್ಣನ ದರ್ಶನೋತ್ಸವದಿಂದ ಆನಂದಭರಿತರಾಗಿ ವಿರಹತಾಪದಿಂದ ಮುಕ್ತರಾದರು. ॥ ೯ ॥ ಭಗವಂತನಾದ ಅಚ್ಯುತನು ವಿರಹಶೋಕದಿಂದ ಮುಕ್ತರಾದ ಗೋಪಿಯರೊಡನೆ ಸುತ್ತುವರಿಯಲ್ಪಟ್ಟು, ಜ್ಞಾನ, ಬಲ ಮೊದಲಾದ ಶಕ್ತಿಗಳಿಂದ ಪರಿಪೂರ್ಣನಾದ ಈಶ್ವರನಂತೆಯೇ ಅತ್ಯಂತ ಶೋಭಾಯಮಾನವಾಗಿ ಪ್ರಕಾಶಿಸಿದನು. ॥ ೧೦ ॥

ಬಳಿಕ ಭಗವಾನ್ ಶ್ರೀಕೃಷ್ಣನು ಆ ವ್ರಜದ ಗೋಪಿಯರನ್ನು ಕರೆದುಕೊಂಡು ಯಮುನಾನದಿಯ ಮರಳು ಗುಡ್ಡೆಗಳ ಬಳಿಗೆ ಹೋದನು. ಆ ಸಮಯದಲ್ಲಿ ಅರಳಿದ ಮಲ್ಲಿಗೆ, ಮಂದಾರ ಮುಂತಾದ ಪುಷ್ಪಗಳಿಂದ ಸುಗಂಧವನ್ನು ಹೊತ್ತು ಶೀತಲವಾದ ಮಂದಾನಿಲವು ಬೀಸುತ್ತಿತ್ತು. ಸುಗಂಧದಿಂದ ಆಕರ್ಷಿತವಾದ ಮತ್ತ ಭೃಂಗಗಳು ಅತ್ತಲಿತ್ತ ಹಾರಾಡುತ್ತಿದ್ದವು. ಶರತ್ಕಾಲದ ಹುಣ್ಣಿಮೆಯ ಚಂದ್ರನು ಕಿರಣಗಳಿಂದ ಮೂಡಿಬಂದ ಹೃದಯಾನಂದಕರವಾದ ಬೆಳದಿಂಗಳಿನಿಂದ ರಾತ್ರಿಯ ಕತ್ತಲೆಯು ತೊಲಗಿಹೋದದ್ದಲ್ಲದೆ ಗೋಪಿಯರಿಗೆ ಆ ರಾತ್ರಿಯು ಅತ್ಯಂತ ಮಂಗಳಕರವೂ ಆಯಿತು. ಯಮುನೆಯ ಚಂಚಲವಾದ ತೆರೆಗಳ ರೂಪವಾದ ಕೈಗಳಿಂದ ಎರಚಲ್ಪಟ್ಟ ಕೋಮಲ ಮರಳಿನಿಂದ ಭಗವಂತನ ಲೀಲೆಗಳಿಗಾಗಿ ದಿವ್ಯವೇದಿಕೆಯನ್ನೇ ನಿರ್ಮಿಸಿತ್ತು. ॥ ೧೨ ॥ ಶ್ರುತಿಗಳು ಕರ್ಮಕಾಂಡದ ಮೂಲಕ ಪಾಪವನ್ನು ಪರಿಹರಿಸಿ, ಜ್ಞಾನಕಾಂಡದ ಮೂಲಕ ಆತ್ಮಸಾಕ್ಷಾತ್ಕಾರದ ಮನೋರಥವನ್ನು ಈಡೇರಿಸಿಕೊಡುವಂತೆ ಶ್ರೀಕೃಷ್ಣನ ದರ್ಶನದಿಂದ ಗೋಪಿಯರು ತಮ್ಮ ಮನಸ್ಸಿನ ಆಧಿ-ವ್ಯಾಧಿಗಳನ್ನು ಕಳಕೊಂಡು ಆನಂದ ಸಾಗರದಲ್ಲಿ ಮುಳುಗಿ ಹೋದರು. ಮರಳದಿಣ್ಣೆಗೆ ಬಂದ ಗೋಪಿಯರು ವಕ್ಷಸ್ಥಳದಲ್ಲಿದ್ದ ಕುಂಕುಮ ಕೇಸರಿಯಿಂದ ಅಂಕಿತವಾಗಿದ್ದ ತಮ್ಮ ಉತ್ತರಿಗಳನ್ನು ಹಾಸಿ ಆತ್ಮಬಂಧುವಾದ ಶ್ರೀಕೃಷ್ಣನಿಗೆ ಆಸನವನ್ನು ಕಲ್ಪಿಸಿ ಕೊಟ್ಟರು. ॥ ೧೩ ॥ ಮಹಾ-ಮಹಾಯೋಗಿಗಳು ತಮ್ಮ-ತಮ್ಮ ಹೃನ್ಮಂದಿರಗಳಲ್ಲಿ ಕಲ್ಪಿಸಿಕೊಂಡ ಆಸನಗಳಲ್ಲಿ ಕುಳಿತು ವಿರಾಜಿಸುವ ಸರ್ವೇಶ್ವರನಾದ ಭಗವಂತನು ತನ್ನ ಪರಮಭಕ್ತೆಯರಾದ ಗೋಪಿಯರು ಕಲ್ಪಿಸಿಕೊಟ್ಟ ಚೀರಾಸನದಲ್ಲಿ ಕುಳಿತನು. ಮೂರು ಲೋಕಗಳ ಲಾವಣ್ಯಕ್ಕೂ ಸಾರಭೂತವಾದ, ಅತ್ಯಂತ ಸೌಂದರ್ಯದಿಂದ ಕೂಡಿದ ಶರೀರವನ್ನು ಧರಿಸಿದ ಶ್ರೀಕೃಷ್ಣನು ಗೋಪಿಕಾ ಸ್ತ್ರೀಯರ ಸಮೂಹದಿಂದ ಅರ್ಚಿಸಲ್ಪಡುತ್ತಾ ಪ್ರಕಾಶಿಸಿದನು. ॥ ೧೪ ॥ ಭಗವಾನ್ ಶ್ರೀಕೃಷ್ಣನು ತನ್ನ ಅಲೌಕಿಕವಾದ ಸೌಂದರ್ಯದಿಂದ ಗೋಪಿಯರ ಮನಸ್ಸನ್ನು ಕೆರಳಿಸುತ್ತಿದ್ದನು. ಅವನನ್ನು ಸೇರಬೇಕೆಂಬ, ಅವನೊಡನೆ ಕ್ರೀಡಿಸಬೇಕೆಂಬ ಆಕಾಂಕ್ಷೆಯು ಅವರಲ್ಲಿ ಕ್ಷಣ-ಕ್ಷಣಕ್ಕೂ ವರ್ಧಿಸುತ್ತಿತ್ತು. ಅವರು ಮಂದ ಹಾಸದ ಮೂಲಕವಾಗಿ, ಕಡೆಗಣ್ಣ ನೋಟಗಳ ಮೂಲಕವಾಗಿ, ಹುಬ್ಬು ಹಾರಿಸುವುದರ ಮೂಲಕವಾಗಿ ಅವನನ್ನು ಸೇವಿಸುತ್ತಿದ್ದರು. ಮತ್ತೆ ಕೆಲವರು ಅವನ ಪಾದಾರವಿಂದಗಳನ್ನು ತೊಡೆಯಲ್ಲಿಟ್ಟುಕೊಂಡು ಒತ್ತುತ್ತಿದ್ದರು. ಕೆಲವರು ಅವನ ದುಂಡಾದ ತೋಳುಗಳನ್ನು ಹಿಡಿದು

ಸಭಾಜಯಿತ್ವಾ ತಮನಂಗದೀಪನಂ
 ಸಹಾಸಲೀಲೇಕ್ಷಣವಿಭ್ರಮಭ್ರುವಾ ।
ಸಂಸ್ಪರ್ಶನೇನಾಂಕಕೃತಾಂಘ್ರಿಹಸ್ತಯೋಃ
 ಸಂಸ್ತುತ್ಯ ಈಷತ್ಕುಪಿತಾ ಬಭಾಷಿರೇ ॥ ೧೫ ॥

*ಗೋಪ್ಯ ಊಚುಃ*

ಭಜತೋಽನುಭಜಂತ್ಯೇಕ ಏಕ ಏತದ್ವಿಪರ್ಯಯಮ್ ।
ನೋಭಯಾಂಶ್ಚ ಭಜಂತ್ಯೇಕ ಏತನ್ನೋ ಬ್ರೂಹಿ ಸಾಧು ಭೋಃ
॥ ೧೬ ॥

*ಶ್ರೀಭಗವಾನುವಾಚ*

ಮಿಥೋ ಭಜಂತಿ ಯೇ ಸಖ್ಯಃ ಸ್ವಾರ್ಥೈಕಾಂತೋದ್ಯಮಾ ಹಿ ತೇ ।
ನ ತತ್ರ ಸೌಹೃದಂ ಧರ್ಮಃ ಸ್ವಾರ್ಥಾರ್ಥಂ ತದ್ಧಿ ನಾನ್ಯಥಾ
॥ ೧೭ ॥

ಭಜಂತ್ಯಭಜತೋ ಯೇ ವೈ ಕರುಣಾಃ ಪಿತರೋ ಯಥಾ ।
ಧರ್ಮೋ ನಿರಪವಾದೋಽತ್ರ ಸೌಹೃದಂ ಚ ಸುಮಧ್ಯಮಾಃ
॥ ೧೮ ॥

ಭಜತೋಽಪಿ ನ ವೈ ಕೇಚಿದ್ಭಜಂತ್ಯಭಜತಃ ಕುತಃ ।
ಆತ್ಮಾರಾಮಾ ಹ್ಯಾಪ್ತಕಾಮಾ ಅಕೃತಜ್ಞಾ ಗುರುದ್ರುಹಃ
॥ ೧೯ ॥

ನಾಹಂ ತು ಸಖ್ಯೋ ಭಜತೋಽಪಿ ಜಂತೂನ್
 ಭಜಾಮ್ಯಮೀಷಾಮನುವೃತ್ತಿವೃತ್ತಯೇ ।
ಯಥಾಧನೋ ಲಬ್ಧಧನೇ ವಿನಷ್ಟೇ
 ತಚ್ಚಿಂತಯಾನ್ಯನ್ನಿಭೃತೋ ನ ವೇದ ॥ ೨೦ ॥

ಏವಂ ಮದರ್ಥೋಜ್ಝಿತಲೋಕವೇದ-
 ಸ್ವಾನಾಂ ಹಿ ವೋ ಮಯ್ಯನುವೃತ್ತಯೇಽಬಲಾಃ ।
ಮಯಾ ಪರೋಕ್ಷಂ ಭಜತಾ ತಿರೋಹಿತಂ
 ಮಾಸೂಯಿತುಂ ಮಾರ್ಹಥ ತತ್ಪ್ರಿಯಂ ಪ್ರಿಯಾಃ ॥ ೨೧ ॥

ಒತ್ತುವರು. ಅವರ ಸೇವೆಗೆ ಅವನು ಪ್ರತಿಕ್ರಿಯೆಯನ್ನೇ ತೋರದಿರಲು ಸ್ವಲ್ಪ ಕೋಪಗೊಂಡು ಗೋಪಿಯರು ತಮ್ಮ ಪ್ರಿಯಕರನಿಗೆ ಹೇಳಿದರು. ॥ ೧೫ ॥

**ಗೋಪಿಯರು ಹೇಳುತ್ತಾರೆ** – ಪ್ರಾಣನಾಥನೇ! ಲೋಕದಲ್ಲಿ ಕೆಲವರು ತಮ್ಮನ್ನು ಪ್ರೀತಿಸುವವರನ್ನು ಪ್ರೀತಿಸುವರು. ಮತ್ತೆ ಕೆಲವರು ತಮ್ಮನ್ನು ಪ್ರೀತಿಸದವರನ್ನೂ ಪ್ರೀತಿಸುತ್ತಾರೆ. ಮತ್ತೆ ಕೆಲವರು ಇಬ್ಬರನ್ನೂ ಪ್ರೀತಿಸುವುದಿಲ್ಲ. ಈ ಮೂವರಲ್ಲಿ ನಿನಗೆ ಯಾರು ಒಳ್ಳೆಯವರಾಗಿ ಕಾಣುತ್ತಾರೆ? ॥ ೧೬ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ನನ್ನ ಪ್ರಿಯ ಗೆಳತಿಯರೇ! ತಮ್ಮನ್ನು ಪ್ರೀತಿಸಿದವರನ್ನು ಪ್ರೀತಿಸುವವರ ಉದ್ಯೋಗವು ಕೇವಲ ಸ್ವಾರ್ಥ ಸಾಧನೆಯಾಗಿದೆ. ಕೊಟ್ಟು-ಕೊಳ್ಳುವ ವ್ಯವಹಾರವಾಗಿದೆ. ಅದರಲ್ಲಿ ಸೌಹಾರ್ದವಾಗಲೀ, ಧರ್ಮವಾಗಲೀ ಇರುವುದಿಲ್ಲ. ಅವರ ಪ್ರೀತಿ ಕೇವಲ ಸ್ವಾರ್ಥಕ್ಕಾಗಿಯೇ ಇದೆ; ಇದಲ್ಲದೆ ಬೇರೆ ಏನೂ ಇಲ್ಲ. ॥ ೧೭ ॥ ಸುಂದರಿಯರೇ! ಪ್ರೀತಿಸದೆ ಇರುವವನ್ನು ಪ್ರೀತಿಸುವವರು ಕರುಣಾಳುಗಳು. ತಂದೆ-ತಾಯಿಗಳಂತಿರುವವರು. ಅವರ ಪ್ರೇಮವು ನಿರ್ದೋಷವೂ ನಿಷ್ಕಳಂಕವೂ ಆಗಿದೆ. ಅವರ ಪ್ರೇಮದಲ್ಲಿ ಪುಣ್ಯವೂ, ಧರ್ಮವೂ, ಸೌಹಾರ್ದವು ಇರುತ್ತದೆ. ॥ ೧೮ ॥ ಪ್ರೀತಿಸದವರನ್ನೇ ಪ್ರೀತಿಸುವುದಿಲ್ಲವೆಂದ ಮೇಲೆ ಪ್ರೀತಿಸದವರ ವಿಷಯದಲ್ಲಿ ಹೇಳಬೇಕಾಗಿಯೇ ಇಲ್ಲ. ಪ್ರೀತಿಸಿದವರನ್ನು ಪ್ರೀತಿಸಿದವರು ನಾಲ್ಕು ಬಗೆಯವರಾಗಿದ್ದಾರೆ. ೧) ಆತ್ಮಾರಾಮರು – ಬ್ರಹ್ಮಜ್ಞಾನಕ್ಕಾಗಿ ಧ್ಯಾನಾಸಕ್ತರಾದ ಯೋಗಿಗಳು ಅಥವಾ ಬ್ರಹ್ಮಭಾವದಿಂದ ಆನಂದಪಡುತ್ತಿರುವವರು. ೨) ಆಪ್ತಕಾಮರು – ಪ್ರಾಪಂಚಿಕ ಸೌಖ್ಯವನ್ನು ತ್ಯಜಿಸಿದ, ಪ್ರಪಂಚದ ಸಂಬಂಧವನ್ನು ಬಿಟ್ಟಿರುವ, ಇಷ್ಟಾರ್ಥಗಳನ್ನು ಪಡೆದ ಜೀವನ್ಮುಕ್ತರು. ೩) ಅಕೃತಜ್ಞಾಃ – ಮಾಡಿದ ಉಪಕಾರವನ್ನು ಸ್ಮರಿಸಿದ ಕೃತಘ್ನರು. ೪) ಗುರುದ್ರುಹಃ – ಗುರು ಹಿರಿಯರಿಗೂ ದ್ರೋಹಮಾಡುವವರು. ಈ ನಾಲ್ಕು ಬಗೆಯ ಮನುಷ್ಯರು ಪ್ರೀತಿಸಿದವರನ್ನು ಪ್ರೀತಿಸುವುದಿಲ್ಲ. ॥ ೧೯ ॥ ಗೋಪಿಯರೇ! ನಾನಾದರೋ ಪ್ರೇಮಿಸುವವರೊಂದಿಗೆ ಹೇಗೆ ವ್ಯವಹರಿಸಬೇಕೋ ಹಾಗೆ ಮಾಡುವುದಿಲ್ಲ. ಇದಕ್ಕೆ ಕಾರಣವೇನೆಂದರೆ ಅವರ ಚಿತ್ತವೃತ್ತಿಯು ನಿರಂತರವಾಗಿ ನನ್ನಲ್ಲೇ ತೊಡಗಿರಬೇಕೆಂಬುದೇ ನನ್ನ ಇಷ್ಟವಾಗಿದೆ. ದರಿದ್ರನಾದವನಿಗೆ ಎಂದೋ ಬಹಳಷ್ಟು ಹಣ ದೊರೆಯಿತು. ಮತ್ತೆ ಕಳೆದು ಹೋದರೆ ಅವನು ಕಳೆದುಹೋದ ಧನವನ್ನೇ ಚಿಂತಿಸುತ್ತಾ ಇರುತ್ತಾನೆ. ಹಾಗೆಯೇ ನಾನು ಸಿಕ್ಕಿಯೂ ಸಿಕ್ಕದವನಂತೆ ಇರುತ್ತೇನೆ. ॥ ೨೦ ॥ ಗೋಪಿಯರೇ! ನೀವೆಲ್ಲ ನನಗಾಗಿ ಲೋಕಮರ್ಯಾದೆಯನ್ನು, ಶಾಸ್ತ್ರಮರ್ಯಾದೆಯನ್ನು, ಸ್ವಜನರನ್ನು ಪರಿತ್ಯಜಿಸಿ, ನನ್ನಲ್ಲೇ ಅನುರಕ್ತರಾಗಿ ನನ್ನ ಬಳಿಗೆ ಬಂದಿರಿ. ನಿಮಗೆ ನನ್ನಲ್ಲಿ ಇನ್ನೂ ಹೆಚ್ಚಿನ ಪ್ರೇಮವುಂಟಾಗಲು ಮತ್ತು ನನ್ನನ್ನೇ ಅನುವರ್ತಿಸುವಂತೆ ಮಾಡಲು ನಿಮಗೆ ಕಾಣದಂತೆ ಮರೆಯಾಗಿದ್ದುಕೊಂಡು ನಿಮ್ಮನ್ನೇ ಪರೋಕ್ಷವಾಗಿ ಧ್ಯಾನಿಸುತ್ತಿದ್ದೆ. ಆದುದರಿಂದ ಪ್ರಿಯತಮೆಯರಾದ ನೀವು ನನ್ನಲ್ಲಿ ದೋಷವೆಣಿಸಬೇಡಿರಿ. ನೀವೆಲ್ಲರೂ ನನಗೆ ಪ್ರಿಯರಾಗಿರುವಿರಿ ಮತ್ತು ನಾನು ನಿಮಗೆ ಪ್ರಿಯನಾಗಿದ್ದೇನೆ. ॥ ೨೧ ॥

ನ ಪಾರಯೇಽಹಂ ನಿರವದ್ಯಸಂಯುಜಾಂ
ಸ್ವಸಾಧುಕೃತ್ಯಂ ವಿಬುಧಾಯುಷಾಪಿ ವಃ ।
ಯಾ ಮಾಭಜನ್ ದುರ್ಜರಗೇಹಶೃಂಖಲಾಃ
ಸಂವೃಶ್ಚ್ಯ ತದ್ವಃ ಪ್ರತಿಯಾತು ಸಾಧುನಾ ॥ ೨೨ ॥

ಪ್ರಿಯಗೋಪಿಯರೇ! ಋಷಿ-ಮುನಿಗಳಿಂದಲೂ ಪರಿತ್ಯಜಿಸಲು ಸಾಧ್ಯವಾಗದ ನಾನು-ನನ್ನದೆಂಬ ಸಂಸಾರದ ಸಂಕೋಲೆಗಳನ್ನು ಕಿತ್ತೊಗೆದು ನನ್ನ ಬಳಿಗೆ ಬಂದಿರುವಿರಿ. ನನ್ನೊಡನೆ ನಿರ್ದುಷ್ಟವಾದ ಭಕ್ತಿಯ ಸಂಬಂಧವನ್ನು ಹೊಂದಿರುವ ನಿಮಗೆ ಸರಿಯಾದ ಪ್ರತ್ಯುಪಕಾರವನ್ನು ಮಾಡಲು ದೇವತೆಗಳ ಆಯುರ್ಮಾನವನ್ನು ಹೊಂದಿದರೂ ನನ್ನಿಂದ ಸಾಧ್ಯವಾಗಲಾರದು. ಅರ್ಥಾತ್ ನಾನು ನಿಮಗೆ ಜನ್ಮ ಜನ್ಮಾಂತರದಲ್ಲಿ ಋಣಿಯಾಗಿರುವೆ. ಆದುದರಿಂದ ನೀವು ಮಾಡುವ ಸತ್ಕಾರವನ್ನು ಸ್ವೀಕರಿಸುವುದೇ ನಿಮಗೆ ನಾನು ಮಾಡುವ ಪ್ರತ್ಯುಪಕಾರವೆಂದು ಭಾವಿಸಿರಿ. ಇದರಿಂದ ನಿಮ್ಮ ಮನೋರಥವು ಈಡೇರಲಿ. ॥ ೨೨ ॥

ಮೂವತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೩೨ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ ರಾಸಕ್ರೀಡಾಯಾಂ ಗೋಪೀಸಾಂತ್ವನಂ ನಾಮ ದ್ವಾತ್ರಿಂಶೋಽಧ್ಯಾಯಃ ॥ ೩೨ ॥

# ಮೂವತ್ತಮೂರನೆಯ ಅಧ್ಯಾಯ

## ಮಹಾರಾಸ ಕ್ರೀಡೆ

ಶ್ರೀಶುಕ ಉವಾಚ

ಇತ್ಥಂ ಭಗವತೋ ಗೋಪ್ಯಃ ಶ್ರುತ್ವಾ ವಾಚಃ ಸುಪೇಶಲಾಃ ।
ಜಹುರ್ವಿರಹಜಂ ತಾಪಂ ತದಂಗೋಪಚಿತಾಶಿಷಃ ॥ ೧ ॥

ತತ್ರಾರಭತ ಗೋವಿಂದೋ ರಾಸಕ್ರೀಡಾಮನುವ್ರತೈಃ ।
ಸ್ತ್ರೀರತ್ನೈರನ್ವಿತಃ ಪ್ರೀತೈರನ್ಯೋನ್ಯಾಬದ್ಧಬಾಹುಭಿಃ ॥ ೨ ॥

ರಾಸೋತ್ಸವಃ ಸಂಪ್ರವೃತ್ತೋ ಗೋಪೀಮಂಡಲಮಂಡಿತಃ ।
ಯೋಗೇಶ್ವರೇಣ ಕೃಷ್ಣೇನ ತಾಸಾಂ ಮಧ್ಯೇ ದ್ವಯೋರ್ದ್ವಯೋಃ ।
ಪ್ರವಿಷ್ಟೇನ ಗೃಹೀತಾನಾಂ ಕಂಠೇ ಸ್ವನಿಕಟಂ ಸ್ತ್ರಿಯಃ ॥ ೩ ॥

ಯಂ ಮನ್ಯೇರನ್ನಭಸ್ತಾವದ್ವಿಮಾನಶತಸಂಕುಲಮ್ ।
ದಿವೌಕಸಾಂ ಸದಾರಾಣಾಮೌತ್ಸುಕ್ಯಾಪಹೃತಾತ್ಮನಾಮ್ ॥ ೪ ॥

ತತೋ ದುಂದುಭಯೋ ನೇದುರ್ನಿಪೇತುಃ ಪುಷ್ಪವೃಷ್ಟಯಃ ।
ಜಗುರ್ಗಂಧರ್ವಪತಯಃ ಸಸ್ತ್ರೀಕಾಸ್ತದ್ಯಶೋಽಮಲಮ್ ॥ ೫ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ -ಪರೀಕ್ಷಿದ್ರಾಜನೇ! ಗೋಪಿಯರು ಭಗವಂತನ ಪ್ರೇಮಪೂರ್ಣವಾದ, ಸುಮಧುರವಾದ ಈ ಮಾತನ್ನು ಕೇಳಿ ವಿರಹತಾಪದಿಂದ ಮುಕ್ತರಾದರು. ಸೌಂದರ್ಯನಿಧಿಯಾದ, ಪ್ರಾಣಪ್ರಿಯನಾದ ಶ್ರೀಕೃಷ್ಣನ ಅಂಗ ಸಂಗದಿಂದ ಸಫಲ ಮನೋರಥರಾದರು. ॥ ೧ ॥ ಆನಂದ ತುಂದಿಲರಾಗಿ ಪರಸ್ಪರ ತೋಳುಗಳನ್ನು ಹಿಡಿದುಕೊಂಡು ತನ್ನನ್ನು ಅನುಸರಿಸಿ ನಿಂತಿರುವ ಸ್ತ್ರೀರತ್ನಗಳೊಡನೆ ಯಮುನಾ ನದಿಯ ಮರಳುದಿಣ್ಣೆಯಲ್ಲಿ ಭಗವಾನ್ ಶ್ರೀಕೃಷ್ಣನು ರಾಸಕ್ರೀಡೆಯನ್ನು ಆಡಲು ಪ್ರಾರಂಭಿಸಿದನು. ॥ ೨ ॥ ಯೋಗೇಶ್ವರನಾದ ಶ್ರೀಕೃಷ್ಣನು ಇಬ್ಬಿಬ್ಬರು ಗೋಪಿಯರ ಮಧ್ಯದಲ್ಲಿ ಒಬ್ಬೊಬ್ಬ ಶ್ರೀಕೃಷ್ಣನಿರುವಂತೆ ಪ್ರಕಟನಾಗಿ ಆ ಇಬ್ಬರೂ ಗೋಪಿಯರ ಹೆಗಲಮೇಲೆ ತನ್ನ ತೋಳುಗಳನ್ನು ಹಾಕಿಕೊಂಡಿದ್ದನು. ಇದರಿಂದ ಪ್ರತಿಯೋರ್ವ ಗೋಪಿಯು ಶ್ರೀಕೃಷ್ಣನು ತನ್ನ ಪಕ್ಕದಲ್ಲೇ ಇರುವನೆಂದು ಭಾವಿಸಿಕೊಂಡರು. ॥ ೩ ॥ ಹೀಗೆ ಸಾವಿರ-ಸಾವಿರ ಗೋಪಿಯರಿಂದ ಶೋಭಾಯಮಾನನಾದ ಭಗವಾನ್ ಶ್ರೀಕೃಷ್ಣನ ದಿವ್ಯ ರಾಸೋತ್ಸವವು ಪ್ರಾರಂಭವಾಯಿತು. ಆ ಸಮಯದಲ್ಲಿ ಆಕಾಶದಲ್ಲಿ ನೂರಾರು ವಿಮಾನಗಳು ನೆರೆದವು. ರಾಸಕ್ರೀಡೆಯನ್ನು ನೋಡಬೇಕೆಂಬ ತವಕದಿಂದ ಸಕಲದೇವತೆಗಳೂ ತಮ್ಮ-ತಮ್ಮ ಪತ್ನಿಯರೊಡನೆ ವಿಮಾನಗಳಲ್ಲಿ ಆಗಮಿಸಿದ್ದರು. ॥ ೪ ॥ ಆಗ ದೇವದುಂದುಭಿಗಳು ಮೊಳಗಿದವು. ರಾಸ ಮಂಡಲದ ಮೇಲೆ ಪುಷ್ಪವೃಷ್ಟಿಗಳಾದವು. ಗಂಧರ್ವಶ್ರೇಷ್ಠರು ತಮ್ಮ-ತಮ್ಮ ಪತ್ನಿಯರೊಂದಿಗೆ ಭಗವಂತನ ನಿರ್ಮಲವಾದ ಯಶಸ್ಸನ್ನು ಗಾನಮಾಡಿದರು. ॥ ೫ ॥

ವಲಯಾನಾಂ ನೂಪುರಾಣಾಂ ಕಿಂಕಿಣೀನಾಂ ಚ ಯೋಷಿತಾಮ್ ।
ಸಪ್ರಿಯಾಣಾಮಭೂಚ್ಛಬ್ದಸ್ತುಮುಲೋ ರಾಸಮಂಡಲೇ ॥ ೬ ॥

ತತ್ರಾತಿಶುಶುಭೇ ತಾಭಿರ್ಭಗವಾನ್ ದೇವಕೀಸುತಃ ।
ಮಧ್ಯೇ ಮಣೀನಾಂ ಹೈಮಾನಾಂ ಮಹಾಮರಕತೋ ಯಥಾ ॥ ೭ ॥

ಪಾದನ್ಯಾಸೈರ್ಭುಜವಿಧುತಿಭಿಃ ಸಸ್ಮಿತೈರ್ಭ್ರೂವಿಲಾಸೈ-
ರ್ಭಜ್ಯನ್ಮಧ್ಯೈಶ್ಚಲಕುಚಪಟೈಃ ಕುಂಡಲೈರ್ಗಂಡಲೋಲೈಃ ।
ಸ್ವಿದ್ಯನ್ಮುಖ್ಯಃ ಕಬರರಶನಾಗ್ರಂಥಯಃ ಕೃಷ್ಣವಧ್ವೋ
ಗಾಯಂತ್ಯಸ್ತಂ ತಡಿತ ಇವ ತಾ ಮೇಘಚಕ್ರೇ ವಿರೇಜುಃ ॥ ೮ ॥

ಉಚ್ಚೈರ್ಜಗುರ್ನೃತ್ಯಮಾನಾ ರಕ್ತಕಂಠ್ಯೋ ರತಿಪ್ರಿಯಾಃ ।
ಕೃಷ್ಣಾಭಿಮರ್ಶಮುದಿತಾ ಯದ್ಗೀತೇನೇದಮಾವೃತಮ್ ॥ ೯ ॥

ಕಾಚಿತ್ಸಮಂ ಮುಕುಂದೇನ ಸ್ವರಜಾತೀರಮಿಶ್ರಿತಾಃ ।
ಉನ್ನಿನ್ಯೇ ಪೂಜಿತಾ ತೇನ ಪ್ರೀಯತಾ ಸಾಧು ಸಾಧ್ವಿತಿ ।
ತದೇವ ಧ್ರುವಮುನ್ನಿನ್ಯೇ ತಸ್ಯೈ ಮಾನಂ ಚ ಬಹ್ವದಾತ್ ॥ ೧೦ ॥

ಕಾಚಿದ್ರಾಸಪರಿಶ್ರಾಂತಾ ಪಾರ್ಶ್ವಸ್ಥಸ್ಯ ಗದಾಭೃತಃ ।
ಜಗ್ರಾಹ ಬಾಹುನಾ ಸ್ಕಂಧಂ ಶ್ಲಥದ್ವಲಯಮಲ್ಲಿಕಾ ॥ ೧೧ ॥

ರಾಸಮಂಡಲದಲ್ಲಿದ್ದ ಸಮಸ್ತ ಗೋಪಿಯರು ತಮ್ಮ ಪ್ರಿಯತಮ ಶ್ಯಾಮಸುಂದರನೊಂದಿಗೆ ನೃತ್ಯವಾಡತೊಡಗಿದರು. ಅವರ ಕೈಗಡಗಗಳು, ಕಾಲಂದುಗೆಗಳು, ಒಡ್ಯಾಣದ ಕಿರುಗೆಜ್ಜೆಗಳು ಒಟ್ಟಿಗೆ ಉಲಿಯತೊಡಗಿದವು. ಅಸಂಖ್ಯಗೋಪಿಯರಿದ್ದ ಕಾರಣ ಆ ಮಧುರ ಧ್ವನಿಯು ಸರ್ವತ್ರ ಕೇಳಿ ಬರುತ್ತಿತ್ತು. ॥ ೬ ॥ ಸುವರ್ಣಮಯವಾದ ಮಣಿಗಳ ಮಧ್ಯದಲ್ಲಿ ಜ್ಯೋತಿರ್ಮಯ ಮಹಾಮರಕತಮಣಿಯು ವಿರಾಜಿಸುವಂತೆಯೇ ಕಡು ಚೆಲುವೆಯರಾದ ಗೋಪಿಯರ ನಡುವೆ ನೀಲಮೇಘಶ್ಯಾಮನಾದ ದೇವಕೀ ಕಂದನಾದ ಶ್ರೀಕೃಷ್ಣನು ರಾರಾಜಿಸಿದನು. ॥ ೭ ॥ ರಾಸನೃತ್ಯವನ್ನು ಆಡುವಾಗ ಗೋಪಿಕೆಯರು ತಾಳಕ್ಕೆ ಸರಿಯಾಗಿ ಹೆಜ್ಜೆಗಳನ್ನು ಹಾಕುತ್ತಾ, ಪಾದವಿನ್ಯಾಸಕ್ಕೆ ಅನುಗುಣವಾಗಿ ಕೈಗಳಲ್ಲಿ ಮುದ್ರೆಗಳನ್ನು ತೋರಿಸುತ್ತಾ ಎರಡೂ ಕೈಗಳನ್ನು ಎಡ-ಬಲಕ್ಕೂ ಹಿಂದೆ-ಮುಂದೆಯೂ ಆಡಿಸುತ್ತಿದ್ದರು. ತಾಳಕ್ಕನುಸಾರವಾಗಿ ಕೆಲವು ವೇಳೆ ನಿಧಾನವಾಗಿಯೂ, ಕೆಲವು ವೇಳೆ ವೇಗವಾಗಿಯೂ ಹೆಜ್ಜೆಗಳನ್ನು ಹಾಕುತ್ತಾ ತಲೆಗಳನ್ನು, ಕಣ್ಣುಗಳನ್ನು ಆಡಿಸುವರು. ಕೆಲವು ವೇಳೆ ಭಾವಪೂರ್ಣವಾಗಿ ನಗುವರು, ಹುಬ್ಬುಹಾರಿಸುವರು. ಕಡೆಗಣ್ಣಿನ ನೋಟದಿಂದ ನೋಡುವರು. ಕೆಲವೊಮ್ಮೆ ಕಿಲಕಿಲನೆ ನಗುವರು. ಸೊಂಟವನ್ನು ಬಳುಕಿಸುವರು. ನರ್ತಿಸಾಡುತ್ತಾ ಕುಳಿತಾಗ, ಎದ್ದಾಗ, ಬಾಗಿದಾಗ ಅವರ ಸ್ತನಗಳು ಕುಲಕಾಡುತ್ತಿದ್ದವು. ಕುಂಡಲಗಳು ಕಪೋಲಗಳಲ್ಲಿ ಕುಣಿದಾಡುತ್ತಿದ್ದವು. ಮುಖವು ಬೆವರಿತ್ತು. ತುರುಬುಗಳು ಬಿಚ್ಚಿಹೋಗಿದ್ದವು. ಒಡ್ಯಾಣಗಳು ಸಡಿಲವಾಗಿದ್ದವು. ಹೀಗೆ ಶ್ರೀಕೃಷ್ಣನ ಪ್ರಿಯೆಯರಾದ ಗೋಪಿಕೆಯರು ಶ್ರೀಕೃಷ್ಣನಿಗೆ ಉಲ್ಲಾಸವಾಗುವಂತೆ ನಾನಾಭಂಗಿಗಳಲ್ಲಿ ನೃತ್ಯವಾಡುತ್ತಾ ಅವನ ಲೀಲಾಪ್ರಸಂಗಗಳನ್ನು ಕರ್ಣಾನಂದಕರವಾಗಿ ಹಾಡುತ್ತಾ ಮೇಘಗಳ ಮಧ್ಯದಲ್ಲಿ ಕಾಣಿಸಿಕೊಳ್ಳುವ ಮಿಂಚುಗಳಂತೆ ಪ್ರಕಾಶಿಸಿದರು. ॥ ೮ ॥ ರಾಸಪ್ರಿಯರಾದ ಗೋಪಿಯರು ಶ್ರೀಕೃಷ್ಣನ ಸ್ಪರ್ಶಮಾತ್ರದಿಂದ ಆನಂದ ಸಾಗರದಲ್ಲಿ ಮುಳುಗಿ, ಆತನೊಡನೆ ರಾಸನೃತ್ಯವನ್ನು ಆಡುತ್ತಾ ತಮ್ಮ ಸುಮಧುರ ಕಂಠಮಾಧುರ್ಯದಿಂದ ವಿಶ್ವವನ್ನೇ ವ್ಯಾಪಿಸುವಷ್ಟು ಗಟ್ಟಿಯಾಗಿ ಹಾಡತೊಡಗಿದರು. ಅದು ವಿಶ್ವದಲ್ಲೆಲ್ಲ ಈಗಲೂ ಪ್ರತಿಧ್ವನಿಸುತ್ತಿದೆ. ॥ ೯ ॥ ಓರ್ವ ಗೋಪಿಯು ಶ್ರೀಕೃಷ್ಣನೊಡನೆ ಧ್ವನಿಗೂಡಿಸಿ ಹಾಡುತ್ತಿದ್ದಳು. ಆಕೆಯ ಧ್ವನಿಯು ಶ್ರೀಕೃಷ್ಣನ ಸ್ವರಕ್ಕಿಂತ ತಾರಕದಲ್ಲಿತ್ತು. ಅದನ್ನೇ ಕೃಷ್ಣನು ಭಲೇ! ಭಲೇ! ಕರ್ಣಾನಂದಕರವಾಗಿದೆ ಎಂದು ಹೇಳುತ್ತಾ ಅವಳ ಹಾಡಿಗೆ ಅನುಗುಣವಾಗಿ ಧ್ರುವವೆಂಬ ತಾಳವನ್ನು ಹಾಕುತ್ತಾ ಆಕೆಯನ್ನು ಪ್ರೋತ್ಸಾಹಿಸಿದನು. ॥ ೧೦ ॥ ಒಬ್ಬ ಗೋಪಿಯು ರಾಸನೃತ್ಯದಿಂದ ಬಹಳವಾಗಿ ಬಳಲಿದಳು. ಮುಂಗೈಗಳಿಗೂ, ತೋಳುಗಳಿಗೂ ಕಟ್ಟಿಕೊಂಡ ಮಲ್ಲಿಗೆಯ ದಂಡೆಗಳು ಕಣಚಿಬೀಳುತ್ತಿದ್ದವು. ತತ್ತರಿಸಿ ಬೀಳುವುದರಲ್ಲಿದ್ದ ಆಕೆಯು ಪಕ್ಕದಲ್ಲಿದ್ದ ಶ್ರೀಕೃಷ್ಣನ ಭುಜವನ್ನು ಹಿಡಿದುಕೊಂಡು ಹಾಗೆಯೇ ನಿಂತುಕೊಂಡಳು. ॥ ೧೧ ॥

ತತ್ರೈಕಾಂಸಗತಂ ಬಾಹುಂ ಕೃಷ್ಣಸ್ಯೋತ್ಪಲಸೌರಭಮ್ ।
ಚಂದನಾಲಿಪ್ತಮಾಘ್ರಾಯ ಹೃಷ್ಟರೋಮಾ ಚುಚುಂಬ ಹ ॥ ೧೨ ॥

ಕಸ್ಯಾಶ್ಚಿನ್ನಾಟ್ಯವಿಕ್ಷಿಪ್ತಕುಂಡಲತ್ವಿಷಮಂಡಿತಮ್ ।
ಗಂಡಂ ಗಂಡೇ ಸಂದಧತ್ಯಾ ಅದಾತ್ತಾಂಬೂಲಚರ್ವಿತಮ್ ॥ ೧೩ ॥

ನೃತ್ಯಂತೀ ಗಾಯತೀ ಕಾಚಿತ್ಕೂಜನ್ನೂಪುರಮೇಖಲಾ ।
ಪಾರ್ಶ್ವಸ್ಥಾಚ್ಯುತಹಸ್ತಾಬ್ಜಂ ಶ್ರಾಂತಾಧಾತ್ಸ್ತನಯೋಃ ಶಿವಮ್ ॥ ೧೪ ॥

ಗೋಪ್ಯೋ ಲಬ್ಧ್ವಾಚ್ಯುತಂ ಕಾಂತಂ ಶ್ರಿಯ ಏಕಾಂತವಲ್ಲಭಮ್ ।
ಗೃಹೀತಕಂಠ್ಯಸ್ತದ್ದೋರ್ಭ್ಯಾಂ ಗಾಯಂತ್ಯಸ್ತಂ ವಿಜಹ್ರಿರೇ ॥ ೧೫ ॥

ಕರ್ಣೋತ್ಪಲಾಲಕವಿಟಂಕಕಪೋಲಘರ್ಮ-
ವಕ್ತ್ರಶ್ರಿಯೋ ವಲಯನೂಪುರಘೋಷವಾದ್ಯೈಃ ।
ಗೋಪ್ಯಃ ಸಮಂ ಭಗವತಾ ನನೃತುಃ ಸ್ವಕೇಶ-
ಸ್ರಸ್ತಸ್ರಜೋ ಭ್ರಮರಗಾಯಕರಾಸಗೋಷ್ಠ್ಯಾಮ್ ॥ ೧೬ ॥

ಏವಂ ಪರಿಷ್ವಂಗಕರಾಭಿಮರ್ಶ-
ಸ್ನಿಗ್ಧೇಕ್ಷಣೋದ್ದಾಮವಿಲಾಸಹಾಸೈಃ ।
ರೇಮೇ ರಮೇಶೋ ವ್ರಜಸುಂದರೀಭಿ-
ರ್ಯಥಾರ್ಭಕಃ ಸ್ವಪ್ರತಿಬಿಂಬವಿಭ್ರಮಃ ॥ ೧೭ ॥

ತದಂಗಸಂಗಪ್ರಮುದಾಕುಲೇಂದ್ರಿಯಾಃ
ಕೇಶಾನ್‌ದುಕೂಲಂ ಕುಚಪಟ್ಟಿಕಾಂ ವಾ ।
ನಾಂಜಃ ಪ್ರತಿವ್ಯೋಢುಮಲಂ ವ್ರಜಸ್ತ್ರಿಯೋ
ವಿಸ್ರಸ್ತಮಾಲಾಭರಣಾಃ ಕುರೂದ್ವಹ ॥ ೧೮ ॥

ಕೃಷ್ಣವಿಕ್ರೀಡಿತಂ ವೀಕ್ಷ್ಯ ಮುಮುಹುಃ ಖೇಚರಸ್ತ್ರಿಯಃ ।
ಕಾಮಾರ್ದಿತಾಃ ಶಶಾಂಕಶ್ಚ ಸಗಣೋ ವಿಸ್ಮಿತೋಽಭವತ್ ॥ ೧೯ ॥

ಭಗವಾನ್ ಶ್ರೀಕೃಷ್ಣನು ತನ್ನ ಒಂದು ತೋಳನ್ನು ಒಬ್ಬ ಗೋಪಿಯ ಹೆಗಲಮೇಲಿಟ್ಟಿದ್ದನು. ಸ್ವಾಭಾವಿಕವಾಗಿಯೇ ಶ್ರೀಕೃಷ್ಣನ ತೋಳು ಕಮಲದ ಸುಗಂಧದಿಂದ ಕೂಡಿತ್ತು. ಅದಕ್ಕೆ ಪರಿಮಳದ ಗಂಧವು ಲೇಪಿತವಾಗಿತ್ತು. ಅದನ್ನು ಮೂಸಿ ನೋಡಿದ ಆ ಗೋಪಿಯು ರೋಮಾಂಚಿತಳಾಗಿ ಆ ತೋಳನ್ನು ಮುತ್ತಿಟ್ಟಳು. ॥ ೧೨ ॥ ಮತ್ತೊಬ್ಬ ಗೋಪಿಯು ನಾಟ್ಯವಾಡುತ್ತಿರುವಾಗ ಕುಂಡಲದಿಂದ ಸಮಲಂಕೃತವಾಗಿದ್ದ ತನ್ನ ಕಪೋಲವನ್ನು ಶ್ರೀಕೃಷ್ಣನ ಕಪೋಲದ ಮೇಲಿಡಲು ಆಕೆಯ ಆಶಯವನ್ನು ತಿಳಿದ ಶ್ರೀಕೃಷ್ಣನು ಆಕೆಗೆ ತಾಂಬೂಲವನ್ನು ನೀಡಿದನು. ॥ ೧೩ ॥ ಶ್ರೀಕೃಷ್ಣನ ಪಕ್ಕದಲ್ಲಿದ್ದ ಮತ್ತೊಬ್ಬ ಗೋಪಿಯು ಕಾಲಂದುಗೆ-ಡಾಬುಗಳ ಶಬ್ದದೊಡನೆ ನರ್ತಿಸುತ್ತಾ, ಹಾಡುತ್ತಾ ಬಹಳವಾಗಿ ಬಳಲಿ ಪಕ್ಕದಲ್ಲಿದ್ದ ಶ್ರೀಕೃಷ್ಣನ ಮಂಗಳಕರವಾದ ಕರಕಮಲವನ್ನು ತನ್ನ ವಕ್ಷಸ್ಥಳದ ಮೇಲೆ ಇರಿಸಿಕೊಂಡಳು. ॥ ೧೪ ॥

ಪರೀಕ್ಷಿತನೇ! ಗೋಪಿಯರ ಸೌಭಾಗ್ಯವು ಲಕ್ಷ್ಮೀದೇವಿಯ ಸೌಭಾಗ್ಯಕ್ಕಿಂತಲೂ ಮಿಗಿಲಾದುದು. ಲಕ್ಷ್ಮೀದೇವಿಗೆ ಪರಮಪ್ರಿಯನಾದ, ಏಕಾಂತಭಕ್ತರಿಗೆ ಪ್ರಿಯನಾದ ಶ್ರೀಕೃಷ್ಣನನ್ನು ತಮ್ಮ ಪ್ರಿಯತಮನನ್ನಾಗಿಸಿಕೊಂಡು, ಅವನಿಂದ ಆಲಿಂಗಿಸಲ್ಪಟ್ಟವರಾಗಿ, ಅವನ ಲೀಲಾ ಪ್ರಸಂಗಗಳನ್ನು ಸುಮಧುರವಾಗಿ ಗಾನಮಾಡುತ್ತಾ ಆ ಗೋಪಿಯರು ರಾರಾಜಿಸಿದರು. ॥ ೧೫ ॥ ಅವರ ಕಿವಿಗಳಲ್ಲಿ ಕಮಲದ ಕುಂಡಲಗಳು ಶೋಭಿಸುತ್ತಿದ್ದವು. ಗುಂಗುರು ಕೂದಲುಗಳು ಕೆನ್ನೆಗಳ ಮೇಲೆ ಹಾರಾಡುತ್ತಿದ್ದವು. ಮುತ್ತಿನಂತಹ ಬೆವರಿನ ಹನಿಗಳಿಂದ ಮುಖವು ಅಲಂಕೃತವಾಗಿತ್ತು. ಅವರು ರಾಸಮಂಡಲದಲ್ಲಿ ಶ್ರೀಕೃಷ್ಣನೊಡನೆ ನರ್ತನಮಾಡುವಾಗ ಅವರ ಕಡಗ, ಕಂಕಣಗಳು ಧ್ವನಿಮಾಡುತ್ತಿದ್ದವು. ಅವರ ಸ್ವರ-ತಾಳಕ್ಕೆ ಸರಿಯಾಗಿ ದುಂಬಿಗಳು ಝೇಂಕರಿಸುತ್ತಿದ್ದವು. ಅವರ ಮುಡಿಗಳಿಂದ ಹೂವುಗಳು ಉದುರುತ್ತಿದ್ದವು. ॥ ೧೬ ॥ ಪರೀಕ್ಷಿತನೇ! ಬಾಲಕನು ಕನ್ನಡಿಯಲ್ಲಿ ಕಾಣುವ ತನ್ನ ಪ್ರತಿಬಿಂಬದೊಡನೆ ನಿರ್ವಿಕಾರ ಭಾವದಿಂದ ಆಡುವಂತೆ ರಮಾರಮಣ ಭಗವಾನ್ ಶ್ರೀಕೃಷ್ಣನು ತನ್ನ ಪ್ರತಿಬಿಂಬರೂಪರಾದ ಗೋಪಿಯರೊಡನೆ ನಿರ್ವಿಕಾರಭಾವದಿಂದ ಆಲಿಂಗನ, ಹಸ್ತಸ್ಪರ್ಶ, ಪ್ರೇಮಾವಲೋಕನ, ಕಿರುನಗೆ, ಕುಡಿನೋಟ ಇತ್ಯಾದಿಗಳಿಂದ ಕ್ರೀಡಿಸುತ್ತಿದ್ದನು. ॥ ೧೭ ॥ ಪರೀಕ್ಷಿತ ರಾಜನೇ! ಭಗವಾನ್ ಶ್ರೀಕೃಷ್ಣನ ಅಂಗಸ್ಪರ್ಶವನ್ನು ಪಡೆದ ಗೋಪಿಕೆಯರು ಪ್ರೇಮಾನಂದದಿಂದ ವಿಹ್ವಲರಾಗಿದ್ದರು. ಕೂದಲು ಕೆದರಿದ್ದವು, ಹೂವಿನ ಹಾರಗಳು ಹರಿದಿದ್ದವು. ಒಡವೆಗಳು ಅಸ್ತ-ವ್ಯಸ್ತವಾಗಿದ್ದವು. ಇವುಗಳನ್ನು ಸರಿಪಡಿಸಿಕೊಳ್ಳಲೂ ಕೂಡ ಅವರಿಂದ ಸಾಧ್ಯವಾಗಲಿಲ್ಲ. ॥ ೧೮ ॥ ಭಗವಾನ್ ಶ್ರೀಕೃಷ್ಣನ ಈ ರಾಸಕ್ರೀಡೆಯನ್ನು ನೋಡಿದ ದೇವತಾಸ್ತ್ರೀಯರೂ ಈ ಗೋಪಿಯರಂತೆ ಭಗವಂತನಲ್ಲಿ ಸೇರಬೇಕೆಂಬ ಆಕಾಂಕ್ಷೆಯಿಂದ ಮೋಹಿತರಾದರು. ಹಾಗೆಯೇ ಗ್ರಹ-ನಕ್ಷತ್ರ ತಾರೆಗಳಿಂದ ಕೂಡಿದ ಚಂದ್ರನೂ ಅಚ್ಚರಿಗೊಂಡನು. ॥ ೧೯ ॥

ಕೃತ್ವಾ ತಾವಂತಮಾತ್ಮಾನಂ ಯಾವತೀರ್ಗೋಪಯೋಷಿತಃ ।
ರೇಮೇ ಸ ಭಗವಾಂಸ್ತಾಭಿರಾತ್ಮಾರಾಮೋಽಪಿ ಲೀಲಯಾ ॥ ೨೦ ॥

ತಾಸಾಮತಿವಿಹಾರೇಣ ಶ್ರಾಂತಾನಾಂ ವದನಾನಿ ಸಃ ।
ಪ್ರಾಮೃಜತ್ಕರುಣಃ ಪ್ರೇಮ್ಣಾ ಶಂತಮೇನಾಂಗಪಾಣಿನಾ ॥ ೨೧ ॥

ಗೋಪ್ಯಃ ಸ್ಫುರತ್ಪುರಟಕುಂಡಲಕುಂತಲತ್ವಿಡ್
ಗಂಡಶ್ರಿಯಾ ಸುಧಿತಹಾಸನಿರೀಕ್ಷಣೇನ ।
ಮಾನಂ ದಧತ್ಯ ಋಷಭಸ್ಯ ಜಗುಃ ಕೃತಾನಿ
ಪುಣ್ಯಾನಿ ತತ್ಕರರುಹಸ್ಪರ್ಶಪ್ರಮೋದಾಃ ॥ ೨೨ ॥

ತಾಭಿರ್ಯುತಃ ಶ್ರಮಮಪೋಹಿತುಮಂಗಸಂಗ-
ಘೃಷ್ಟಸ್ರಜಃ ಸ ಕುಚಕುಂಕುಮರಂಜಿತಾಯಾಃ ।
ಗಂಧರ್ವಪಾಲಿಭಿರನುದ್ರುತ ಆವಿಶದ್ವಾಃ
ಶ್ರಾಂತೋ ಗಜೀಭಿರಿಭರಾಡಿವ ಭಿನ್ನಸೇತುಃ ॥ ೨೩ ॥

ಸೋಽಂಭಸ್ಯಲಂ ಯುವತಿಭಿಃ ಪರಿಷಿಚ್ಯಮಾನಃ
ಪ್ರೇಮ್ಣೇಕ್ಷಿತಃ ಪ್ರಹಸತೀಭಿರಿತಸ್ತತೋಽಂಗ ।
ವೈಮಾನಿಕೈಃ ಕುಸುಮವರ್ಷಿಭಿರೀಡ್ಯಮಾನೋ
ರೇಮೇ ಸ್ವಯಂ ಸ್ವರತಿರತ್ರ ಗಜೇಂದ್ರಲೀಲಃ ॥ ೨೪ ॥

ತತಶ್ಚ ಕೃಷ್ಣೋಪವನೇ ಜಲಸ್ಥಲ-
ಪ್ರಸೂನಗಂಧಾನಿಲಜುಷ್ಟದಿಕ್ತಟೇ ।
ಚಚಾರ ಭೃಂಗ ಪ್ರಮದಾಗಣಾವೃತೋ
ಯಥಾ ಮದಚ್ಯುದ್ದ್ವಿರದಃ ಕರೇಣುಭಿಃ ॥ ೨೫ ॥

ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನು ಆತ್ಮಾರಾಮನಾಗಿದ್ದರೂ ಅಲ್ಲಿ ಎಷ್ಟು ಮಂದಿ ಗೋಪಿಯರಿದ್ದರೋ ಅಷ್ಟೆ ಸಂಖ್ಯೆಯಲ್ಲಿ ತನ್ನ ಪ್ರತಿರೂಪಗಳನ್ನು ಸೃಷ್ಟಿಸಿ ಪ್ರತಿಯೊಬ್ಬಳೊಡನೆಯೂ ಲೀಲಾ ವಿನೋದದಿಂದ ವಿಹರಿಸಿದನು. ॥ ೨೦ ॥ ಬಹಳ ಹೊತ್ತಿನವರೆಗೆ ನೃತ್ಯ-ಗಾನ-ವಿಹಾರದಿಂದ ಬಳಲಿದ ಗೋಪಿಯರ ಮುಖ ಕಮಲಗಳನ್ನು ಕರುಣಾಮಯನಾದ ಭಗವಾನ್ ಶ್ರೀಕೃಷ್ಣನು ಅತ್ಯಂತ ಪ್ರೀತಿಯಿಂದ ತನ್ನ ಸುಖಕರ ಕರಕಮಲದಿಂದ ನೇವರಿಸಿದನು. ॥ ೨೧ ॥ ಪರೀಕ್ಷಿತನೇ ! ಭಗವಂತನ ಕರಸ್ಪರ್ಶದಿಂದ ಗೋಪಿಕೆಯರಿಗೆ ಪರಮಾನಂದವಾಯಿತು. ಅವರು ಸ್ವರ್ಣ ಕುಂಡಲಗಳಿಂದಲೂ, ಮುಂಗುರುಳುಗಳಿಂದಲೂ ಕೂಡಿದ ಕಪೋಲಗಳಿಂದಲೂ, ಮುಖಾರವಿಂದದಿಂದಲೂ ಕಡೆಗಣ್ಣ ನೋಟದಿಂದಲೂ, ಅಮೃತಪ್ರಾಯವಾದ ಮಂದಹಾಸದಿಂದಲೂ ಭಗವಾನ್ ಶ್ರೀಕೃಷ್ಣನಿಗೆ ಸೇವೆ ಸಲ್ಲಿಸಿ ಪರಮ ಪವಿತ್ರವಾದ ಅವನ ಲೀಲಾಪ್ರಸಂಗಗಳನ್ನು ಹಾಡತೊಡಗಿದರು. ॥ ೨೨ ॥ ಅನಂತರ ಆಯಾಸಗೊಂಡಿರುವ ಸಲಗವು ಹೆಣ್ಣಾನೆಗಳೊಡನೆ ಆಣೆಕಟ್ಟನ್ನು ಭೇದಿಸಿಕೊಂಡು ನೀರಿನೊಳಗೆ ನುಗ್ಗುವಂತೆ ಶ್ರೀಕೃಷ್ಣನು ರಾಸ ಕ್ರೀಡೆಯ ಆಯಾಸವನ್ನು ಪರಿಹರಿಸಿಕೊಳ್ಳುವ ಸಲುವಾಗಿ ಗೋಪಿಯರೊಡನೆ ಜಲಕ್ರೀಡೆಯಾಡಲು ಯಮುನೆಯ ನೀರನ್ನು ಪ್ರವೇಶಿದನು. ಆಗ ಶ್ರೀಕೃಷ್ಣನು ಧರಿಸಿದ್ದ ವನಮಾಲೆಯು ಗೋಪಿಯರ ಅಂಗಸಂಗದಿಂದ ಬಾಡಿಹೋಗಿದ್ದರೂ ಅವರ ವಕ್ಷಸ್ಥಳದಲ್ಲಿ ಲೇಪಿತವಾಗಿದ್ದ ಕುಂಕುಮ ಕೇಸರಿಯಿಂದ ರಂಜಿತವಾಗಿತ್ತು. ವನಮಾಲೆಯ ಸುಗಂಧದಿಂದ ಆಕರ್ಷಿತವಾದ ದುಂಬಿಗಳು ಝೇಂಕರಿಸುತ್ತಾ ಶ್ರೀಕೃಷ್ಣನನ್ನು ಅನುಸರಿಸಿ ಹೋಗುವುದನ್ನು ನೋಡಿದರೆ ಗಂಧರ್ವರಾಜನೇನಾದರೂ ಶ್ರೀಕೃಷ್ಣನ ಗುಣಗಾನ ಮಾಡುತ್ತಾ ಅವನ ಹಿಂದೆಯೇ ಹೋಗುತ್ತಿರುವನೋ ಎಂಬಂತೆ ಇತ್ತು. ॥ ೨೩ ॥ ಪರೀಕ್ಷಿತನೇ ! ಯಮುನಾನದಿಯ ಶುಭಜಲದಲ್ಲಿ ಜಲಕ್ರೀಡೆಯನ್ನಾಡುವಾಗ ಗೋಪಿಯರು ಪ್ರೇಮಪೂರ್ಣ ನೋಟದಿಂದ ಶ್ರೀಕೃಷ್ಣನನ್ನು ನೋಡುತ್ತಾ, ನಗು-ನಗುತ್ತಾ ಅವನ ಮೇಲೆ ನೀರನ್ನೆರಚುತ್ತಿದ್ದರು. ಪ್ರತಿಯಾಗಿ ಅವನೂ ನೀರನ್ನೆರಚುತ್ತಿದ್ದನು. ಹೀಗೆ ಆನಂದಪರವಶರಾಗಿ ಜಲಕ್ರೀಡೆಯಾಡುವುದನ್ನು ನೋಡಿದ ದೇವತೆಗಳು ಅವರ ಮೇಲೆ ಪುಷ್ಪವೃಷ್ಟಿ ಮಾಡುತ್ತಾ ಕೃಷ್ಣನನ್ನು ಪರಿ-ಪರಿಯಾಗಿ ಸ್ತುತಿಸಿದರು. ಹೀಗೆ ಸಾಕ್ಷಾತ್ ಆತ್ಮಾರಾಮನಾದ ಶ್ರೀಕೃಷ್ಣನು ಗಜರಾಜನಂತೆ ಯಮುನೆಯಲ್ಲಿ ನೀರಾಟವನ್ನು ಆಡಿದನು. ॥ ೨೪ ॥ ಇದಾದ ಬಳಿಕ ಶ್ರೀಕೃಷ್ಣನು ಗೋಪಿಯರೊಡನೆ ಯಮುನೆಯ ತೀರದ ಉಪವನಕ್ಕೆ ಹೋದನು. ಆ ಉಪವನವು ರಮಣೀಯವಾಗಿದ್ದು ಎಲ್ಲೆಡೆಗಳಲ್ಲಿಯೂ ನೆಲ ಜಲಗಳಲ್ಲಿ ಅತ್ಯಂತ ಸುಂದರ-ಸುಗಂಧಿತ ಹೂವುಗಳು ಅರಳಿದ್ದವು. ಅದರ ಸುಗಂಧವನ್ನು ಹೊತ್ತುಕೊಂಡು ಮಂದ ಮಾರುತವು ಬೀಸುತ್ತಿತ್ತು. ಮತ್ತ ಗಜವು ಹೆಣ್ಣಾನೆಗಳೊಂದಿಗೆ ವಿಹರಿಸುವಂತೆ ಶ್ರೀಕೃಷ್ಣನು ದುಂಬಿಗಳಿಂದಲೂ ಪ್ರಮದೆ ಯರಿಂದಲೂ ಸಮಾವೃತನಾಗಿ ಆ ಉದ್ಯಾನದಲ್ಲಿ ವಿಹರಿಸುತ್ತಿದ್ದನು. ॥ ೨೫ ॥

ಏವಂ ಶಶಾಂಕಾಂಶುವಿರಾಜಿತಾ ನಿಶಾಃ
ಸ ಸತ್ಯಕಾಮೋಽನುರತಾ ಬಲಾಗಣಃ ।
ಸಿಷೇವ ಆತ್ಮನ್ಯವರುದ್ಧಸೌರತಃ
ಸರ್ವಾಃ ಶರತ್ಕಾವ್ಯಕಥಾರಸಾಶ್ರಯಾಃ ॥ ೨೬ ॥

ಪರೀಕ್ಷಿದ್ರಾಜನೇ! ಅನೇಕ ಶರದ್ರಾತ್ರಿಗಳು ಕೂಡಿಕೊಂಡಿ ವೆಯೋ ಎಂಬಂತೆ ಆ ರಾತ್ರಿಯು ಅತ್ಯಂತ ಶೋಭಾಯಮಾನ ವಾಗಿತ್ತು. ಎಲ್ಲೆಡೆಗಳಲ್ಲಿಯೂ ಚಂದ್ರನ ಬೆಳದಿಂಗಳು ಹಾಲು ಚೆಲ್ಲಿದಂತೆ ಪ್ರಕಾಶಮಾನವಾಗಿತ್ತು. ಕಾವ್ಯಗಳಲ್ಲಿ ಶರದೃತುವಿನ ಎಷ್ಟು ಬಗೆಯಾದ ವರ್ಣನೆ ಇದೆಯೋ ಆ ಎಲ್ಲ ಲಕ್ಷಣಗಳಿಂದ ಅದು ಕೂಡಿಕೊಂಡಿತ್ತು. ಅಂತಹ ಮಂಗಳಮಯ ರಾತ್ರಿಯಲ್ಲಿ ಭಗವಾನ್ ಶ್ರೀಕೃಷ್ಣನು ತನ್ನ ಪ್ರೇಯಸಿಯರಾದ ಗೋಪಿಕೆ ಯರೊಡನೆ ಯಮುನೆಯ ಮಳಲದಿಣ್ಣೆಯಲ್ಲಿ, ಯಮುನೆಯಲ್ಲಿ ಹಾಗೂ ತೀರದ ಉಪವನಗಳಲ್ಲಿಯೂ ಯಥೇಚ್ಛವಾಗಿ ವಿಹರಿಸಿ ದನು. ಸತ್ಯಸಂಕಲ್ಪನಾದ ಭಗವಾನ್ ಶ್ರೀಕೃಷ್ಣನು ತೋರಿದ ಈ ಲೀಲೆಯು ಚಿನ್ಮಯವಾದುದು. ॥ ೨೬ ॥

ರಾಜೋವಾಚ

ಸಂಸ್ಥಾಪನಾಯ ಧರ್ಮಸ್ಯ ಪ್ರಶಮಾಯೇತರಸ್ಯ ಚ ।
ಅವತೀರ್ಣೋ ಹಿ ಭಗವಾನಂಶೇನ ಜಗದೀಶ್ವರಃ ॥ ೨೭ ॥

**ಪರೀಕ್ಷಿದ್ರಾಜನು ಕೇಳಿದನು** – ಪೂಜ್ಯರೇ! ಭಗವಾನ್ ಶ್ರೀಕೃಷ್ಣನು ಸಮಸ್ತ ಜಗತ್ತಿಗೆ ಏಕಮಾತ್ರ ಸ್ವಾಮಿಯು. ಅವನು ತನ್ನ ಅಂಶನಾದ ಬಲರಾಮನೊಂದಿಗೆ ಪೂರ್ಣರೂಪದಿಂದ ಅವತರಿಸಿ ದ್ದನು. ಅವನ ಅವತಾರದ ಉದ್ದೇಶವು ಧರ್ಮದ ಸ್ಥಾಪನೆ ಮತ್ತು ಅಧರ್ಮದನಾಶಕ್ಕಾಗಿಯೇ ಆಗಿತ್ತು. ॥ ೨೭ ॥ ಬ್ರಾಹ್ಮಣೋ ತ್ತಮರೇ! ಅವನು ಧರ್ಮದ ಮರ್ಯಾದೆಯನ್ನು ಉಪದೇಶಿಸು ವವನೂ, ರಕ್ಷಿಸುವವನೂ, ಪಾಲಿಸುವವನೂ ಆಗಿದ್ದನು. ಹಾಗಿರು ವಾಗ ಅವನು ಧರ್ಮಕ್ಕೆ ವಿರೋಧವಾದ ಪರಸ್ತ್ರೀಯರನ್ನು ಹೇಗೆ ಸ್ಪರ್ಶಿಸಿದನು? ॥ ೨೮ ॥ ಭಗವಾನ್ ಶ್ರೀಕೃಷ್ಣನು ಪೂರ್ಣಕಾಮ ನಾಗಿದ್ದು ಅವನಿಗೆ ಯಾವುದೇ ವಸ್ತುವಿನ ಕಾಮನೆ ಇರಲಿಲ್ಲ ವೆಂಬುದು ನಾನು ಬಲ್ಲೆನು. ಹೀಗಿರುವಾಗಲೂ ಅವನು ಯಾವ ಅಭಿಪ್ರಾಯದಿಂದ ಈ ನಿಂದನೀಯವಾದ ಕಾರ್ಯವನ್ನು ಮಾಡಿ ದನು? ಸುವ್ರತರೇ! ಈ ನನ್ನ ಸಂದೇಹವನ್ನು ದಯಮಾಡಿ ಪರಿಹರಿಸಿರಿ. ॥ ೨೯ ॥

ಸ ಕಥಂ ಧರ್ಮಸೇತೂನಾಂ ವಕ್ತಾ ಕರ್ತಾಭಿರಕ್ಷಿತಾ ।
ಪ್ರತೀಪಮಾಚರದ್ಬ್ರಹ್ಮನ್ಪರದಾರಾಭಿಮರ್ಶನಮ್ ॥ ೨೮ ॥

ಆಪ್ತಕಾಮೋ ಯದುಪತಿಃ ಕೃತವಾನ್ ವೈ ಜುಗುಪ್ಸಿತಮ್ ।
ಕಿಮಭಿಪ್ರಾಯ ಏತಂ ನಃ ಸಂಶಯಂ ಛಿಂದಿ ಸುವ್ರತ ॥ ೨೯ ॥

ಶ್ರೀಶುಕ ಉವಾಚ

ಧರ್ಮವ್ಯತಿಕ್ರಮೋ ದೃಷ್ಟ ಈಶ್ವರಾಣಾಂ ಚ ಸಾಹಸಮ್ ।
ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ ॥ ೩೦ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಸೂರ್ಯ, ಅಗ್ನಿ ಮೊದಲಾದ ಮಹಾಪ್ರಭಾವವುಳ್ಳವರು ಕೆಲವೊಮ್ಮೆ ಧರ್ಮದ ಉಲ್ಲಂಘನೆ ಮತ್ತು ಸಾಹಸದ ಕಾರ್ಯವನ್ನು ಮಾಡುವುದನ್ನು ನೋಡುತ್ತೇವೆ. ಆದರೆ ಆ ಕರ್ಮಗಳಿಂದ ಅಂತಹ ತೇಜಸ್ವಿ ಪುರುಷರಿಗೆ ಯಾವುದೇ ದೋಷವೂ ಉಂಟಾಗುವುದಿಲ್ಲ. ಅಗ್ನಿಯು ಸರ್ವಭಕ್ಷಕನಾಗಿದ್ದರೂ ಆ ಪದಾರ್ಥಗಳ ದೋಷ ಗಳಿಂದ ಲಿಪ್ತನಾಗುವುದಿಲ್ಲ. ॥ ೩೦ ॥ ಇಂತಹ ಸಾಮರ್ಥ್ಯ ವಿಲ್ಲದವರು ಅಂತಹ ಧರ್ಮೋಲ್ಲಂಘನೆಯ ಮಾತನ್ನು ಮನಸ್ಸಿ ನಲ್ಲಿಯೂ ಯೋಚಿಸಬಾರದು; ಶರೀರದಿಂದ ಮಾಡುವುದು ದೂರವುಳಿಯಿತು. ಮೂರ್ಖತೆಯಿಂದ ಹಾಗೇನಾದರೂ ಮಾಡಿ ಬಿಟ್ಟರೆ ಅವರ ನಾಶವು ನಿಶ್ಚಯವು. ಭಗವಾನ್ ಶಂಕರನು ಹಾಲಾ ಹಲವನ್ನು ಕುಡಿದಿದ್ದನು. ಎಂದು ಬೇರೆಯಾರಾದರೂ ಕುಡಿದರೆ ಸುಟ್ಟು ಭಸ್ಮರಾಗಿ ಹೋದಾರು. ॥ ೩೧ ॥

ನೈತತ್ಸಮಾಚರೇಜ್ಜಾತು ಮನಸಾಪಿ ಹ್ಯನೀಶ್ವರಃ ।
ವಿನಶ್ಯತ್ಯಾಚರನ್ಮೌಢ್ಯಾದ್ಯಥಾರುದ್ರೋಽಬ್ಧಿಜಂ ವಿಷಮ್ ॥ ೩೧ ॥

ಈಶ್ವರಾಣಾಂ ವಚಃ ಸತ್ಯಂ ತಥೈವಾಚರಿತಂ ಕ್ವಚಿತ್ ।
ತೇಷಾಂ ಯತ್ಸ್ವವಚೋಯುಕ್ತಂ ಬುದ್ಧಿಮಾಂಸ್ತತ್ಸಮಾಚರೇತ್ ॥ ೩೨ ॥

ಕುಶಲಾಚರಿತೇನೈಷಾಮಿಹ ಸ್ವಾರ್ಥೋ ನ ವಿದ್ಯತೇ ।
ವಿಪರ್ಯಯೇಣ ವಾನರ್ಥೋ ನಿರಹಂಕಾರಿಣಾಂ ಪ್ರಭೋ ॥ ೩೩ ॥

ಕಿಮುತಾಖಿಲಸತ್ತ್ವಾನಾಂ ತಿರ್ಯಙ್ಮರ್ತ್ಯದಿವೌಕಸಾಮ್ ।
ಈಶಿತುಶ್ಚೇಶಿತವ್ಯಾನಾಂ ಕುಶಲಾಕುಶಲಾನ್ವಯಃ ॥ ೩೪ ॥

ಯತ್ಪಾದಪಂಕಜಪರಾಗನಿಷೇವತೃಪ್ತಾ
ಯೋಗಪ್ರಭಾವವಿಧುತಾಖಿಲಕರ್ಮಬಂಧಾಃ ।
ಸ್ವೈರಂ ಚರಂತಿ ಮುನಯೋಽಪಿ ನ ನಹ್ಯಮಾನಾ-
ಸ್ತಸ್ಯೇಚ್ಛಯಾಽಽತ್ತವಪುಷಃ ಕುತ ಏವ ಬಂಧಃ ॥ ೩೫ ॥

ಗೋಪೀನಾಂ ತತ್ಪತೀನಾಂ ಚ ಸರ್ವೇಷಾಮೇವ ದೇಹಿನಾಮ್ ।
ಯೋಽಂತಶ್ಚರತಿ ಸೋಽಧ್ಯಕ್ಷಃ ಕ್ರೀಡನೇನೇಹ ದೇಹಭಾಕ್ ॥ ೩೬ ॥

ಅನುಗ್ರಹಾಯ ಭೂತಾನಾಂ ಮಾನುಷಂ ದೇಹಮಾಸ್ಥಿತಃ ।
ಭಜತೇ ತಾದೃಶೀಃ ಕ್ರೀಡಾ ಯಾಃ ಶ್ರುತ್ವಾ ತತ್ಪರೋ ಭವೇತ್ ॥ ೩೭ ॥

ನಾಸೂಯನ್ಖಲು ಕೃಷ್ಣಾಯ ಮೋಹಿತಾಸ್ತಸ್ಯ ಮಾಯಯಾ ।
ಮನ್ಯಮಾನಾಃ ಸ್ವಪಾರ್ಶ್ವಸ್ಥಾನ್ ಸ್ವಾನ್ ಸ್ವಾನ್ ದಾರಾನ್ ವ್ರಜೌಕಸಃ ॥ ೩೮ ॥

ಬ್ರಹ್ಮರಾತ್ರ ಉಪಾವೃತ್ತೇ ವಾಸುದೇವಾನುಮೋದಿತಾಃ ।
ಅನಿಚ್ಛಂತ್ಯೋ ಯಯುರ್ಗೋಪ್ಯಃ ಸ್ವಗೃಹಾನ್ ಭಗವತ್ಪ್ರಿಯಾಃ ॥ ೩೯ ॥

ಅದಕ್ಕಾಗಿ ಶಂಕರರಂತಹ ಜಗದೀಶ್ವರರ ವಚನಗಳನ್ನು ಸತ್ಯವೆಂದು ತಿಳಿದು ಅದಕ್ಕನುಸಾರವಾಗಿ ಆಚರಿಸಬೇಕು. ಅವರ ಆಚರಣೆಗಳ ಅನುಕರಣೆಗಳನ್ನು ಕೆಲವೊಮ್ಮೆ ಮಾತ್ರ ಮಾಡಲಾಗುತ್ತದೆ. ಆದುದರಿಂದ ಬುದ್ಧಿವಂತರಾದವರು ಅವರ ಆಚರಣೆಯು ಅವರ ಉಪದೇಶಕ್ಕನುಕೂಲವಾಗಿದ್ದರೆ ಅದನ್ನು ಜೀವನದಲ್ಲಿ ಅನುಷ್ಠಾನಕ್ಕೆ ತರಬೇಕು. ॥ ೩೨ ॥

ಪರೀಕ್ಷಿತನೇ! ಅಂತಹ ಸರ್ವಸಮರ್ಥ ಪುರುಷರು ಅಹಂಕಾರರಹಿತರಾಗಿರುತ್ತಾರೆ. ಶುಭಕರ್ಮಮಾಡುವುದರಲ್ಲಿ ಅವರಿಗೆ ಯಾವುದೇ ಪ್ರಾಪಂಚಿಕ ಸ್ವಾರ್ಥ ಇರುವುದಿಲ್ಲ ಹಾಗೂ ಅಶುಭಕರ್ಮಮಾಡುವುದರಲ್ಲಿ ಅನರ್ಥವುಂಟಾಗುವುದಿಲ್ಲ. ಅವರು ಸ್ವಾರ್ಥ ಮತ್ತು ಅನರ್ಥಗಳನ್ನು ಮೀರಿ ಇರುತ್ತಾರೆ. ॥ ೩೩ ॥ ಇಂತಹವರ ಸಂಬಂಧದಲ್ಲೇ ಹೀಗಿದ್ದರೆ ಪಶು, ಪಕ್ಷಿ, ಮನುಷ್ಯರು, ದೇವತೆಗಳು ಮುಂತಾದ ಸಮಸ್ತ ಚರಾಚರ ಜೀವರ ಏಕಮಾತ್ರ ಸ್ವಾಮಿಯಾದ ಸರ್ವೇಶ್ವರ ಭಗವಂತನ ವಿಷಯದಲ್ಲಿ ಮಾನವೀಯ ಶುಭ-ಅಶುಭಗಳ ಸಂಬಂಧವನ್ನು ಹೇಗೆ ಜೋಡಿಸಲಾಗುತ್ತದೆ? ॥ ೩೪ ॥ ಭಕ್ತ ಜನರು ಪರಮಾತ್ಮನ ಪಾದಪಂಕಜಗಳ ಧೂಳಿನ ಸೇವನೆಯಿಂದ ತೃಪ್ತರಾಗುತ್ತಾರೆ. ಯೋಗಿಗಳು ಅವನನ್ನೇ ಧ್ಯಾನಿಸುತ್ತಾ ಯೋಗದ ಪ್ರಭಾವದಿಂದ ಸಮಸ್ತವಾದ ಕರ್ಮಬಂಧನಗಳಿಂದಲೂ ಮುಕ್ತರಾಗುತ್ತಾರೆ. ಜ್ಞಾನಿಗಳಾದ ಮುನಿಗಳೂ ಕೂಡ ಪರಬ್ರಹ್ಮತತ್ತ್ವವನ್ನೇ ವಿಚಾರಮಾಡುತ್ತಾ ತಾದಾತ್ಮ್ಯವನ್ನು ಹೊಂದಿ ಸಮಸ್ತ ಕರ್ಮ ಬಂಧನಗಳಿಂದಲೂ ಮುಕ್ತರಾಗಿ ಸ್ವೇಚ್ಛೆಯಿಂದ ಸಂಚರಿಸುತ್ತಾರೆ. ಅಂತಹ ಭಗವಂತನೇ ತನ್ನ ಭಕ್ತರ ಇಚ್ಛೆಯಿಂದ ತನ್ನ ಚಿನ್ಮಯ ಶ್ರೀವಿಗ್ರಹವನ್ನು ಪ್ರಕಟಿಸುವನು. ಅಂತಹ ಪರಬ್ರಹ್ಮ ಪರಮಾತ್ಮನಿಗೆ ಕರ್ಮಬಂಧನದ ಕಲ್ಪನೆಯಾದರೂ ಹೇಗಿದ್ದೀತು? ॥ ೩೫ ॥ ಗೋಪಿಯರ ಗಂಡಂದಿರಲ್ಲಿ ಮತ್ತು ಸಮಸ್ತ ಶರೀರಧಾರಿಗಳಲ್ಲಿಯೂ ಅಂತರ್ಯಾಮಿಯಾಗಿರುವ ಪರಮಾತ್ಮನೇ ಸರ್ವ ಸಾಕ್ಷಿಯೂ, ಪರಮಪತಿಯೂ ಆಗಿದ್ದಾನೆ. ಅವನೇ ಶ್ರೀಕೃಷ್ಣನ ರೂಪದಲ್ಲಿ ದಿವ್ಯ ಮಂಗಳರೂಪವನ್ನು ಧರಿಸಿ ತನ್ನ ದಿವ್ಯವಾದ ಲೀಲೆಗಳನ್ನು ತೋರಿಸುತ್ತಿದ್ದಾನೆ. ॥ ೩೬ ॥ ಭಗವಂತನು ಜೀವರ ಮೇಲೆ ಕೃಪೆದೋರಲೆಂದೇ ತಾನು ಮನುಷ್ಯರೂಪದಿಂದ ಪ್ರಕಟನಾಗಿ ಇಂತಹ ಲೀಲೆಗಳನ್ನು ನಡೆಸುತ್ತಾನೆ. ಇವುಗಳನ್ನು ಶ್ರವಣಿಸಿ ಮನುಷ್ಯನು ಭಗವತ್ಪರಾಯಣನಾಗಲೆಂದೇ ಲೀಲೆಗಳನ್ನು ತೋರುವನು. ॥ ೩೭ ॥ ವ್ರಜವಾಸಿಗಳಾದ ಗೋಪರು ಭಗವಾನ್ ಶ್ರೀಕೃಷ್ಣನಲ್ಲಿ ಸ್ವಲ್ಪವೂ ದೋಷಬುದ್ಧಿ ತಳೆದಿರಲಿಲ್ಲ. ಅವರೆಲ್ಲರೂ ಅವನ ಯೋಗಮಾಯೆಯಿಂದ ಮೋಹಿತರಾಗಿ ತಮ್ಮ ಪತ್ನಿಯರು ತಮ್ಮ ಬಳಿಯಲ್ಲೇ ಇದ್ದರೆಂದು ಭಾವಿಸಿಕೊಂಡಿದ್ದರು. ॥ ೩೮ ॥ ಹೀಗೆ ರಾಸಕ್ರೀಡೆ ಜಲಕ್ರೀಡೆಗಳಿಂದ ರಾತ್ರಿಯೆಲ್ಲವೂ ಕಳೆದು ಬ್ರಾಹ್ಮಮುಹೂರ್ತವು ಉದಯಿಸಿತು. ಗೋಪಿಯರಿಗೆ ತಮ್ಮ ಮನೆಗೆ ಮರಳಲು ಇಚ್ಛೆ ಇಲ್ಲದಿದ್ದರೂ ಭಗವಾನ್ ಶ್ರೀಕೃಷ್ಣನ ಆಜ್ಞೆಯಿಂದ ಅವರು ತಮ್ಮ ತಮ್ಮ ಮನೆಗಳಿಗೆ ತೆರಳಿದರು. ಏಕೆಂದರೆ, ತಮ್ಮ ಪ್ರತಿಯೊಂದು ವರ್ತನೆಯಿಂದ ಸಂಕಲ್ಪದಿಂದ ಕೇವಲ ಭಗವಂತನನ್ನು ಸಂತೋಷಪಡಿಸುವುದನ್ನೇ ಬಯಸುತ್ತಿದ್ದರು. ॥ ೩೯ ॥

ವಿಕ್ರೀಡಿತಂ ವ್ರಜವಧೂಭಿರಿದಂ ಚ ವಿಷ್ಣೋಃ
ಶ್ರದ್ಧಾನ್ವಿತೋಽನುಶೃಣುಯಾದಥ ವರ್ಣಯೇದ್ಯಃ ।
ಭಕ್ತಿಂ ಪರಾಂ ಭಗವತಿ ಪ್ರತಿಲಭ್ಯ ಕಾಮಂ
ಹೃದ್ರೋಗಮಾಶ್ವಪಹಿನೋತ್ಯಚಿರೇಣ ಧೀರಃ ॥ ೪೦ ॥

ಪರೀಕ್ಷಿತನೇ! ಯಾವ ಧೀರರು ವ್ರಜಯುವತಿಯರೊಂದಿಗೆ ಭಗವಾನ್ ಶ್ರೀಕೃಷ್ಣನು ನಡೆಸಿದ ಈ ಚಿನ್ಮಯ ರಾಸ-ವಿಲಾಸವನ್ನು ಶ್ರದ್ಧೆಯಿಂದ ಪದೇ-ಪದೇ ಕೇಳುವನೋ, ಕೀರ್ತಿಸುವನೋ ಅವರಿಗೆ ಭಗವಂತನ ಚರಣಗಳಲ್ಲಿ ಪರಾಭಕ್ತಿಯು ಉಂಟಾಗಿ, ಅವರು ಅತ್ಯಂತ ಶೀಘ್ರವಾಗಿ ತಮ್ಮ ಹೃದಯದ ರೋಗದಿಂದ, ಕಾಮವಿಕಾರದಿಂದ ಬಿಡುಗಡೆ ಹೊಂದುವರು. ॥ ೪೦ ॥

ಮೂವತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೩೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ರಾಸಕ್ರೀಡಾವರ್ಣನಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ ॥ ೩೩ ॥

# ಮೂವತ್ತನಾಲ್ಕನೆಯ ಅಧ್ಯಾಯ

## ಸುದರ್ಶನ ಮತ್ತು ಶಂಖಚೂಡರ ಉದ್ಧಾರ

*ಶ್ರೀಶುಕ ಉವಾಚ*

ಏಕದಾ ದೇವಯಾತ್ರಾಯಾಂ ಗೋಪಾಲಾ ಜಾತಕೌತುಕಾಃ ।
ಅನೋಭಿರನಡುದ್ಯುಕ್ತೈಃ ಪ್ರಯಯುಸ್ತೇಽಂಬಿಕಾವನಮ್ ॥ ೧ ॥

ತತ್ರ ಸ್ನಾತ್ವಾ ಸರಸ್ವತ್ಯಾಂ ದೇವಂ ಪಶುಪತಿಂ ವಿಭುಮ್ ।
ಆನರ್ಚುರರ್ಹಣೈರ್ಭಕ್ತ್ಯಾ ದೇವೀಂ ಚ ನೃಪತೇಽಂಬಿಕಾಮ್ ॥ ೨ ॥

ಗಾವೋ ಹಿರಣ್ಯಂ ವಾಸಾಂಸಿ ಮಧು ಮಧ್ವನ್ನಮಾದೃತಾಃ ।
ಬ್ರಾಹ್ಮಣೇಭ್ಯೋ ದದುಃ ಸರ್ವೇ ದೇವೋ ನಃ ಪ್ರೀಯತಾಮಿತಿ ॥ ೩ ॥

ಊಷುಃ ಸರಸ್ವತೀತೀರೇ ಜಲಂ ಪ್ರಾಶ್ಯ ಧೃತವ್ರತಾಃ ।
ರಜನೀಂ ತಾಂ ಮಹಾಭಾಗಾ ನಂದಸುನಂದಕಾದಯಃ ॥ ೪ ॥

ಕಶ್ಚಿನ್ಮಹಾನಹಿಸ್ತಸ್ಮಿನ್ ವಿಪಿನೇಽತಿಬುಭುಕ್ಷಿತಃ ।
ಯದೃಚ್ಛಯಾಽಽಗತೋ ನಂದಂ ಶಯಾನಮುರಗೋಽಗ್ರಸೀತ್ ॥ ೫ ॥

ಸ ಚುಕ್ರೋಶಾಹಿನಾ ಗ್ರಸ್ತಃ ಕೃಷ್ಣ ಕೃಷ್ಣ ಮಹಾನಯಮ್ ।
ಸರ್ಪೋ ಮಾಂ ಗ್ರಸತೇ ತಾತ ಪ್ರಪನ್ನಂ ಪರಿಮೋಚಯ ॥ ೬ ॥

ತಸ್ಯ ಚಾಕ್ರಂದಿತಂ ಶ್ರುತ್ವಾ ಗೋಪಾಲಾಃ ಸಹಸೋತ್ಥಿತಾಃ ।
ಗ್ರಸ್ತಂ ಚ ದೃಷ್ಟ್ವಾ ವಿಭ್ರಾಂತಾಃ ಸರ್ಪಂ ವಿವ್ಯಧುರುಲ್ಮುಕೈಃ ॥ ೭ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ - ಪರೀಕ್ಷಿತನೇ! ಒಮ್ಮೆ ನಂದಗೋಪನೇ ಮೊದಲಾದ ಗೋಪಾಲಕರು ಶಿವರಾತ್ರಿಯ ಸಮಯದಲ್ಲಿ ಅತ್ಯುತ್ಸಾಹದಿಂದ, ಆನಂದಭರಿತರಾಗಿ ಎತ್ತಿನ ಗಾಡಿಗಳಲ್ಲಿ ಕುಳಿತು ಅಂಬಿಕಾವನಕ್ಕೆ ಯಾತ್ರೆಗೆ ಹೋದರು. ॥ ೧ ॥ ರಾಜನೇ! ಅಲ್ಲಿ ಅವರೆಲ್ಲರೂ ಸರಸ್ವತೀ ನದಿಯಲ್ಲಿ ಸ್ನಾನ ಮಾಡಿ ಪಶುಪತಿಯಾದ ಪರಮೇಶ್ವರನನ್ನೂ, ಭಗವತಿ ಅಂಬಿಕೆಯನ್ನು ಅನೇಕ ಪೂಜಾಸಾಮಗ್ರಿಗಳಿಂದ ಭಕ್ತಿಪೂರ್ವಕವಾಗಿ ಪೂಜಿಸಿದರು. ॥ ೨ ॥ ದೇವಾಧಿದೇವ ಭಗವಾನ್ ಶಂಕರನು ನಮ್ಮ ಮೇಲೆ ಸುಪ್ರೀತನಾಗಲೆಂದು ಅವರು ಬ್ರಾಹ್ಮಣರಿಗೆ ಗೋವುಗಳನ್ನು, ವಸ್ತ್ರಗಳನ್ನು, ಸುವರ್ಣವನ್ನು, ಜೇನು ತುಪ್ಪವನ್ನು ಆದರದಿಂದ ದಾನವಾಗಿ ಕೊಟ್ಟು ಮೃಷ್ಟಾನ್ನವನ್ನು ಭೋಜನ ಮಾಡಿಸಿದರು. ॥ ೩ ॥ ಅಂದು ಮಹಾಭಾಗ್ಯಶಾಲಿಗಳಾದ ನಂದ-ಸುನಂದರೇ ಮೊದಲಾದ ಗೋಪರು ಉಪವಾಸ ವ್ರತವನ್ನು ಕೈಗೊಂಡು ಕೇವಲ ಜಲಾಹಾರದಲ್ಲೇ ಇದ್ದು ಆ ರಾತ್ರಿಯಲ್ಲಿ ಸರಸ್ವತೀನದಿಯ ತೀರದಲ್ಲಿ ನಿಶ್ಚಿಂತರಾಗಿ ಮಲಗಿದರು. ॥ ೪ ॥

ಆ ಅಂಬಿಕಾವನದಲ್ಲಿ ದೊಡ್ಡದಾದೊಂದು ಹೆಬ್ಬಾವಿದ್ದಿತು. ಆ ಸಮಯದಲ್ಲಿ ಅದು ಬಹಳವಾಗಿ ಹಸಿದಿತ್ತು. ಸ್ವೇಚ್ಛೆಯಿಂದ ಸಂಚರಿಸುತ್ತಿದ್ದ ಆ ಸರ್ಪವು ಮಲಗಿದ್ದ ನಂದಗೋಪನನ್ನು ನುಂಗತೊಡಗಿತು. ॥ ೫ ॥ ಅಜಗರನಿಂದ ನುಂಗಲ್ಪಡುತ್ತಿರುವ ನಂದಗೋಪನು 'ಮಗು! -ಕೃಷ್ಣಾ! ಕೃಷ್ಣಾ! ಬೇಗ ಓಡಿ ಬಾ. ನೋಡು, ಈ ಹೆಬ್ಬಾವು ನನ್ನನ್ನು ನುಂಗುತ್ತಿದೆ. ಶರಣಾಗತನಾಗಿರುವ ನನ್ನನ್ನು ಈ ಸರ್ಪದಿಂದ ಬಿಡಿಸು' ಎಂದು ಗಟ್ಟಿಯಾಗಿ ಕೂಗಿಕೊಂಡನು. ॥ ೬ ॥ ನಂದಗೋಪನ ಕೂಗನ್ನು ಕೇಳಿ ಗೋಪರೆಲ್ಲರೂ ಗಡಿಬಿಡಿಯಿಂದ ಎದ್ದು ನೋಡುತ್ತಾರೆ - ನಂದರಾಜನು ಹೆಬ್ಬಾವಿನ ಬಾಯಿಗೆ ಸಿಲುಕಿಕೊಂಡಿರುವನು. ಇದರಿಂದ ಭ್ರಾಂತರಾದ ಅವರು ಕೊಳ್ಳಿಗಳಿಂದ ಆ ಸರ್ಪವನ್ನು ಹೊಡೆಯತೊಡಗಿದರು. ॥ ೭ ॥

ಅಲಾತೈರ್ದಹ್ಯಮಾನೋಽಪಿ ನಾಮುಂಚತ್ತಮುರಂಗಮಃ ।
ತಮಸ್ಪೃಶತ್ಪದಾಭ್ಯೇತ್ಯ ಭಗವಾನ್ ಸಾತ್ವತಾಂ ಪತಿಃ ॥ ೮ ॥

ಸ ವೈ ಭಗವತಃ ಶ್ರೀಮತ್ಪಾದಸ್ಪರ್ಶಹತಾಶುಭಃ ।
ಭೇಜೇ ಸರ್ಪವಪುರ್ಹಿತ್ವಾ ರೂಪಂ ವಿದ್ಯಾಧರಾರ್ಚಿತಮ್ ॥ ೯ ॥

ತಮಪೃಚ್ಛದ್ಧೃಷೀಕೇಶಃ ಪ್ರಣತಂ ಸಮುಪಸ್ಥಿತಮ್ ।
ದೀಪ್ಯಮಾನೇನ ವಪುಷಾ ಪುರುಷಂ ಹೇಮಮಾಲಿನಮ್ ॥ ೧೦ ॥

ಕೋ ಭವಾನ್ ಪರಯಾ ಲಕ್ಷ್ಮ್ಯಾ ರೋಚತೇಽದ್ಭುತದರ್ಶನಃ ।
ಕಥಂ ಜುಗುಪ್ಸಿತಾಮೇತಾಂ ಗತಿಂ ವಾ ಪ್ರಾಪಿತೋಽವಶಃ ॥ ೧೧ ॥

ಸರ್ಪ ಉವಾಚ

ಅಹಂ ವಿದ್ಯಾಧರಃ ಕಶ್ಚಿತ್ ಸುದರ್ಶನ ಇತಿ ಶ್ರುತಃ ।
ಶ್ರಿಯಾ ಸ್ವರೂಪಸಂಪತ್ತ್ಯಾ ವಿಮಾನೇನಾಚರಂ ದಿಶಃ ॥ ೧೨ ॥

ಋಷೀನ್ವಿರೂಪಾನಂಗಿರಸಃ ಪ್ರಾಹಸಂ ರೂಪದರ್ಪಿತಃ ।
ತೈರಿಮಾಂ ಪ್ರಾಪಿತೋ ಯೋನಿಂ ಪ್ರಲಬ್ಧೈಃ ಸ್ವೇನ ಪಾಪ್ಮನಾ ॥ ೧೩ ॥

ಶಾಪೋ ಮೇಽನುಗ್ರಹಾಯೈವ ಕೃತಸ್ತೈಃ ಕರುಣಾತ್ಮಭಿಃ ।
ಯದಹಂ ಲೋಕಗುರುಣಾ ಪದಾ ಸ್ಪೃಷ್ಟೋ ಹತಾಶುಭಃ ॥ ೧೪ ॥

ತಂ ತ್ವಾಹಂ ಭವಭೀತಾನಾಂ ಪ್ರಪನ್ನಾನಾಂ ಭಯಾಪಹಮ್ ।
ಆಪೃಚ್ಛೇ ಶಾಪನಿರ್ಮುಕ್ತಃ ಪಾದಸ್ಪರ್ಶಾದಮೀವಹನ್ ॥ ೧೫ ॥

ಪ್ರಪನ್ನೋಽಸ್ಮಿ ಮಹಾಯೋಗಿನ್ ಮಹಾಪುರುಷ ಸತ್ಪತೇ ।
ಅನುಜಾನೀಹಿ ಮಾಂ ದೇವ ಸರ್ವಲೋಕೇಶ್ವರೇಶ್ವರ ॥ ೧೬ ॥

ಆದರೆ ಕೊಳ್ಳಿಗಳಿಂದ ಹೊಡೆಯುತ್ತಿದ್ದರೂ, ಬೆಂಕಿಯಿಂದ ಸುಡುತ್ತಿದ್ದರೂ ಆ ಅಜಗರವು ನಂದನನ್ನು ಬಿಡಲೇ ಇಲ್ಲ. ಆಗ ಭಕ್ತವತ್ಸಲನಾದ ಭಗವಾನ್ ಶ್ರೀಕೃಷ್ಣನು ಮುಂದೆ ಬಂದು ತನ್ನ ಕಾಲಿನಿಂದ ಅದನ್ನು ಸ್ಪರ್ಶಿಸಿದನು. ॥ ೮ ॥ ಭಗವಂತನ ಶ್ರೀ ಚರಣಸ್ಪರ್ಶ ವಾಗುತ್ತಲೇ ಸರ್ಪದ ಸಮಸ್ತ ಪಾಪಗಳು ಸುಟ್ಟು ಬೂದಿಯಾದುವು. ಆ ಕ್ಷಣದಲ್ಲೇ ಅದಕ್ಕೆ ಸರ್ಪರೂಪವು ಹೋಗಿ ವಿದ್ಯಾಧರರಿಂದ ಅರ್ಚಿಸಲ್ಪಡುವ ಸರ್ವಾಂಗಸುಂದರವಾದ ರೂಪವುಂಟಾಯಿತು. ॥ ೯ ॥ ಸುಂದರವಾದ ಶರೀರದಿಂದ ದೇದೀಪ್ಯನಾಗಿ ಕಾಣುತ್ತಿದ್ದ, ಸುವರ್ಣಮಯವಾದ ಹಾರಗಳನ್ನು ಧರಿಸಿದ್ದ ಆವನು ಶ್ರೀಕೃಷ್ಣನಿಗೆ ದೀರ್ಘದಂಡ ನಮಸ್ಕಾರ ಮಾಡಿ ಕೈಜೋಡಿಸಿಕೊಂಡು ನಿಂತನು. ಆ ದಿವ್ಯಪುರುಷನನ್ನು ಹೃಷೀಕೇಶನು ಪ್ರಶ್ನಿಸಿದನು. ॥ ೧೦ ॥ ದಿವ್ಯಪುರುಷನೇ! ನೀನಾರು? ಶ್ರೇಷ್ಠವಾದ ಕಾಂತಿಯಿಂದ ಅದ್ಭುತರೂಪನಾಗಿ ಕಾಣುತ್ತಿರುವೆ. ನಿನಗೆ ಈ ಅತ್ಯಂತ ನಿಂದನೀಯವಾದ ಅಜಗರಯೋನಿಯು ಹೇಗೆ ದೊರೆಯಿತು? ಅನಿವಾರ್ಯವಾಗಿ ಈ ಜನ್ಮವನ್ನು ನೀನು ಹೊಂದಿರಬೇಕು. ॥ ೧೧ ॥

**ಸರ್ಪಶರೀರದಿಂದ ಹೊರಬಂದ ದಿವ್ಯಪುರುಷನು ಹೇಳುತ್ತಾನೆ** ಭಗವಂತ! ಹಿಂದೆ ನಾನು ಸುದರ್ಶನನೆಂಬ ವಿಖ್ಯಾತ ವಿದ್ಯಾಧರನಾಗಿದ್ದೆ. ನನ್ನಲ್ಲಿ ರೂಪಸಂಪತ್ತೂ, ಧನಸಂಪತ್ತೂ ಅಪಾರವಾಗಿತ್ತು. ಇದರಿಂದ ನಾನು ವಿಮಾನದಲ್ಲಿ ಕುಳಿತು ಎಲ್ಲೆಡೆಗಳಲ್ಲಿಯೂ ಸ್ವೇಚ್ಛೆಯಿಂದ ಸಂಚರಿಸುತ್ತಿದ್ದೆ. ॥ ೧೨ ॥ ಹೀಗೆ ಸಂಚರಿಸುತ್ತಿದ್ದಾಗ ಒಮ್ಮೆ ನಾನು ಅಂಗಿರಸ ಗೋತ್ರದ ಅತ್ಯಂತ ಕುರೂಪಿಗಳಾದ ಋಷಿಗಳನ್ನು ನೋಡಿದೆನು. ಸೌಂದರ್ಯಮದದಿಂದ ನಾನು ಆ ಮಹರ್ಷಿಗಳನ್ನು ನೋಡಿ ಅಪಹಾಸ್ಯಮಾಡಿದೆ. ನನ್ನ ಈ ಅಪರಾಧದಿಂದ ಕುಪಿತರಾದ ಮಹರ್ಷಿಗಳು ಅಜಗರ ಸರ್ಪದ ಯೋನಿಯಲ್ಲಿ ಹುಟ್ಟುವಂತೆ ಶಪಿಸಿದರು. ಅದು ನನ್ನ ಪಾಪದ ಫಲವೇ ಆಗಿತ್ತು. ॥ ೧೩ ॥ ನಿಜವಾಗಿ ಹೇಳುವುದಾದರೆ ದಯಾಳುಗಳಾದ ಆ ಋಷಿಗಳು ನನ್ನನ್ನು ಅನುಗ್ರಹಿಸಲೆಂದೇ ಆ ಶಾಪವನ್ನಿತ್ತರು. ಅದರಿಂದ ಇಂದು ನಾನು ಲೋಕಗುರುವಾದ ನಿನ್ನ ದಿವ್ಯ ಪಾದಸ್ಪರ್ಶವನ್ನು ಪಡೆದು ಸಮಸ್ತ ಪಾಪಗಳಿಂದ ಮುಕ್ತನಾದೆನಲ್ಲ! ॥ ೧೪ ॥ ಸಮಸ್ತ ಪಾಪಗಳನ್ನು ನಾಶಮಾಡುವಂತಹ ಸ್ವಾಮಿಯೇ! ಹುಟ್ಟು ಸಾವುಗಳ ರೂಪವಾದ ಸಂಸಾರಕ್ಕೆ ಭಯಗೊಂಡು ನಿನ್ನಲ್ಲಿ ಶರಣಾಗತರಾದರೆ ನೀನು ಎಲ್ಲ ಭಯಗಳಿಂದ ಪಾರುಮಾಡುವೆ. ಈಗ ನಾನು ನಿನ್ನ ಚರಣಸ್ಪರ್ಶದಿಂದಲೆ ಶಾಪಮುಕ್ತನಾಗಿರುವೆನು. ॥ ೧೫ ॥ ಭಕ್ತವತ್ಸಲನೇ! ಮಹಾಯೋಗೇಶ್ವರ ಪುರುಷೋತ್ತಮನೇ! ನಾನು ನಿನಗೆ ಶರಣಾಗಿದ್ದೇನೆ. ಇಂದ್ರಾದಿ ಸಮಸ್ತ ಲೋಕೇಶ್ವರರಿಗೂ ಪರಮೇಶ್ವರನಾದವನೇ! ಸ್ವಯಂ ಪ್ರಕಾಶನಾದ ಪರಮಾತ್ಮನೇ! ನನಗೆ ನನ್ನ ಲೋಕಕ್ಕೆ ಹೋಗಲು ಅನುಮತಿಯನ್ನು ದಯಪಾಲಿಸು. ॥ ೧೬ ॥ ಅಚ್ಯುತನೇ! ನಿನ್ನ ದರ್ಶನ ಮಾತ್ರದಿಂದಲೇ ನಾನು ಬ್ರಾಹ್ಮಣರ ಶಾಪದಿಂದ ಮುಕ್ತನಾದೆನು. ಇದು ಆಶ್ಚರ್ಯದ ಸಂಗತಿಯೇನಲ್ಲ. ಏಕೆಂದರೆ, ನಿನ್ನ ನಾಮೋಚ್ಚಾರಗೈದವನು ತನ್ನನ್ನು ಮತ್ತು ಶ್ರೋತೃಗಳನ್ನು ಪವಿತ್ರರಾಗಿಸುತ್ತಾನೆ.

ಬ್ರಹ್ಮದಂಡಾದ್ವಿಮುಕ್ತೋಽಹಂ ಸದ್ಯಸ್ತೇಽಚ್ಯುತ ದರ್ಶನಾತ್ ।
ಯನ್ನಾಮ ಗೃಹ್ಣನ್ನಖಿಲಾನ್ ಶ್ರೋತೄನಾತ್ಮಾನಮೇವ ಚ ।
ಸದ್ಯಃ ಪುನಾತಿ ಕಿಂ ಭೂಯಸ್ತಸ್ಯ ಸ್ಪೃಷ್ಟಃ ಪದಾ ಹಿ ತೇ
॥ ೧೭ ॥

ಇತ್ಯನುಜ್ಞಾಪ್ಯ ದಾಶಾರ್ಹಂ ಪರಿಕ್ರಮ್ಯಾಭಿವಂದ್ಯ ಚ ।
ಸುದರ್ಶನೋ ದಿವಂ ಯಾತಃ ಕೃಚ್ಛ್ರಾನ್ನಂದಶ್ಚ ಮೋಚಿತಃ
॥ ೧೮ ॥

ನಿಶಾಮ್ಯ ಕೃಷ್ಣಸ್ಯ ತದಾತ್ಮವೈಭವಂ
ವ್ರಜೌಕಸೋ ವಿಸ್ಮಿತಚೇತಸಸ್ತತಃ ।
ಸಮಾಪ್ಯ ತಸ್ಮಿನ್ನಿಯಮಂ ಪುನರ್ವ್ರಜಂ
ನೃಪಾಯಯುಸ್ತತ್ಕಥಯಂತ ಆದೃತಾಃ ॥ ೧೯ ॥

ಕದಾಚಿದಥ ಗೋವಿಂದೋ ರಾಮಶ್ಚಾದ್ಭುತವಿಕ್ರಮಃ ।
ವಿಜಹ್ರತುರ್ವನೇ ರಾತ್ರ್ಯಾಂ ಮಧ್ಯಗೌ ವ್ರಜಯೋಷಿತಾಮ್
॥ ೨೦ ॥

ಉಪಗೀಯಮಾನೌ ಲಲಿತಂ ಸ್ತ್ರೀಜನೈರ್ಬದ್ಧಸೌಹೃದೈಃ ।
ಸ್ವಲಂಕೃತಾನುಲಿಪ್ತಾಂಗೌ ಸ್ರಗ್ವಿಣೌ ವಿರಜೋಽಂಬರೌ
॥ ೨೧ ॥

ನಿಶಾಮುಖಂ ಮಾನಯಂತಾವುದಿತೋಡುಪತಾರಕಮ್ ।
ಮಲ್ಲಿಕಾಗಂಧಮತ್ತಾಲಿಜುಷ್ಟಂ ಕುಮುದವಾಯುನಾ
॥ ೨೨ ॥

ಜಗತುಃ ಸರ್ವಭೂತಾನಾಂ ಮನಃಶ್ರವಣಮಂಗಲಮ್ ।
ತೌ ಕಲ್ಪಯಂತೌ ಯುಗಪತ್ ಸ್ವರಮಂಡಲಮೂರ್ಚ್ಛಿತಮ್
॥ ೨೩ ॥

ಗೋಪ್ಯಸ್ತದ್ಗೀತಮಾಕರ್ಣ್ಯ ಮೂರ್ಚ್ಛಿತಾ ನಾವಿದನ್ನೃಪ ।
ಸ್ರಂಸದ್ದುಕೂಲಮಾತ್ಮಾನಂ ಸ್ರಸ್ತಕೇಶಸ್ರಜಂ ತತಃ
॥ ೨೪ ॥

ಏವಂ ವಿಕ್ರೀಡತೋಃ ಸ್ವೈರಂ ಗಾಯತೋಃ ಸಂಪ್ರಮತ್ತವತ್ ।
ಶಂಖಚೂಡ ಇತಿ ಖ್ಯಾತೋ ಧನದಾನುಚರೋಽಭ್ಯಗಾತ್
॥ ೨೫ ॥

ಹಾಗಿರುವಾಗ ನನಗಾದರೋ ನೀನು ಸಾಕ್ಷಾತ್ ನಿನ್ನ ಚರಣ ಕಮಲಗಳಿಂದ ಸ್ಪರ್ಶಿಸಿರುವೆ. ಎಂದಾಗ ನನ್ನ ಮುಕ್ತಿಯಲ್ಲಿ ಸಂದೇಹವಿದೆಯೇ ? ॥ ೧೭ ॥ ಹೀಗೆ ಸುದರ್ಶನನು ಭಗವಾನ್ ಶ್ರೀಕೃಷ್ಣನನ್ನು ಸ್ತುತಿಸುತ್ತಾ, ಪ್ರದಕ್ಷಿಣೆ ಬಂದು ಸಾಷ್ಟಾಂಗ ನಮಸ್ಕಾರ ಮಾಡಿದನು. ಮತ್ತೆ ಅವನಿಂದ ಬೀಳ್ಕೊಂಡು ತನ್ನ ಲೋಕಕ್ಕೆ ಹೊರಟು ಹೋದನು. ಇತ್ತ ನಂದಗೋಪನೂ ದೊಡ್ಡದಾದ ಆಪತ್ತಿನಿಂದ ಪಾರಾದನು. ॥ ೧೮ ॥ ರಾಜೇಂದ್ರ ! ವ್ರಜವಾಸಿಗಳೆಲ್ಲರೂ ಭಗವಾನ್ ಶ್ರೀಕೃಷ್ಣನ ಇಂತಹ ಅದ್ಭುತ ಮಹಿಮೆಯನ್ನು ನೋಡಿದಾಗ ಅವರು ಭಾರೀ ವಿಸ್ಮಯಗೊಂಡರು. ಆ ಕ್ಷೇತ್ರದಲ್ಲಿ ಕೈಗೊಂಡ ವ್ರತ-ನಿಯಮವನ್ನು ಪೂರ್ಣಗೊಳಿಸಿ ಅವರೆಲ್ಲರೂ ಪ್ರೇಮಾದರಗಳಿಂದ ಶ್ರೀಕೃಷ್ಣನ ಆ ಲೀಲೆಯನ್ನು ಕೊಂಡಾಡುತ್ತಾ ಮತ್ತೆ ವ್ರಜಕ್ಕೆ ಮರಳಿದರು. ॥ ೧೯ ॥

ಪರೀಕ್ಷಿತ ಮಹಾರಾಜ ! ಒಂದು ದಿನ ಅದ್ಭುತ ವಿಕ್ರಮನಾದ ಭಗವಾನ್ ಶ್ರೀಕೃಷ್ಣನೂ, ಬಲರಾಮನೂ ಸೇರಿ ರಾತ್ರಿಯಲ್ಲಿ ಗೋಪಿಕೆಯರೊಂದಿಗೆ ವೃಂದಾವನದಲ್ಲಿ ವಿಹರಿಸುತ್ತಿದ್ದರು.॥೨೦॥ ಭಗವಾನ್ ಶ್ರೀಕೃಷ್ಣನು ನಿರ್ಮಲವಾದ ಪೀತಾಂಬರವನ್ನೂ ಬಲರಾಮನು ನೀಲಾಂಬರವನ್ನು ಧರಿಸಿದ್ದರು. ಇಬ್ಬರ ಕೊರಳಲ್ಲಿಯೂ ಹೂವುಗಳ ಸುಂದರ ಮಾಲೆಗಳಿದ್ದು, ಶರೀರಕ್ಕೆ ಅಂಗರಾಗವನ್ನು ಸುಂಗಧಿತ ಚಂದನವನ್ನೂ ಹಚ್ಚಿಕೊಂಡು, ಅಂದವಾದ ಆಭರಣಗಳನ್ನು ತೊಟ್ಟಿದ್ದರು. ಗೋಪಿಯರು ಪ್ರೇಮಾನಂದದಿಂದ ಮಧುರವಾದ ಸ್ವರಗಳಿಂದ ಬಲರಾಮ-ಶ್ರೀಕೃಷ್ಣರ ಗುಣಗಳನ್ನು ಗಾನಮಾಡುತ್ತಿದ್ದರು. ॥ ೨೧ ॥ ಆಗತಾನೇ ಸಾಯಂಕಾಲವಾಗಿತ್ತು. ಆಕಾಶದಲ್ಲಿ ಚಂದ್ರ-ತಾರೆಗಳು ಪ್ರಕಾಶಿಸತೊಡಗಿದವು. ಮಲ್ಲಿಗೆಯ ಸುಗಂಧದಿಂದ ಮದಿಸಿದ ದುಂಬಿಗಳು ಝೇಂಕರಿಸುತ್ತಿದ್ದವು. ಜಲಾಶಯಗಳಲ್ಲಿದ್ದ ಕುಮುದಪುಷ್ಪಗಳ ಸುಗಂಧವನ್ನು ಹೊತ್ತುಕೊಂಡು ತಂಗಾಳಿಯು ಮಂದಮಂದವಾಗಿ ಬೀಸುತ್ತಾ ಇದೆ. ಅಂತಹ ವಾತಾವರಣವನ್ನು ಶ್ಲಾಘಿಸುತ್ತಾ ಶ್ರೀಕೃಷ್ಣ-ಬಲರಾಮರು ಜೊತೆಗೂಡಿ ಆರೋಹಣ ಅವರೋಹಣ ಕ್ರಮದಲ್ಲಿ ರಾಗಾಲಾಪನೆ ಮಾಡತೊಡಗಿದರು. ಅವರ ದೈವಗಾನವು ಜಗತ್ತಿನ ಸಮಸ್ತ ಪ್ರಜೆಗಳಿಗೂ ಆನಂದದಾಯಕವಾಗಿತ್ತು. ॥ ೨೨-೨೩ ॥ ಅವರ ದಿವ್ಯಗಾನವನ್ನು ಕೇಳಿ ಗೋಪಿಕೆಯರು ಮೈಮರೆತು ಹೋದರು. ಅವರಿಗೆ ಉಟ್ಟ ಸೀರೆಯು ಜಾರಿ ಹೋಗುತ್ತಿರುವುದರ ಕಡೆಗೆ, ಮುಡಿಯು ಬಿಚ್ಚಿಹೋಗಿ, ಪುಷ್ಪಮಾಲೆಗಳು ಹರಿದು ಬೀಳುವುದರ ಕಡೆಗೆ ಪರಿವೆಯೇ ಇರಲಿಲ್ಲ. ॥ ೨೪ ॥

ಹೀಗೆ ಬಲರಾಮ-ಶ್ರೀಕೃಷ್ಣರು ಸ್ವೇಚ್ಛೆಯಿಂದ ಉನ್ಮತ್ತರಂತೆ ಕರ್ಣಾನಂದಕರವಾಗಿ ಹಾಡುತ್ತಿದ್ದಾಗ ಶಂಖಚೂಡನೆಂಬ ಹೆಸರಿನ ಕುಬೇರನ ಅನುಚರನಾದ ಯಕ್ಷನೊಬ್ಬನು ಅಲ್ಲಿಗೆ ಬಂದನು.॥ ೨೫ ॥ ಪರೀಕ್ಷಿತನೇ ! ರಾಮ-ಕೃಷ್ಣರಿಬ್ಬರೂ ನೋಡುತ್ತಿರುವಂತೆಯೇ ಆ ಶಂಖಚೂಡ ಯಕ್ಷನು - ಶ್ರೀಕೃಷ್ಣನನ್ನೇ ಏಕಮಾತ್ರ ಸ್ವಾಮಿಯೆಂದು ಭಾವಿಸಿದ್ದ ಗೋಪಿಯರನ್ನು ಎತ್ತಿಕೊಂಡು ನಿಃಶಂಕನಾಗಿ ಉತ್ತರ

ತಯೋರ್ನಿರೀಕ್ಷತೋ ರಾಜಂಸ್ತನ್ನಾಥಂ ಪ್ರಮದಾಜನಮ್ ।
ಕ್ರೋಶಂತಂ ಕಾಲಯಾಮಾಸ ದಿಶ್ಯುದೀಚ್ಯಾಮಶಂಕಿತಃ ॥ ೨೬ ॥

ಕ್ರೋಶಂತಂ ಕೃಷ್ಣ ರಾಮೇತಿ ವಿಲೋಕ್ಯ ಸ್ವಪರಿಗ್ರಹಮ್ ।
ಯಥಾ ಗಾ ದಸ್ಯುನಾ ಗ್ರಸ್ತಾ ಭ್ರಾತರಾವನ್ವಧಾವತಾಮ್ ॥ ೨೭ ॥

ಮಾ ಭೈಷ್ಟೇತ್ಯಭಯಾರಾವೌ ಶಾಲಹಸ್ತೌ ತರಸ್ವಿನೌ ।
ಆಸೇದತುಸ್ತಂ ತರಸಾ ತ್ವರಿತಂ ಗುಹ್ಯಕಾಧಮಮ್ ॥ ೨೮ ॥

ಸ ವೀಕ್ಷ್ಯ ತಾವನುಪ್ರಾಪ್ತೌ ಕಾಲಮೃತ್ಯೂ ಇವೋದ್ವಿಜನ್ ।
ವಿಸೃಜ್ಯ ಸ್ತ್ರೀಜನಂ ಮೂಢಃ ಪ್ರಾದ್ರವಜ್ಜೀವಿತೇಚ್ಛಯಾ ॥ ೨೯ ॥

ತಮನ್ವಧಾವದ್ಗೋವಿಂದೋ ಯತ್ರ ಯತ್ರ ಸ ಧಾವತಿ ।
ಜಿಹೀರ್ಷುಸ್ತಚ್ಛಿರೋರತ್ನಂ ತಸ್ಥೌ ರಕ್ಷನ್ ಸ್ತ್ರಿಯೋ ಬಲಃ ॥ ೩೦ ॥

ಅವಿದೂರ ಇವಾಭ್ಯೇತ್ಯ ಶಿರಸ್ತಸ್ಯ ದುರಾತ್ಮನಃ ।
ಜಹಾರ ಮುಷ್ಟಿನೈವಾಂಗ ಸಹಚೂಡಾಮಣಿಂ ವಿಭುಃ ॥ ೩೧ ॥

ಶಂಖಚೂಡಂ ನಿಹತ್ಯೈವಂ ಮಣಿಮಾದಾಯ ಭಾಸ್ವರಮ್ ।
ಅಗ್ರಜಾಯಾದದಾತ್ ಪ್ರೀತ್ಯಾ ಪಶ್ಯಂತೀನಾಂ ಚ ಯೋಷಿತಾಮ್ ॥ ೩೨ ॥

ದಿಕ್ಕಿನ ಕಡೆಗೆ ಓಡಿಹೋದನು. ಆ ಗೋಪಿಯರು ಅಳುತ್ತಾ ಕೂಗುತ್ತಿದ್ದರು. ॥ ೨೬ ॥ ಗೋವುಗಳನ್ನು ಕಳ್ಳರು ಅಪಹರಿಸಿಕೊಂಡು ಹೋಗುವಂತೆಯೇ ಆ ಯಕ್ಷನು ತಮ್ಮ ಪ್ರೇಯಸಿಯರನ್ನು ಕದ್ದುಕೊಂಡು ಹೋಗುತ್ತಿದ್ದಾನೆ ಮತ್ತು ಅವರು ಹಾ ಕೃಷ್ಣ! ಬಲರಾಮ! ರಕ್ಷಿಸು, ರಕ್ಷಿಸು ಎಂದು ಕೂಗುತ್ತಿರುವುದನ್ನು ನೋಡಿದ ಸಹೋದರರಿಬ್ಬರೂ ಅವನೆಡೆಗೆ ಓಡಿದರು. ॥ ೨೭ ॥ ಹೆದರ ಬೇಡಿರಿ, ಹೆದರ ಬೇಡಿರಿ ಎಂದು ಅಭಯ ಮಾತನ್ನು ಹೇಳುತ್ತಾ ಕೈಯಲ್ಲಿ ಸಾಲವೃಕ್ಷಗಳನ್ನೆತ್ತಿಕೊಂಡು ವೇಗವಾಗಿ ಕ್ಷಣಾರ್ಧದಲ್ಲಿ ಆ ನೀಚನಾದ ಯಕ್ಷನ ಬಳಿಗೆ ತಲುಪಿದರು. ॥ ೨೮ ॥ ರಾಮ-ಕೃಷ್ಣರಿಬ್ಬರೂ ಕಾಲ ಮತ್ತು ಮೃತ್ಯುವಿನಂತೆ ತನ್ನ ಬಳಿಗೆ ಬಂದಿರುವುದನ್ನು ನೋಡಿದ ಮೂಢನಾದ ಶಂಖಚೂಡನು ಭಯಗೊಂಡನು. ಅವನು ಗೋಪಿಯರನ್ನು ಅಲ್ಲೇ ಬಿಟ್ಟು ಪ್ರಾಣಗಳನ್ನು ಉಳಿಸಿಕೊಳ್ಳಲು ಅಲ್ಲಿಂದ ಓಡಿಹೋದನು. ॥ ೨೯ ॥ ಆಗ ಗೋಪಿಕಾಸ್ತ್ರೀಯರನ್ನು ರಕ್ಷಿಸಲಿಕ್ಕಾಗಿ ಬಲರಾಮನು ಅಲ್ಲೇ ನಿಂತನು. ಆದರೆ ಭಗವಾನ್ ಶ್ರೀಕೃಷ್ಣನು ಶಂಖಚೂಡನು ಓಡಿದಲ್ಲಿಗೆ ಓಡುತ್ತಾ ಹೋಗಿ ಅವನ ಶಿರದಲ್ಲಿದ್ದ ಚೂಡಾಮಣಿಯನ್ನು ಕಿತ್ತುಕೊಳ್ಳಲು ಬಯಸಿದನು. ॥ ೩೦ ॥ ಸ್ವಲ್ಪ ದೂರಹೋಗುತ್ತಲೇ ಭಗವಂತನು ಅವನನ್ನು ಹಿಡಿದುಕೊಂಡು ಆ ದುಷ್ಟನ ಶಿರದ ಮೇಲೆ ಬಲವಾಗಿ ಒಂದು ಗುದ್ದಿದನು ಮತ್ತು ಚೂಡಾಮಣಿಯೊಂದಿಗೆ ಅವನ ರುಂಡ-ಮುಂಡಗಳನ್ನು ಬೇರ್ಪಡಿಸಿದನು. ॥ ೩೧ ॥ ಹೀಗೆ ಭಗವಾನ್ ಶ್ರೀಕೃಷ್ಣನು ಶಂಖಚೂಡನನ್ನು ಕೊಂದು, ಆ ಹೊಳೆಯುವ ಚೂಡಾಮಣಿಯನ್ನು ಎತ್ತಿಕೊಂಡು ಮರಳಿದನು. ಎಲ್ಲ ಗೋಪಿಕೆಯರೂ ನೋಡುತ್ತಿರುವಂತೆಯೇ ಆ ಮಣಿಯನ್ನು ಅಣ್ಣನಾದ ಬಲರಾಮನಿಗೆ ಒಪ್ಪಿಸಿದನು. ॥ ೩೨ ॥

ಮೂವತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೩೪ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಶಂಖಚೂಡವಧೋ ನಾಮ ಚತುಸ್ತ್ರಿಂಶೋಽಧ್ಯಾಯಃ ॥ ೩೪ ॥

# ಮೂವತ್ತೈದನೆಯ ಅಧ್ಯಾಯ

## ಯುಗಳ ಗೀತೆ

*ಶ್ರೀಶುಕ ಉವಾಚ*

ಗೋಪ್ಯಃ ಕೃಷ್ಣೇ ವನಂ ಯಾತೇ ತಮನುದ್ರುತಚೇತಸಃ ।
ಕೃಷ್ಣಲೀಲಾಃ ಪ್ರಗಾಯಂತ್ಯೋನಿನ್ಯುರ್ದುಃಖೇನ ವಾಸರಾನ್ ॥ ೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಎಲೈ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಅನುದಿನವೂ ಹಸುಗಳನ್ನು ಮೇಯಿಸಲು ಬೆಳಗಾದೊಡನೆಯೇ ವನಕ್ಕೆ ಹೊರಟು ಹೋಗುತ್ತಿದ್ದನು. ವ್ರಜದಲ್ಲಿದ್ದ ಗೋಪಿಯರ ಮನಸ್ಸೂ ಅವನೊಂದಿಗೇ ಹೊರಟು ಹೋಗುತ್ತಿತ್ತು. ಅವರ ಮನಸ್ಸು ಶ್ರೀಕೃಷ್ಣನನ್ನು ಚಿಂತಿಸುತ್ತಾ, ಅವನ ಲೀಲಾಪ್ರಸಂಗಗಳನ್ನು ಯಾವಾಗಲೂ ಹಾಡುತ್ತಾ ಇದ್ದರು. ಹೀಗೆ ಅವರು ಹಗಲನ್ನು ಬಹಳ ಕಷ್ಟದಿಂದ ಕಳೆಯುತ್ತಿದ್ದರು. ॥ ೧ ॥

*ಗೋಪ್ಯ ಊಚುಃ*

**ವಾಮಬಾಹುಕೃತವಾಮಕಪೋಲೋ**
**ವಲ್ಗಿತಭ್ರುರಧರಾರ್ಪಿತವೇಣುಮ್ ।**
**ಕೋಮಲಾಂಗುಲಿಭಿರಾಶ್ರಿತಮಾರ್ಗಂ**
**ಗೋಪ್ಯ ಈರಯತಿ ಯತ್ರ ಮುಕುಂದಃ ॥ ೨ ॥**

**ವ್ಯೋಮಯಾನವನಿತಾಃ ಸಹ ಸಿದ್ಧೈ-**
**ರ್ವಿಸ್ಮಿತಾಸ್ತದುಪಧಾರ್ಯ ಸಲಜ್ಜಾಃ ।**
**ಕಾಮಮಾರ್ಗಣಸಮರ್ಪಿತಚಿತ್ತಾಃ**
**ಕಶ್ಮಲಂ ಯಯುರಪಸ್ಮೃತನೀವ್ಯಃ ॥ ೩ ॥**

**ಗೋಪಿಯರು ಪರಸ್ಪರ ಹೇಳುತ್ತಾರೆ** – ಎಲೈ ಸಖಿಯೇ ! ನಮ್ಮ ಮುಕುಂದನು ಕೊಳಲನ್ನು ಹಿಡಿದು, ಎಡತೋಳನ್ನು ಎಡಕೆನ್ನೆಗೆ ತಾಗಿಸಿ, ಕೊಳಲನ್ನು ತುಟಿಗೆ ತಗುಲಿಸಿ ಆರೋಹಣ ಅವರೋಹಣ ಮಾರ್ಗವನ್ನು ಅನುಸರಿಸಿ ಹುಬ್ಬನ್ನು ಹಾರಿಸುತ್ತಾ ಮೃದುವಾದ ಬೆರಳುಗಳ ಚಾಲನೆಯಿಂದ ಕೊಳಲನ್ನು ನುಡಿಸುವನು. ವಿಮಾನ ಸಂಚಾರಿಗಳಾದ ಸಿದ್ಧಸ್ತ್ರೀಯರು ತಮ್ಮ ಪತಿಗಳೊಡನೆ ಕರ್ಣಾನಂದಕರವಾದ ಆ ವೇಣುಗಾನವನ್ನು ಕೇಳಿ ಆಚ್ಚರಿಗೊಳ್ಳುವರು. ವೇಣುಗಾನವನ್ನು ಕೇಳಿ ಮನ್ಮಥನ ಬಾಣಗಳ ಲಕ್ಷ್ಯಕ್ಕೆ ಮನಸ್ಸೊಡ್ಡಿದ ಅವರು ಲಜ್ಜೆಗೊಳ್ಳುವರು. ವೇಣುಗಾನ ಶ್ರವಣದಿಂದ ಮೈಮರೆತ ಅವರಿಗೆ ಸೀರೆಯ ಉಡಿಗಂಟು ಬಿಚ್ಚಿ ಹೋಗಿರುವುದೂ ತಿಳಿಯುವುದಿಲ್ಲ. ಹೀಗೆ ನಮ್ಮ ಇನಿಯನ ವೇಣು ಗಾನವು ನಮ್ಮನ್ನು ಮಾತ್ರವೇ ಅಲ್ಲದೆ ಆಕಾಶಸಂಚಾರಿಗಳಾದ ದೇವತೆಗಳನ್ನೂ ವಿಮೋಹಗೊಳಿಸುವುದಾಗಿದೆ. ॥ ೨-೩ ॥

**ಹಂತ ಚಿತ್ರಮಬಲಾಃ ಶೃಣುತೇದಂ**
**ಹಾರಹಾಸ ಉರಸಿ ಸ್ಥಿರವಿದ್ಯುತ್ ।**
**ನಂದಸೂನುರಯಮಾರ್ತಜನಾನಾಂ**
**ನರ್ಮದೋ ಽ ಯರ್ಹಿ ಕೂಜಿತವೇಣುಃ ॥ ೪ ॥**

**ವೃಂದಶೋ ವ್ರಜವೃಷಾ ಮೃಗಗಾವೋ**
**ವೇಣುವಾದ್ಯಹೃತಚೇತಸ ಆರಾತ್ ।**
**ದಂತದಷ್ಟಕವಲಾ ಧೃತಕರ್ಣಾ**
**ನಿದ್ರಿತಾ ಲಿಖಿತಚಿತ್ರಮಿವಾಸನ್ ॥ ೫ ॥**

ಮತ್ತೊಬ್ಬ ಗೋಪಿಯು ಹೇಳುತ್ತಾಳೆ – ಸಖಿಯರೇ ! ನಾನು ಮತ್ತೊಂದು ಆಶ್ಚರ್ಯಕರವಾದ ವಿಚಾರವನ್ನು ಹೇಳುವೆನು, ಕೇಳಿರಿ. ಮುತ್ತಿನಹಾರದಂತೆ ಶುಭ್ರವಾದ ನಗೆಯುಳ್ಳ, ವಕ್ಷಸ್ಥಳ ದಲ್ಲಿ ಮಿಂಚಿನಂತೆ ಹೊಳೆಯುವ ಲಕ್ಷ್ಮೀದೇವಿಯನ್ನು ಹೊಂದಿ ರುವ, ಆರ್ತರಾದ ಭಕ್ತರಿಗೆ ಸುಖವನ್ನುಂಟುಮಾಡುವ, ನಂದ ಗೋಪನ ಮಗನಾದ ಶ್ರೀಕೃಷ್ಣನು ಕೊಳಲನ್ನು ನುಡಿಸಲು ಪ್ರಾರಂಭಿಸಿದರೆ, ಗುಂಪು-ಗುಂಪಾಗಿ ಮೇಯುತ್ತಿದ್ದ ವ್ರಜದ ಎತ್ತುಗಳು, ಮೃಗಗಳೂ, ಹಸುಗಳು ಆ ವೇಣುಗಾನದಿಂದ ಮೈಮರೆತು ಮೇಯುವುದನ್ನು ಹಾಗೆಯೇ ನಿಲ್ಲಿಸಿಬಿಡುತ್ತಿದ್ದವು. ಹಲ್ಲುಗಳಲ್ಲಿ ಕಚ್ಚಿಕೊಂಡ ಹುಲ್ಲನ್ನು ಅಗಿಯದೆ, ನುಂಗದೆ ಹಾಗೇ ನಿಂತಿರುತ್ತಿದ್ದವು. ಕಿವಿಗಳನ್ನು ನಿಮಿಸಿಕೊಂಡು ಗಾನಸುಧೆಯನ್ನು ಪಾನಮಾಡುತ್ತಿವೆಯೋ ಎಂಬಂತೆ ಚಿತ್ತಾರದಂತೆ ಸ್ಥಿರವಾಗಿ ನಿಲ್ಲು ತ್ತವೆ. ಅವರ ಈ ಸ್ಥಿತಿಯು ಸ್ವಾಭಾವಿಕವೇ ಆಗಿದೆ. ಏಕೆಂದರೆ, ಈ ಮುರಲಿಗಾನವು ಅವರ ಚಿತ್ತವನ್ನು ಅಪಹರಿಸುತ್ತದೆ. ॥ ೪-೫ ॥

**ಬರ್ಹಿಣಸ್ತಬಕಧಾತುಪಲಾಶೈ-**
**ರ್ಬದ್ಧಮಲ್ಲಪರಿಬರ್ಹವಿಡಂಬಃ ।**
**ಕರ್ಹಿಚಿತ್ ಸಬಲ ಆಲಿ ಸ ಗೋಪೈ-**
**ರ್ಗಾಃ ಸಮಾಹ್ವಯತಿ ಯತ್ರ ಮುಕುಂದಃ ॥ ೬ ॥**

**ತರ್ಹಿ ಭಗ್ನಗತಯಃ ಸರಿತೋ ವೈ**
**ತತ್ಪದಾಂಬುಜರಜೋಽನಿಲನೀತಮ್ ।**
**ಸ್ಪೃಹಯತೀರ್ವಯಮಿವಾಬಹುಪುಣ್ಯಾಃ**
**ಪ್ರೇಮವೇಪಿತಭುಜಾಃ ಸ್ತಿಮಿತಾಪಃ ॥ ೭ ॥**

ಮತ್ತೊಬ್ಬ ಗೋಪಿಯು ಹೇಳುತ್ತಾಳೆ – ಗೆಳತಿಯರೇ ! ಕೆಲವೊಮ್ಮೆ ನಮ್ಮ ಮುದ್ದು ಇನಿಯನು ನವಿಲಗರಿಗಳಿಂದಲೂ, ಹೂವಿನ ಗೊಂಚಲುಗಳಿಂದಲೂ, ಹರಿದಳವೇ ಮುಂತಾದ ಬಣ್ಣ ಗಳಿಂದಲೂ, ಚಿಗುರೆಲೆಗಳಿಂದಲೂ ಶರೀರವನ್ನು ಸಿಂಗರಿಸಿಕೊಂಡು ಜಟ್ಟಿಯಂತೆ ಕಾಣುತ್ತಾ, ಬಲರಾಮನೊಂದಿಗೆ ಕೊಳಲನ್ನೂದುತ್ತಾ ಗೋಪಾಲಕರೊಡನೆ ಆಕಳುಗಳನ್ನು ಅವರ ಹೆಸರೆತ್ತಿ ಕರೆಯುತ್ತಾನೆ. ಆ ಸಮಯದಲ್ಲಿ ವೇಣುಗಾನದ ಮಾಧುರ್ಯವನ್ನು ಕೇಳಿದ ನದಿಗಳು ಸ್ತಬ್ಧರಾಗುತ್ತವೆ. ಮುಂದಕ್ಕೆ ಹರಿಯುವುದೇ ಇಲ್ಲ, ವಾಯುವು ನಮ್ಮ ಇನಿಯನ ಪಾದಧೂಳಿಯನ್ನು ತಂದು ತಮ್ಮ ಮೇಲೆ ಹಾಕುವನೆಂದು ಭಾವಿಸಿ ಸ್ಥಿರವಾಗಿ ನಿಲ್ಲುತ್ತವೆ. ಆದರೆ ಆ ನದಿಗಳು ನಮ್ಮಂತೆಯೇ ಭಾಗ್ಯಹೀನರು. ತೆರೆಗಳೆಂಬ ತೋಳು ಗಳನ್ನು ನಾಲ್ಕಾರುಬಾರಿ ಚಾಚಿದರೂ ಅವುಗಳಿಗೆ ಭಗವಂತನ ಪಾದಧೂಳಿಯು ಸಿಗದೆ ಕೊನೆಗೆ ಪ್ರೇಮಾವೇಶದಿಂದ ತಟಸ್ಥರಾಗಿ ನಿಂತು ಬಿಡುತ್ತವೆ. ॥ ೬-೭ ॥

ಅನುಚರೈಃ ಸಮನುವರ್ಣಿತವೀರ್ಯ
ಆದಿಪೂರುಷ ಇವಾಚಲಭೂತಿಃ ।
ವನಚರೋ ಗಿರಿತಟೇಷು ಚರಂತೀ-
ರ್ವೇಣುನಾऽऽಹ್ವಯತಿ ಗಾಃ ಸ ಯದಾ ಹಿ ॥ ೮ ॥

ವನಲತಾಸ್ತರವ ಆತ್ಮನಿ ವಿಷ್ಣುಂ
ವ್ಯಂಜಯಂತ್ಯ ಇವ ಪುಷ್ಪ ಫಲಾಢ್ಯಾಃ ।
ಪ್ರಣತಭಾರವಿಟಪಾ ಮಧುಧಾರಾಃ
ಪ್ರೇಮಹೃಷ್ಟ ತನವಃ ಸಸೃಜುಃ ಸ್ಮ ॥ ೯ ॥

ಇನ್ನೊಬ್ಬ ಗೋಪಿಯು ಹೇಳುತ್ತಾಳೆ - ಸಖಿಯೇ ! ಅನಂತವಾದ ಮತ್ತು ಅಚಿಂತ್ಯವಾದ ಐಶ್ವರ್ಯಕ್ಕೆ ಸ್ವಾಮಿಯಾದ ಶ್ರೀಮನ್ನಾರಾಯಣನ ಅಪಾರಶಕ್ತಿಗಳನ್ನು ದೇವತೆಗಳು ಗಾನ ಮಾಡುತ್ತಾ ಇರುವಂತೆಯೇ ಗೊಲ್ಲಬಾಲಕರು ಕಡುಚೆಲುವನಾದ ಶ್ರೀಕೃಷ್ಣನಲೀಲಾ ಪ್ರಸಂಗಗಳನ್ನು ಗಾನಮಾಡುತ್ತಾ ಇರುತ್ತಾರೆ. ಅಂತಹ ಅಚಿಂತ್ಯ ಐಶ್ವರ್ಯಸಂಪನ್ನನಾದ ಶ್ರೀಕೃಷ್ಣನು ವೃಂದಾವನದಲ್ಲಿ ವಿಹರಿಸುವಾಗ, ಕೊಳಲನ್ನೂದುತ್ತಾ ಗೋವರ್ಧನದ ತಪ್ಪಲಲ್ಲಿ ಮೇಯುತ್ತಿದ್ದ ಹಸುಗಳ ಹೆಸರಿಡಿದು ಕರೆಯುತ್ತಿರುವನು. ಆ ವನದ ಮರ-ಗಿಡ-ಬಳ್ಳಿಗಳು ಹೂವೂ-ಹಣ್ಣುಗಳಿಂದ ಸಮೃದ್ಧವಾಗಿದ್ದು, ಅವುಗಳ ಕೊಂಬೆಗಳು ಫಲಭಾರದಿಂದ ನೆಲದವರೆಗೂ ಬಗ್ಗಿ ಶ್ರೀಕೃಷ್ಣನಿಗೆ ನಮಸ್ಕರಿಸುವಂತಿದೆ. ಆ ಲತಾ-ವೃಕ್ಷಗಳು ತನ್ನೊಳಗೆ ಭಗವಾನ್ ವಿಷ್ಣುವು ಇರುವನೆಂಬುದನ್ನು ಸೂಚಿಸುತ್ತವೋ ಎಂಬಂತೆ ಉಲ್ಲಸಿತವಾಗುತ್ತವೆ. ಆ ವೃಕ್ಷಗಳು ಪ್ರಹೃಷ್ಟವಾದ ಶರೀರವನ್ನು ಹೊಂದಿ ರೋಮಾಂಚನವಾದಂತೆ ಮಕರಂದದ ಧಾರೆಯನ್ನು ಸುರಿಸುತ್ತವೆ. ॥ ೮-೯ ॥

ದರ್ಶನೀಯತಿಲಕೋ ವನಮಾಲಾ-
ದಿವ್ಯಗಂಧತುಲಸೀಮಧುಮತ್ತೈಃ ।
ಅಲಿಕುಲೈರಲಘುಗೀತಮಭೀಷ್ಟ-
ಮಾದ್ರಿಯನ್ ಯರ್ಹಿ ಸಂಧಿತವೇಣುಃ ॥ ೧೦ ॥

ಸರಸಿ ಸಾರಸಹಂಸವಿಹಂಗಾ-
ಶ್ಚಾರುಗೀತಹೃತಚೇತಸ ಏತ್ಯ ।
ಹರಿಮುಪಾಸತ ತೇ ಯತಚಿತ್ತಾ
ಹಂತ ಮೀಲಿತದೃಶೋ ಧೃತಮೌನಾಃ ॥ ೧೧ ॥

ಮತ್ತೊಬ್ಬ ಗೋಪಿಯು ಹೇಳುತ್ತಾಳೆ - ಸಖಿಯರೇ ! ನಮ್ಮ ಇನಿಯನ ಹಣೆಯಲ್ಲಿ ದರ್ಶನೀಯವಾದ ಕಸ್ತೂರಿ ತಿಲಕವಿದೆ. ಕಂಠದಲ್ಲಿ ತುಲಸೀದಳಗಳಿಂದ ಕೂಡಿದ ವನಮಾಲೆಯಿದೆ. ಇದರ ಸುಗಂಧವನ್ನು ಆಘ್ರಾಣಿಸಿದ ದುಂಬಿಗಳು ಮತ್ತರಾಗಿ ಝೇಂಕರಿಸುತ್ತಿವೆ. ಶ್ರೀಕೃಷ್ಣನು ದುಂಬಿಗಳ ಧ್ವನಿಯನ್ನು ಅನುಸರಿಸಿ ವೇಣುವನ್ನು ನುಡಿಸುತ್ತಾನೆ. ಆ ಮುನಿಜನ ಮೋಹನ ವೇಣುಗಾನವನ್ನು ಕೇಳಿದ ಸರೋವರದಲ್ಲಿದ್ದ ಹಂಸ, ಕಾರಂಡವ ಮೊದಲಾದ ಜಲಪಕ್ಷಿಗಳ ಮನಸ್ಸೂ ಕೂಡ ಪರವಶವಾಗುತ್ತದೆ. ಅವುಗಳು ವಿವಶರಾಗಿ ಪ್ರಿಯ ಶ್ಯಾಮಸುಂದರನ ಬಳಿಗೆ ಬಂದು ಮೌನವಾಗಿ ಕುಳಿತು ಕಣ್ಣುಗಳನ್ನು ಮುಚ್ಚಿಕೊಂಡು, ಏಕಾಗ್ರಚಿತ್ತದಿಂದ ಅವನನ್ನು ಆರಾಧಿಸುವವೋ ಎಂಬಂತಿರುತ್ತದೆ. ಎಂತಹ ಆಶ್ಚರ್ಯದ ಮಾತಾಗಿದೆ ! ॥ ೧೦-೧೧ ॥

ಸಹಬಲಃ ಸ್ರಗವತಂಸವಿಲಾಸಃ
ಸಾನುಷು ಕ್ಷಿತಿಭೃತೋ ವ್ರಜದೇವ್ಯಃ ।
ಹರ್ಷಯನ್ ಯರ್ಹಿ ವೇಣುರವೇಣ
ಜಾತಹರ್ಷ ಉಪರಂಭತಿ ವಿಶ್ವಮ್ ॥ ೧೨ ॥

ಮಹದತಿಕ್ರಮಣಶಂಕಿತಚೇತಾ
ಮಂದಮಂದಮನುಗರ್ಜತಿ ಮೇಘಃ ।
ಸುಹೃದಮಭ್ಯವರ್ಷತ್ಸುಮನೋಭಿ-
ಶ್ಛಾಯಯಾ ಚ ವಿದಧತ್ ಪ್ರತಪತ್ರಮ್ ॥ ೧೩ ॥

ಇನ್ನೊಬ್ಬ ಗೋಪಿಯು ಹೇಳಿದಳು - ಗೆಳತಿಯರೇ ! ನಮ್ಮ ಶ್ಯಾಮಸುಂದರನು ಹೂಗಳ ಕರ್ಣಕುಂಡಲಗಳಿಂದ ಅಲಂಕರಿಸಿಕೊಂಡು ಬಲರಾಮನೊಂದಿಗೆ ಗೋವರ್ಧನದ ತಪ್ಪಲಿನಲ್ಲಿ ನಿಂತು ಸಮಸ್ತ ಜಗತ್ತನ್ನು ಹರ್ಷಗೊಳಿಸುತ್ತಾ ಕೊಳಲನ್ನು ನುಡಿಸುತ್ತಿರುತ್ತಾನೆ. ಕೇವಲ ನುಡಿಸುವುದು ಮಾತ್ರವಲ್ಲ, ಆನಂದತುಂದಿಲನಾಗಿ ವೇಣುಗಾನದ ಮೂಲಕ ವಿಶ್ವವನ್ನೇ ಆಲಿಂಗಿಸಿಕೊಳ್ಳುತ್ತಾನೆ. ಆ ಸಮಯದಲ್ಲಿ ಮೇಘವು ಕೊಳಲಿನ ಧ್ವನಿಯೊಂದಿಗೆ ಮೆಲ್ಲ ಮೆಲ್ಲನೆ ಗರ್ಜಿಸುತ್ತದೆ. ಶ್ರೀಕೃಷ್ಣನ ವೇಣುನಾದವು ಕೇಳದಂತೆ ನಾವು ಜೋರಾಗಿ ಗುಡುಗಿದರೆ ಶ್ರೀಕೃಷ್ಣನಿಗೆ ಅಪರಾಧವೆಸಗಿದಂತಾದೀತೆಂದು ಶಂಕಿಸಿ ಮೆಲ್ಲನೆ ಗುಡುಗುತ್ತವೆ. ಕೆಲವು ವೇಳೆ ನಮ್ಮ ಪ್ರಿಯಕರನ ಮೇಲೆ ಹೂಮಳೆಗರೆಯುತ್ತವೆ. ಕೆಲವು ಸಲ ಬಿಸಿಲಿನಿಂದ ಉಂಟಾದ ಬೇಗೆಯನ್ನು ಹೋಗಲಾಡಿಸಲು ಛತ್ರಿಯಂತೆ ಅವನ ಮೇಲೆ ಆವರಿಸಿ ಬಿಡುತ್ತವೆ. ॥ ೧೨-೧೩ ॥